# ಚಿನ್ನದ ಬೆಡಗಿನ ಬಣ್ಣದ ಮಿಂಚು





ಭಾವಚಿತ್ರ - ತೈಲವರ್ಣ

ಜೆ. ಎಸ್. ಖಂಡೇರಾವ್

ಚಿತ್ರಕಲಾ ಜಗತ್ತಿನಲ್ಲಿ ಜೆ. ಎಸ್. ಖಂಡೇರಾವ್‌ರವರದು ಮಹತ್ವದ ಹೆಸರು. ಮಕ್ಕಳ ಮನಸ್ಸಿನ ಮಾಗಿದ ವ್ಯಕ್ತಿತ್ವ. ಅವರ ಮಾತುಗಳಿವು : ''ನಮ್ಮ ಸ್ವಂತಿಕೆಯ ಸೃಜನಾತ್ಮಕ ಕಲೆಯನ್ನು ಕರಗತ ಮಾಡಿಕೊಳ್ಳುತ್ತಾ ನಮ್ಮತನವನ್ನೂ ಅದಕ್ಕಳವಡಿಸುತ್ತಾ ನಮ್ಮದೇ ಛಾಪು ಮೂಡಿಸುವುದು ಕ್ರಿಯೇಟಿವಿಟಿ. ಇದು ಎಷ್ಟೋ ವರ್ಷದ ಸಾಧನೆ ಮತ್ತು ಅನುಭವದ ಶೋಧನೆಯಿಂದ ಬರುವಂಥದು, ಅನಾಯಾಸವಾಗಿ ಬರುವುದಿಲ್ಲ.''

೧೯೬೩ರಲ್ಲಿ ಮುಂಬೈಯ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್‌ನಿಂದ ಡಿಪ್ಲೊಮಾ ಪಡೆದು, ೧೯೭೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಬಿ.ಎ. ಪದವಿ ಪಡೆದ ಖಂಡೇರಾವ್ ಅವರ ಸಾಧನೆ ಅಪಾರ. ೧೯೬೫ರಲ್ಲಿ ಖಂಡೇರಾವ್ ಗುಲಬರ್ಗಾದಲ್ಲಿ 'ದಿ ಐಡಿಯಲ್ ಫೈನ್ ಆರ್ಟ್ಸ್ ಇನ್ಸ್‌ಟಿಟ್ಯೂಟ್' ಎಂಬ ಚಿತ್ರಕಲಾ ಶಾಲೆ ತೆರೆದರು. ೪೦ ವರ್ಷಗಳ ಅನುಭವದ ಈ ಚಿತ್ರಕಲಾವಿದರನ್ನು ೧೯೮೮ರಲ್ಲಿ ಕರ್ನಾಟಕ ಲಲಿತ ಕಲಾ ಅಕಾಡೆಮಿ, ೧೯೯೫ರಲ್ಲಿ ಕೇಂದ್ರ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದವು. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ , ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ , ಹಂಪಿ ವಿಶ್ವವಿದ್ಯಾಲಯದ ನಾಡೋಜ ಪ್ರಶಸ್ತಿ , ಇತ್ಯಾದಿಗಳು ಇವರದಾಗಿವೆ.

■ ಶಂಕರಯ್ಯ ಆರ್. ಘಂಟಿ



ಮುರ್ಗಮುರ್ಗ - ತೈಲವರ್ಣ



ಮುರ್ಗಮುರ್ಗ - ತೈಲವರ್ಣ



ಭೂ ದೃಶ್ಯ - ತೈಲವರ್ಣ

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಶ್ರೀಹರಿ, ಜಿ. ಎಂ. ಬೊಮ್ನಳ್ಳಿ, ರಾಂಚಂದ್ರ, ಜಿ. ವಿ. ಗಣೇಶಯ್ಯ, ಸ್ಯಾಮ್, ಯತೀಶ್, ಆದರ್ಶ, ಸೃಜನ್

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಅಯೋಧ್ಯೆ ಮತ್ತು ಲಂಡನ್ ಎರಡೂ ಜಿಹಾದಿಗಳ ದಾಳಿಗೆ ಗುರಿಯಾಗಿವೆ. ಅಯೋಧ್ಯೆಯಲ್ಲಿ ಹೊರಗಿನವರು, ಲಂಡನ್ನಿನಲ್ಲಿ ಅಲ್ಲಿಯವರೇ ದಾಳಿ ನಡೆಸಿರುವವರು. ಅವರನ್ನು ಜಿಹಾದಿಗಳೆನ್ನುವುದೇ ತಪ್ಪು; ಏಕೆಂದರೆ ಅವರ 'ಹೋರಾಟ'ದ ಸ್ವರೂಪ ಅಷ್ಟು ಅಬದ್ಧವಾಗಿದೆ. ಅಯೋಧ್ಯೆಯಲ್ಲಿ ಅವರು ಸತ್ತರು. ಆದರೆ ಲಂಡನ್ನಿನಲ್ಲಿ ತಮ್ಮ ಜೊತೆ ಇನ್ನಷ್ಟು ಮಂದಿಯನ್ನೂ ಸಾವಿಗೆ ಕೊಂಡೊಯ್ದರು. ನಮ್ಮ ದೇಶದ ಪಾರ್ಲಿಮೆಂಟಿಗೆ ಬಾಂಬ್ ಹಾಕಲು ಬಂದಿದ್ದವರಿಗೆ ಅಯೋಧ್ಯೆ ಈಗ ಕಣ್ಣಿಗೆ ಬಿದ್ದಿದೆ. ಎಷ್ಟೇ ಬಿಗಿ ಭದ್ರತೆ ಇದ್ದರೂ ಅದು ಸೂಕ್ತ ರಕ್ಷಣೆ ಒದಗಿಸಲಾರದು; ಆದ್ದರಿಂದ ಮನಸ್ಸುಗಳನ್ನು ಗೆಲ್ಲುವ ಕೆಲಸ ನಡೆಯಬೇಕೆಂದು ಹೇಳಲಾಗುತ್ತದೆ. ಎರಡೂ ಸಂದರ್ಭಗಳಿಗೆ ಹಿನ್ನೆಲೆ ಇದೆ. ಮೊದಲ ಭಯೋತ್ಪಾದನೆಯು ಬಹಿರಂಗವಾದ್ದು, ನ್ಯಾಯಸಮ್ಮತವೆಂದು ಸಮರ್ಥಿಸಲಾದ್ದು, ಸಾಮೂಹಿಕ ಕಾರ್ಯಾಚರಣೆಯ ರೂಪದ್ದು. ಅದಕ್ಕೆ ಪ್ರತಿಕ್ರಿಯೆಯೋ ಪ್ರತೀಕಾರವೋ ಗೂಢವಾಗಿ ನಡೆಯುತ್ತದೆ, ಕೆಲವೇ ಮಂದಿ ಪಾಲ್ಗೊಳ್ಳುತ್ತಾರೆ ಮತ್ತು ಅಪರಾಧವೆಂದು ಪರಿಗಣಿಸಲಾಗುತ್ತದೆ. ಒಂದು ಪೂಜಾಸ್ಥಳವನ್ನು ಧ್ವಂಸಮಾಡಿ ಇನ್ನೊಂದು ಪೂಜಾಸ್ಥಳದ ರಚನೆ ಅಯೋಧ್ಯೆಯ ಪ್ರಸಂಗದಲ್ಲಿದೆ. ಇರಾಕನ್ನು ನಾಶಮಾಡಿದ್ದು ಲಂಡನ್ನಿನ ಪ್ರಸಂಗದ ಹಿನ್ನೆಲೆಯಲ್ಲಿದೆ. ಇರಾಕಿನಲ್ಲಿ ಬ್ರಿಟಿಷ್ ಸೈನ್ಯವು ಪ್ರತಿದಿನ ನೂರಾರು ಜನರನ್ನು ಕೊಲ್ಲುತ್ತದೆ. ಆದರೆ ಅದನ್ನು ಭಯೋತ್ಪಾದನೆಯೆಂದು ಕರೆಯುವುದಿಲ್ಲ. ಅಂತೆಯೇ ಅಯೋಧ್ಯೆಯಲ್ಲಿ ಮಸೀದಿಯನ್ನು ಒಡೆದುಹಾಕಿದ್ದು ಭಯೋತ್ಪಾದನೆಯೆಂದು ಗಣನೆಗೆ ಬರುವುದಿಲ್ಲ. ಹಿಂದಿನ ಮತ್ತು ಇಂದಿನ ಎರಡು ಕೃತ್ಯಗಳೂ ಖಂಡನೀಯವೆಂದು ಹೇಳಿದರೆ ಅದು ದೇಶಭಕ್ತಿಗೆ ಹೊರತಾದ್ದು ಎಂಬ ಆರೋಪವಿರುತ್ತದೆ. ಬರ್ಟ್ರಂಡ್ ರಸೆಲ್ ತನ್ನೊಂದು ಪ್ರಬಂಧದಲ್ಲಿ ಇಂತಹ ವಿದ್ಯಮಾನವನ್ನು ವಿಶ್ಲೇಷಿಸುವಾಗ ಒಂದು ಮಾತು ಹೇಳಿದ್ದಾರೆ. ರಸ್ತೆಯಲ್ಲಿ ಒಬ್ಬ ವ್ಯಕ್ತಿಯನ್ನು (ಅವನು ವೈಯಕ್ತಿಕ ಶತ್ರು ಇರಬಹುದು) ಕೊಂದರೆ ಹಾಗೆ ಕೊಂದವನನ್ನು ಅಪರಾಧಿ ಎನ್ನಲಾಗುತ್ತದೆ. ಅವನು ಕಾರಾಗೃಹಕ್ಕೆ ಹೋಗಬೇಕು ಇಲ್ಲವೇ ಹುಚ್ಚಾಸ್ಪತ್ರೆಯಲ್ಲಿ ದಾಖಲಾಗಬೇಕು. ಆದರೆ ರಣರಂಗದಲ್ಲಿ ವ್ಯಕ್ತಿಯನ್ನು (ಅವನೂ ಶತ್ರುವೇ) ಕೊಂದರೆ ಅದು ಪರಮವೀರಚಕ್ರವನ್ನು ತಂದುಕೊಡುತ್ತದೆ, ಪ್ರಶಂಸಿಸಲಾಗುತ್ತದೆ. ಇವೆರಡರ ನಡುವೆ ಮಹತ್ತರವಾದ ವ್ಯತ್ಯಾಸವಿದೆಯೆಂದು ರಸೆಲ್ ಭಾವಿಸುವುದಿಲ್ಲ. ಎರಡೂ ಕೊಲೆಗಳೇ; ಆದರೆ ಒಂದಕ್ಕೆ ರಾಷ್ಟ್ರಭಕ್ತಿಯ ಲಾಂಛನವಿದೆ, ಇನ್ನೊಂದಕ್ಕೆ ಇಲ್ಲ. ಮುಂದುವರಿದು ರಸೆಲ್ ಹೇಳುತ್ತಾರೆ, ''ರಾಷ್ಟ್ರೀಯತೆ ಎಂಬುದು ಸಾಮೂಹಿಕ ಹುಚ್ಚುತನ'' ಎಂದು. ಅದನ್ನು ಒಪ್ಪುವುದು, ಬಿಡುವುದು, ಬೇರೆ ಪ್ರಶ್ನೆ. ಆದರೆ ಅಯೋಧ್ಯೆ-ಲಂಡನ್ ಪಾತಕಗಳಿಗೆ ಅದರ ಮುಂಚಿನ ಪಾತಕಗಳು ಪ್ರೇರಣೆ ನೀಡಿರಬಹುದೆಂಬುದನ್ನು ತಳ್ಳಿಹಾಕಲಾಗುವುದಿಲ್ಲ. ಹೀಗೇ ಮುಂದುವರಿದರೆ ಮುಕ್ತಾಯ ಹೇಗೆ ? ಕೊಂಡಿಯನ್ನು ಎಲ್ಲಿಯಾದರೂ ಕತ್ತರಿಸಬೇಕಾದ ಪ್ರಮೇಯವಿದೆ. ಅಯೋಧ್ಯೆಯ ಸಂದರ್ಭದಲ್ಲಿ ಇದು ಯಾವ ರೂಪದಲ್ಲಿರಬೇಕೆಂಬುದನ್ನು ಪರಸ್ಪರ ಚರ್ಚೆಗಳಿಂದ ಬಗೆಹರಿಸಬಹುದು. ಲಂಡನ್ನಿನ ಸಂದರ್ಭದಲ್ಲಿ ಇರುವುದೇ ಒಂದು ದಾರಿ : ಇರಾಕ್ ಮತ್ತು ಆಫ್ಘಾನಿಸ್ತಾನಗಳಿಂದ ವಿದೇಶಿ ಸೈನ್ಯ ಹೊರಬರುವುದು, ಅಮಾನವೀಯ ಸಂಹಾರಗಳಿಗೆ ಉಪಸಂಹಾರ ಹಾಡುವುದು. ಬುಷ್-ಬ್ಲೇರ್ ಭಯೋತ್ಪಾದನೆಯನ್ನು ಎದುರಿಸಲು ಲಂಡನ್ನಿನಲ್ಲಿ ಬಾಂಬ್ ಹಾಕುವ ಹತಾಶ ಮನೋಭಾವ ಆಗ ಇಲ್ಲವಾಗುತ್ತದೆಯೆಂದು ತೋರುತ್ತದೆ. ''ನಮ್ಮ ಸ್ವಾತಂತ್ರ್ಯಪ್ರೇಮ ಅವರಿಗೆ ರುಚಿಸುವುದಿಲ್ಲ. ಆದ್ದರಿಂದ ಅವರು ಬಾಂಬ್ ಹಾಕುತ್ತಾರೆ'' ಎಂಬ ಬ್ಲೇರ್ ತೀರ್ಮಾನವು ತೀರಾ ಬಾಲಿಶವಾದ್ದು ಮತ್ತು ತನ್ನ ಕ್ರೌರ್ಯ ಮತ್ತು ಅಪರಾಧಗಳನ್ನು ಮುಚ್ಚಿಟ್ಟುಕೊಳ್ಳುವ ಹತಾಶ ಪ್ರಯತ್ನ ಅದು.

ಅಡ್ವಾನಿಯವರು ಕರಾಚಿಯಲ್ಲಿ ಭಾವುಕರಾಗಿ ಜಿನ್ನಾ ಬಗ್ಗೆ ಹೇಳಿದ ಮಾತುಗಳು ಅವರ ತಾಯಿ ಸಂಸ್ಥೆ ಆರೆಸ್ಸೆಸ್‌ಗೆ ಅರುಚಿಕರವಾಗಿ ತೋರಿದ್ದರಿಂದ ಕೃತಕ ಕೋಲಾಹಲ ಇನ್ನೂ ಮುಂದುವರೆಯುತ್ತಿದೆ. ಆರೆಸ್ಸೆಸ್‌ನವರಲ್ಲದ ಭಾರತೀಯ ಜನತಾ ಪಕ್ಷದ ಸದಸ್ಯರು ಮತ್ತು ಕಾರ್ಯಕರ್ತರು ಇನ್ನೆಷ್ಟು ಕಾಲ ಈ ಅನಭಿಷಿಕ್ತ ದೊರೆಗಳ ಸವಾರಿಗೆ ಕುದುರೆಗಳಾಗಿ ವರ್ತಿಸುತ್ತಾರೋ ತಿಳಿಯದು. ಭಾಜಪಕ್ಕೆ ಬೆಂಬಲ ವ್ಯಕ್ತಪಡಿಸಿ ಪಾರ್ಲಿಮೆಂಟಿಗೆ ಅಡ್ವಾನಿ ಮುಂತಾದವರನ್ನು ಚುನಾಯಿಸುವವರೆಲ್ಲಾ ಸುದರ್ಶನ ಮಹಾಪಂಡಿತರ ಕಾಲಾಳುಗಳಲ್ಲವೆಂಬುದನ್ನು ಭಾಜಪವು ದೇಶಕ್ಕೆ ತೋರಿಸಿಕೊಡುವ ಹೊಣೆ ಹೊತ್ತಿದೆ. ತನ್ನ ಪಕ್ಷದ ಆಂತರಿಕ ವ್ಯವಹಾರಗಳನ್ನು ನೇರವಾದ ಪ್ರಜಾಪ್ರಭುತ್ವವಾದಿ ಮಾರ್ಗದಲ್ಲಿ ನಡೆಸಲು ಅಸಮರ್ಥವಾದರೆ ಭಾಜಪವು ದೇಶಕ್ಕೆ ಇನ್ನೆಂತಹ ಪ್ರಜಾಪ್ರಭುತ್ವದ ಆಡಳಿತ ಕೊಟ್ಟೀತು ? ಸುದರ್ಶನ ಸ್ವಾಮಿಗಳ ಆಣತಿಯೇ ಅಂತಿಮವೆಂದಾದರೆ ಭಾಜಪಕ್ಕೆ ಅವರನ್ನೇ ಅಧ್ಯಕ್ಷರನ್ನಾಗಿ ಮಾಡಿಕೊಳ್ಳುವುದು ಯೋಗ್ಯವೆನಿಸುವುದಿಲ್ಲವೇ ? ಅಡ್ವಾನಿ-ವಾಜಪೇಯಿಗಿಲ್ಲದ ನೈತಿಕತೆ,

೯ನೇ ಪುಟಕ್ಕೆ


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೭ ಸಂಚಿಕೆ-೧ ಆಗಸ್ಟ್ ೨೦೦೫

ಸಂಪಾದಕ

ಜಿ. ರಾಮಕೃಷ್ಣ

ಸಹಸಂಪಾದಕರು

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಚಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

ವ್ಯವಸ್ಥಾಪಕ

ಎ. ಆರ್. ಉಡುಪ

ಮುದ್ರಕ-ಪ್ರಕಾಶಕ

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

ಮುದ್ರಣ

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

ಹೊಸತು ಕಚೇರಿಯ ವಿಳಾಸ



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : nkp@bgl.vsnl.net.in
website : www.navakarnatakabooks.com

ಸಂಪಾದಕೀಯ

# ಮೃಗೀಯ ಕಾನೂನಿಗೆ ಸಮರ್ಥನೆಯಿಲ್ಲ

ಮತಧರ್ಮಗಳು ಚರಿತ್ರೆಯ ನಿರ್ದಿಷ್ಟ ಹಂತಗಳಲ್ಲಿ ಉದ್ಭವಿಸಿವೆ. ಆ ಹಂತಗಳ ವಿಶಿಷ್ಟ ಅನುಭವಗಳು, ಆಕಾಂಕ್ಷೆಗಳು, ಅವನ್ನು ಪೂರೈಸಿಕೊಳ್ಳಲು ಅಗತ್ಯವೆನಿಸಿದ ಕ್ರಮಗಳು, ಸಮಾಜವನ್ನು ನಿಯಂತ್ರಿಸಿಕೊಳ್ಳುವ ವಿಧಾನಗಳು, ಇವೆಲ್ಲಾ ಆ ಮತಧರ್ಮಗಳ ಚೌಕಟ್ಟಿನಲ್ಲಿ ನಿರೂಪಿತವಾಗಿರುತ್ತವೆ. ಎರಡು ಉದಾಹರಣೆಗಳನ್ನು ನೋಡಬಹುದು: ಈಜಿಪ್ಟಿನ ಫ್ಯಾರೋಗಳ ನಿರ್ಬಂಧಕ್ಕೆ ಸಿಲುಕಿದ್ದವರಿಗೆ ಪರಿಹಾರ ನೀಡಲು ಸೆಣಸಿದ ಮೋಸಸ್ ಸಾಗರವನ್ನು ದಾಟಿ ಯಹೂದ್ಯರ ನಾಡಿಗೆ ಅವರನ್ನು ಕೊಂಡೊಯ್ಯುತ್ತಾನೆ. ಫ್ಯಾರೋಗಳನ್ನು ಮಣಿಸಿ ಅವರೆಲ್ಲಾ ಅಲ್ಲೇ ಉಳಿಯಬಹುದಾಗಿತ್ತಲ್ಲಾ ಎಂಬ ಪ್ರಶ್ನೆಗೆ ಉತ್ತರವನ್ನು ಆಯುಧಗಳು ಯಾರ ಬಳಿ ಇದ್ದುವು, ಪುರೋಹಿತರು ಯಾರ ಪರ ನಿಂತರು, ಇತ್ಯಾದಿ ಅಂಶಗಳು ನೀಡುತ್ತವೆ. ಭಗವದ್ಗೀತೆಯಲ್ಲಿ ಅರ್ಜುನನ ಪ್ರಶ್ನೆಗಳನ್ನು ನೋಡಿದರೆ ಯುದ್ಧವೆಂಬ ಮಹಾಪಾತಕದಿಂದ ಸಮಾಜದಲ್ಲಿ ಎಂತಹ ಅಸ್ತವ್ಯಸ್ತತೆ ಉಂಟಾಗುತ್ತದೆ ಎಂಬುದನ್ನು ಗೀತೆಯ ಲೇಖಕನು ಹೇಗಾದರೂ ಉತ್ತರಿಸಬೇಕಾದ ಪ್ರಸಂಗವಿದ್ದುದು ಗೊತ್ತಾಗುತ್ತದೆ. ಅಂದರೆ, ಯುದ್ಧದಿಂದ ಅಶಾಂತಿ ಸಂಭವಿಸುತ್ತದಾದ್ದರಿಂದ ಅದನ್ನು ವರ್ಜಿಸಬೇಕೆಂದು ಸಮಗ್ರವಾದ ತರ್ಕವನ್ನು ಮುಂದಿಡುತ್ತಿದ್ದವರು ಅಂದಿನ ಚಾರಿತ್ರಿಕ ಸನ್ನಿವೇಶದಲ್ಲಿ ಇದ್ದಿರಬೇಕು; ಅಂತೆಯೇ ಕಠಿಣವಾದ ವರ್ಣ ವ್ಯವಸ್ಥೆಯು ಯಾವ ಕಾರಣಕ್ಕೂ ಶಿಥಿಲವಾಗಕೂಡದೆಂಬ ಆಶಯವನ್ನು ಹೊತ್ತವರೂ ಇದ್ದಿರಬೇಕು. ಈ ಮೂರ್ತ ಪ್ರಶ್ನೆಗಳಿಗೆ ಶ್ರೀ ಭಗವಾನನು ಗೀತೆಯಲ್ಲಿ ಅಮೂರ್ತ ಉತ್ತರಗಳನ್ನು ನೀಡುತ್ತಾ ಪ್ರಶ್ನೆಗಳೇ ಅಪ್ರಸ್ತುತ ಎಂಬಂತೆ ವ್ಯಾಖ್ಯಾನಿಸಿದ್ದಾನೆ ಎಂಬುದು ಬೇರೆ ವಿಚಾರ. ಯಾವ ಮತಧರ್ಮವೂ ಕಿಂಚಿತ್ತೂ ಬದಲಾಗದೆ ಸಾರ್ವಕಾಲಿಕವಾಗಿ ಹಾಗೆಯೇ ಉಳಿದಿಲ್ಲ ಮತ್ತು ಉಳಿಯುವುದಿಲ್ಲ. ಅದರ ನೀತಿಸಂಹಿತೆ ಸಹ ನಿಂತ ನೀರಲ್ಲ. ಸಾಮಾಜಿಕ ಸಂಬಂಧಗಳು ಧರ್ಮಶಾಸ್ತ್ರಕಾರರ, ಮೌಲ್ವಿಗಳ ಮತ್ತು ಪೋಪ್ ಸಂತತಿಯವರ ಆಣತಿಯಂತೆ ಅಡುಗೂಲಜ್ಜಿ ಕಾಲದಲ್ಲಿದ್ದಂತೆ ಹಾಗೆಯೇ ಉಳಿಯುವುದಿಲ್ಲ. ಆರಂಭಿಕ ದೆಸೆಯ ಆಶಯ ಮತ್ತು ಪದ್ಧತಿಗಳ ಜಾಗದಲ್ಲಿ ಹೊಸ ಭಾವನೆಗಳು ಹಾಗೂ ಸಂಬಂಧಗಳು ರೂಪುಗೊಳ್ಳುತ್ತವೆ. ಇದು ಆರೋಗ್ಯಕರವಾದ ಪ್ರಕ್ರಿಯೆ, ಅನಿವಾರ್ಯವಾದ ಬೆಳವಣಿಗೆ. ಮೋಸಸ್ ಕಾಲದ ಯಹೂದ್ಯರು ಶರೋನ್ ಆಧಿಪತ್ಯದಲ್ಲಿ ಹಿಂದಿನಂತೆಯೇ ಉಳಿದಿಲ್ಲ. ಜೀಸಸ್-ಜಾನ್-ಪೀಟರ್ ಕಾಲದ ಕ್ರೈಸ್ತ ಜನಾಂಗದ ನಿಯಮಗಳು ಪೋಪ್ ಬೆನೆಡಿಕ್ಟನ ಕಾಲದ ಕ್ರೈಸ್ತರಿಗೆ ಸರ್ವಥಾ ಹಾಗೆಯೇ ಅನ್ವಯವಾಗುವುದಿಲ್ಲ.

ಇತಿಹಾಸದ ಚಕ್ರ ಉರುಳುತ್ತಿದ್ದರೂ ಹಿಂದಿನ ಧಾರ್ಮಿಕ ಕಟ್ಟುಪಾಡುಗಳನ್ನು ಎಳ್ಳಷ್ಟೂ ಬದಲಾಗಲು ಬಿಡದೆ ಅದಕ್ಕೇ ಉರುಲು ಹಾಕಿಕೊಳ್ಳಬೇಕೆಂದು ಪಟ್ಟುಹಿಡಿಯುವ ಧರ್ಮಾಧಿಕಾರಿಗಳು ಧಾರ್ಮಿಕ ಸಂಹಿತೆ ಮತ್ತು ಸಂಸ್ಥೆಗಳನ್ನು ಜಡ್ಡುತನದ ಕೆಸರಿನಲ್ಲಿ ಹೂತುಬಿಡುತ್ತಾರೆ. ಮತಧರ್ಮವು ಸಮಾಜದ ವ್ಯಕ್ತಿತ್ವವನ್ನು ವಿಕಾಸಗೊಳಿಸುವುದರ ಬದಲು ಈ ಧೂರ್ತ ಧಾರ್ಮಿಕ ನಾಯಕರ ಅಧೀನದಲ್ಲಿ ಅದು ಸಮಾಜವನ್ನು ಬಂಧಿಸುತ್ತದೆ, ಹಿಂಸಿಸುತ್ತದೆ ಮತ್ತು ಕೊಲ್ಲುತ್ತದೆ. ಧರ್ಮದ ಸಾರವಾಗಬೇಕಾದ ಮಾನವಿಕ ಮೌಲ್ಯಗಳು ಇದರಿಂದಾಗಿ ಸೊರಗಿಹೋಗುತ್ತವೆ. ಬಿಡುಗಡೆಯ ಹಾದಿಯಲ್ಲಿ ಅನುಯಾಯಿಗಳನ್ನು ಕೊಂಡೊಯ್ಯಬೇಕೆಂದು ನಿರೀಕ್ಷಿಸಲಾದ ಧರ್ಮಸಂಸ್ಥೆಯು ಜೀವಕ್ಕೆ ಬೆದರಿಕೆ ಹಾಕಿ ಜನರನ್ನು ಸತ್ವಹೀನರನ್ನಾಗಿಸುವುದು ಇಂತಹ ಸಂದರ್ಭದಲ್ಲಿ. ಕೈ ಮತ್ತು ಮನಸ್ಸಿನ ಕೋಳಗಳನ್ನು ಕಿತ್ತುಹಾಕುವ ಬದಲು ಅವನ್ನು ಇನ್ನೂ ದೊಡ್ಡ ಮಣಿಗಂಟಾಗಿಸುವುದು ಧಾರ್ಮಿಕ ಜಡ್ಡುತನವೇ ಹೊರತು ಬೆಳಕಿನತ್ತ ಕರೆದೊಯ್ಯುವ ಧಾರ್ಮಿಕ ಆಸರೆಯಲ್ಲ. ಇತಿಹಾಸದ ಬಗೆಗಿನ ಪ್ರಜ್ಞಾಶೂನ್ಯತೆ, ವ್ಯಕ್ತಿಯ ಬಗೆಗಿನ ಅಗೌರವ, ಸ್ವಂತದ ಬಗೆಗೆ ಅತಿಯಾದ ಅಂಧತೆ ಮತ್ತು ಅಹಂಕಾರ, ಇವೇ ಧಾರ್ಮಿಕ ನಾಯಕರೆನಿಸಿಕೊಂಡವರನ್ನು ಕ್ರಮೇಣ ಕಟುಕರನ್ನಾಗಿಸುತ್ತವೆ. ಪೈಗಂಬರನ ಕಾಲದಲ್ಲಿರದಿದ್ದ ಧ್ವನಿವರ್ಧಕಗಳನ್ನು ಬಳಸಿ ಶ್ರದ್ಧಾಳುಗಳನ್ನು ಮಸೀದಿಗೆ ಬನ್ನಿರೆಂದು ಓಲೈಸುವ ಧಾರ್ಮಿಕ ಕಾರ್ಯಕರ್ತನಿಗೆ, ಸಾವಿರದ ಮುನ್ನೂರು ವರ್ಷಗಳ ಹಿಂದಿನ ಸಾಮಾಜಿಕ ಮತ್ತು ವೈಯಕ್ತಿಕ ಕಟ್ಟಳೆಗಳು ಮಾತ್ರ ಹಾಗೆಯೇ ಉಳಿದಿರಬೇಕೆನಿಸುವುದು ಜಡ್ಡುತನದ ಲಕ್ಷಣ, ಬುದ್ಧಿಮಾಂದ್ಯದ ಪ್ರಭಾವ, ಧರ್ಮಸಂಸ್ಥೆಯ ದುರುಪಯೋಗ.

ಮುಜಾಫ್ಫರ್ ನಗರದ ಇಮ್ರಾನಾ ಭಾರತದಲ್ಲಿ ಹೀನಾಯವಾದ ಕಿರುಕುಳಕ್ಕೆ ಸಿಲುಕಿದ್ದರೆ ಮುಖ್ತರ್ ಮಾಯೀ ಪಾಕಿಸ್ತಾನದಲ್ಲಿ ಅಂಥದೇ ಸಂದರ್ಭ ಎದುರಿಸುತ್ತಿದ್ದಾಳೆ. ಇಬ್ಬರ ಸನ್ನಿವೇಶವೂ ಒಂದೇ. ಅತ್ಯಾಚಾರಕ್ಕೆ ಬಲಿಯಾಗಿರುವುದು. ಅಟ್ಟದಿಂದ ಬಿದ್ದವರನ್ನು ದಡಿಯಿಂದ ಚಚ್ಚಿದರು ಎಂಬಂತೆ ಅತ್ಯಾಚಾರದ ಬಲಾತ್ಕಾರಕ್ಕೊಳಾದ ಇಮ್ರಾನಾಳನ್ನು ಗಂಡನ ಜೊತೆ ಇರಕೂಡದೆಂಬ ಮೃಗೀಯ ತೀರ್ಮಾನವನ್ನು ಡಾಂಭಿಕ ದುರ್ಧರ್ಮಾಧಿಕಾರಿಗಳು ನೀಡಿದ್ದಾರೆ. ಪಶುವಿಗಿಂತಲೂ ಕೆಟ್ಟದ್ದಾಗಿ ವರ್ತಿಸಿದ ಅವಳ ಅಯೋಗ್ಯ ಮಾವನಿಗೆ ಶಿಕ್ಷೆಯಿಲ್ಲ! ಅತ್ತ ಕಡೆ ಪಾಕಿಸ್ತಾನದಲ್ಲಿ ಮುಖ್ತರ್‌ಳ ಅಪಾರಾಧ ಏನೂ ಇಲ್ಲ. ಅವಳ ಸಹೋದರ ಯಾರನ್ನೋ ಛೇಡಿಸಿದ್ದಕ್ಕಾಗಿ ಅವಳ ಮೇಲೆ ಅತ್ಯಾಚಾರ ನಡೆಸಬೇಕೆಂಬ ''ದೈವೀನಿಯಮ''ವನ್ನು ಇದೇ ಮೊಂಡುಮತಿ ಮುಲ್ಲಾಗಳು ನೀಡಿದ್ದಾರೆ. ಇದು ಮಾನವ ಧರ್ಮದ ಸೋಂಕೂ ಇಲ್ಲದ ಕ್ರೂರ-ಬೀಭತ್ಸ ಕೃತ್ಯ. ಅದನ್ನೇನಾದರೂ ಶರಿಯತ್ ಎಂಬುದು ಸಮರ್ಥಿಸಿದರೆ ಅದನ್ನು ಬದಲಾಯಿಸಬೇಕೇ ವಿನಾ ಇಮ್ರಾನಾ-ಮುಖ್ತರ್ ಅಂಥವರನ್ನು ಪೀಡನೆಗೆ ಗುರಿ ಮಾಡುವುದು ಸಲ್ಲದು. ವೈಯಕ್ತಿಕ ಕಾನೂನಿನ ಪರಿಧಿಯಲ್ಲಿ ಇಂತಹ ಅಮಾನವೀಯ ನಡತೆ ಮತ್ತು ಹಿಂಸೆಗಳಿಗೆ ಅವಕಾಶವಿದ್ದರೆ ಅದನ್ನು ನಾಗರಿಕತೆಯ ಮತ್ತು ವ್ಯಕ್ತಿ ಗೌರವದ ನಿಟ್ಟಿನಿಂದ ಬದಲಾಯಿಸಬೇಕು. ಯಾವ ಧರ್ಮಾಂಧ ಸಮಜಾಯಿಷಿಯೂ ಇದಕ್ಕೆ ಅಡ್ಡಿಯಾಗಕೂಡದು.

ಕ್ರೈಸ್ತ ಮತದ ಒಂದು ಪಂಗಡದವರಲ್ಲಿ ಮಹಿಳೆಯೊಬ್ಬಳು ವಿವಾಹ ವಿಚ್ಛೇದನೆಯನ್ನು ಪಡೆಯಲು ಸಾಧ್ಯವಾಗದಂತಹ ಕಾನೂನು ಇದೆ. ಇನ್ನೊಂದು ಪಂಗಡದಲ್ಲಿ, ಅದನ್ನು ಪಡೆಯಲು ಅವಳು ತನ್ನ ಲಂಪಟತನವನ್ನು ಸಾಬೀತುಗೊಳಿಸಬೇಕು. ನಮ್ಮ ಸಮಾಜದಲ್ಲಿ ಅಸ್ಪೃಶ್ಯರೆನ್ನಲಾದವರ ಪೈಕಿ ಒಬ್ಬ ಯುವಕನೇನಾದರೂ ಉಚ್ಚ ಜಾತಿಯವರೆನ್ನಲಾದ ಕುಟುಂಬದ ಯುವತಿಯನ್ನು ಪ್ರೇಮಿಸಿ ಮದುವೆಯಾದರೆ ತಲೆ ತೆಗೆಯುವ ಪ್ರಸಂಗ ಸಹ ಜರುಗಬಹುದು. ಅಂತಹ ಘಟನೆಗಳು ನಡೆದಿವೆ, ಅದೇನೂ ಕಲ್ಪಿತವಲ್ಲ. ಭಾವನಾತ್ಮಕವಾಗಿ ಧಾರ್ಮಿಕ ಮೊಂಡುತನವು ಬೇರು ಬಿಟ್ಟಿರುವುದು ಇದಕ್ಕೆ ಕಾರಣ.

ಶತಮಾನಗಳು ಕಳೆದಂತೆ ಸಾಮಾಜಿಕ ಸಂಬಂಧಗಳು ಬದಲಾಗುವುದನ್ನು ಒಪ್ಪಬೇಕು, ಸ್ವಾಗತಿಸಬೇಕು ಎನ್ನುವ ತಿಳಿವಳಿಕೆ ಬೆಳೆಸದಿರುವ ಮತಧರ್ಮಗಳ ಸಂಸ್ಥೆಗಳ ಜವಾಬ್ದಾರಿ ಇದರಲ್ಲಿ ಸಾಕಷ್ಟಿದೆ. ವೈಯಕ್ತಿಕ ಕಾನೂನಿನ ಬದಲಾವಣೆಯೆಂದರೆ ತೀರಾ ಖಾಸಗಿಯಾದ, ಇತರರಿಗೆ ಯಾವ ರೀತಿಯಲ್ಲೂ ಬಾಧಕವಲ್ಲದ, ಸಾಮಾಜಿಕವಾಗಿ ಯಾರಿಗೂ ಹಿಂಸೆ ಕೊಡದ ಅನೇಕ ಪದ್ಧತಿಗಳನ್ನು ಮೂಲೋತ್ಪಾಟನೆ ಮಾಡಬೇಕೆಂಬ ಅಗತ್ಯವೇನೂ ಇಲ್ಲ. ತಲೆಯ ಕೂದಲನ್ನು ಹೇಗಿಟ್ಟುಕೊಳ್ಳಬೇಕು, ಸತ್ತವರ ಶರೀರಕ್ಕೆ ಏನು ಮಾಡಬೇಕು, ಮೂಗು ಮುಚ್ಚುವ ಬಟ್ಟೆ ಹಾಕಿಕೊಳ್ಳಬೇಕೆ ಅಥವಾ ಬೇಡವೇ, ಇತ್ಯಾದಿ ಪ್ರಶ್ನೆಗಳಿಗೆ ಎಲ್ಲ ಮತಧರ್ಮಗಳವರೂ ಒಂದೇ ಉತ್ತರ ಕೊಟ್ಟು ಹಾಗೆ ನಡೆದುಕೊಳ್ಳುವುದು ಬೇಕಿಲ್ಲ. ಆದರೆ ವ್ಯಕ್ತಿ ಗೌರವ, ಸಾಮಾಜಿಕ ರಕ್ಷಣೆ, ಆಸ್ತಿಯಲ್ಲಿ ಪಾಲುದಾರಿಕೆ, ಅಸ್ತಿತ್ವದ ಹಕ್ಕು, ಶಿಕ್ಷಣದ ಅವಕಾಶ, ಕಾನೂನಿನ ಅನ್ವಯ ಮುಂತಾದ ವಿಷಯಗಳಲ್ಲಿ ಮತಧರ್ಮದ ಆಧಾರದ ಮೇಲೆ ತಾರತಮ್ಯ ಸರ್ವಥಾ ಸಮರ್ಥನೀಯವಲ್ಲ. ಇದು ವಿಶೇಷವಾಗಿ ಮಹಿಳೆಯರನ್ನು ಆಹುತಿ ತೆಗೆದುಕೊಳ್ಳುತ್ತದೆ. ಅವರ ಹಕ್ಕುಗಳನ್ನು ಮಾನ್ಯಮಾಡಲು ಮುಲ್ಲಾ-ಪಾದ್ರಿ-ಮಠಾಧಿಪತಿಯಂಥವರ ಮನಸ್ಸು ಬದಲಾಗುವವರೆಗೂ ಕಾಯಲಾಗುವುದಿಲ್ಲ. ಅದು ಇಲ್ಲೇ ಇಂದೇ ಆಗಬೇಕಾದ ಕೆಲಸ. ನಮ್ಮ ದೇಶದಲ್ಲಿ ಇನ್ನೊಬ್ಬ ಇಮ್ರಾನಾ ಮತ್ತೊಮ್ಮೆ ಎಂಥದಾದರೂ ಮೂರ್ಖ ಫತ್ವಾಕ್ಕೆ ಗುರಿಯಾಗುವ ಮುನ್ನ ಇದನ್ನು ಸಾಧಿಸಬೇಕು. ಫತ್ವಾದ ಧೂರ್ತತೆಯನ್ನು ಘೋರ ಜಾಣತನದಿಂದ ಮುಚ್ಚಿಹಾಕಲು ಇನ್ನೊಬ್ಬ ಮುಖ್ಯಮಂತ್ರಿಯೇನಾದರೂ ಬಾಯಿಬಿಟ್ಟರೆ ಅವನ ಅಥವಾ ಅವಳ ಬಾಯಿಗೆ ಸಾರ್ವಜನಿಕರು ಮಣ್ಣು ತುಂಬಿ ಬೀಗ ಜಡಿಯಬೇಕು. ಇಷ್ಟನ್ನು ಸಹ ಮಾಡದಿದ್ದರೆ ನಮ್ಮ ಸಾರ್ವಭೌಮ ರಾಷ್ಟ್ರದ ಸಂವಿಧಾನ ಮತ್ತು ಕಾನೂನು ಯಾವ ಪುರುಷಾರ್ಥಕ್ಕೆ ?

## ಪ್ರಾಥಮಿಕ ಶಿಕ್ಷಣದ ಸುಧಾರಣೆ

ಡಾ|| ರಾಮ ಮನೋಹರ ಲೋಹಿಯಾ ಅವರ ಪ್ರಕಾರ ಭಾರತದಲ್ಲಿ ಆಳುವ ವರ್ಗಕ್ಕೆ ಸೇರಲು ಕ್ರಮವಾಗಿ ಮೂರು ಅಗತ್ಯಗಳನ್ನು ಪೂರೈಸಬೇಕು: ಬ್ರಾಹ್ಮಣ ಜಾತಿಯವರಾಗುವುದು, ಇಂಗ್ಲಿಷ್ ಶಿಕ್ಷಣ ಪಡೆದಿರುವುದು ಮತ್ತು ಆಸಿವಂತರಾಗಿರುವುದು. ಮೊದಲನೆಯದು ಜನ್ಮತಃ ಪಡೆದದ್ದು; ಇನ್ನೆರಡು ವ್ಯಕ್ತಿಯು ಗಳಿಸುವಂಥವು. ಆ ಲಕ್ಷಣಗಳು ಅದೇ ಕ್ರಮದಲ್ಲಿ ಆಳುವ ವರ್ಗದ ಲಕ್ಷಣಗಳೆಂಬುದು ಮಿಥ್ಯೆ. ವಸ್ತುನಿಷ್ಠ ವಿಶ್ಲೇಷಣೆಯು ಅದನ್ನು ತೋರಿಸಿಕೊಡುತ್ತದೆ. ಎರಡನೆಯದಾಗಿ, ನಮ್ಮ ಆಳುವ ವರ್ಗವು ಅವೇ ಲಕ್ಷಣಗಳನ್ನು ಹೊಂದುತ್ತಿರಬೇಕೆ ಅಥವಾ ಬೇರೆ ಉತ್ತಮ ಲಕ್ಷಣಗಳನ್ನು ಹೊಂದುವ ವರ್ಗವು ಆಳುವ ವರ್ಗವಾಗಬೇಕೆ ಎಂಬುದು ಚಿಂತನಾಯೋಗ್ಯವಾಗಿದೆ. ಉದ್ಯೋಗಾವಕಾಶಕ್ಕಾಗಿ ಇಂಗ್ಲಿಷ್ ಎಂಬುದು, ಸದ್ಯದಲ್ಲಿ ಅಸ್ತಿತ್ವದಲ್ಲಿರುವ ಆಳುವ ವರ್ಗದಲ್ಲಿ ಸೇರಿಕೊಳ್ಳಲು ಇಂಗ್ಲಿಷ್, ಎಂದು ಪರ್ಯವಸಾನವಾಗದಿದ್ದರೆ ಕ್ಷೇಮ.

ನಮ್ಮ ಶಿಕ್ಷಣ ವ್ಯವಸ್ಥೆಯು ತಾರತಮ್ಯಗಳ ಆಗರ. ಮಾರುಕಟ್ಟೆಯಲ್ಲಿ ದಿನಸಿ ಕೊಳ್ಳಲು ಬೆಲೆಯ ವ್ಯತ್ಯಾಸಗಳು ಎಷ್ಟಿವೆಯೋ ಅದಕ್ಕೆ ನೂರು ಪಟ್ಟು ಜಾಸ್ತಿ ವ್ಯತ್ಯಾಸವು ಶಿಕ್ಷಣ ಪಡೆಯಲು ಲಭ್ಯವಿರುವ ಸೌಲಭ್ಯಗಳಲ್ಲಿವೆ. ಶಾಂತಿನಿಕೇತನದಲ್ಲಿ ರವೀಂದ್ರರ ಯಾವುದೋ ಕನಸಿನ ಪ್ರತೀಕವಾಗಿ ಮರಗಳಡಿ ತರಗತಿಗಳು ನಡೆಯುತ್ತವೆ. ಯಾವ ಆದರ್ಶದ ಪಾಲನೆಯೂ ಇಲ್ಲದೆ ಮರಗಳ ಕೆಳಗೆ ತರಗತಿಗಳು ನಮ್ಮಲ್ಲಿ ನೂರಾರು ಕಡೆ ಜರುಗುತ್ತವೆ. ಆದರೆ ಶಾಂತಿ-ಸ್ವಚ್ಛತೆಗಳು ಶಾಂತಿನಿಕೇತನದಲ್ಲಿರುವಷ್ಟು ಇರುವುದಿಲ್ಲ. ನಮ್ಮ ದೇಶವು ನಾಚಿಕೆ ಪಟ್ಟುಕೊಳ್ಳುವ ಸ್ವಭಾವ ಬೆಳೆಸಿಕೊಂಡಿದ್ದರೆ, ಕೆಲವು ಶಾಲೆಗಳಲ್ಲಿ ಮಕ್ಕಳಿಗೆ ನಾವು ನೀಡುತ್ತಿರುವ ಹೊಲಸಿನ ಪ್ರಮಾಣವನ್ನು ಕಂಡು ಈ ವೇಳೆಗೆ ಆತ್ಮಹತ್ಯೆ ಮಾಡಿಕೊಳ್ಳಬೇಕಾಗಿತ್ತು! ಆದರೆ ನಾವು ದಪ್ಪ ಚರ್ಮದವರು. ಈ ಮಕ್ಕಳಿಗೇಕೆ ಹೀಗೆ ದುರವಸ್ಥೆಯ ಪಾಡು ಎಂಬ ಪ್ರಶ್ನೆಯನ್ನೇ ಹಾಕಿಕೊಳ್ಳುವುದಿಲ್ಲ. ಶಾಲೆಗೆ ಮಕ್ಕಳನ್ನು ಪ್ರತ್ಯೇಕ ವಾಹನಗಳಲ್ಲಿ ಕಳಿಸಬಾರದೆಂದು ಮನವಿ ಮಾಡಿಕೊಂಡರೆ ಸರ್ಕಾರದ ವಿರುದ್ಧ ಕೆಂಡ ಕಾರುವ ವರ್ಗ ಒಂದು, ಹರಕು ಚಾಪೆಯೂ ಇಲ್ಲದ ಶಾಲೆ ಇನ್ನೊಂದು; ಹೀಗಿದೆ ನಮ್ಮ ವ್ಯವಸ್ಥೆ. ಆದರೆ ಅವರೆಲ್ಲಾ ಜೀವನದ ಸ್ಪರ್ಧೆಯಲ್ಲಿ ಸಮಾನರು. ಆದ್ದರಿಂದ ಪ್ರತಿಷ್ಠಿತ ಕುಟುಂಬಗಳವರು ಸದಾ ಸವಾರಿ ಮಾಡುವವರು, ಇತರರು ಕಿಂಕರರ ಸ್ಥಾನದಲ್ಲೇ ಉಳಿಯುವವರು. ಸಮಾನತೆ, ಸಮಾನ ಅವಕಾಶ ಮತ್ತು ಸಮಾನ ಪಠ್ಯ ಎಂಬ ಸೂತ್ರವನ್ನು ಉಚ್ಚರಿಸುವುದು ಕೂಡ ಮಹಾಪಾಪ. ಯಾವ ತಾತನ ಕಾಲದ ವರದಿಯನ್ನು ಎತ್ತಿಹಿಡಿಯುತ್ತೀರೆಂಬ ಮೂದಲಿಕೆಯ ಮಾತು ಸಹ ಅಪರೂಪವಲ್ಲ. ಆದರೆ ಪ್ರಜಾಪ್ರಭುತ್ವದ ಆಶಯವು ಯಾವುದೋ ಹಳೆಯ ನೀತಿಯೆನಿಸಿದರೂ ಅದಕ್ಕೆ ಮಾನ್ಯತೆ ಇರಬೇಕು; ಏಕೆಂದರೆ, ಅಸಮಾನತೆಯನ್ನು ಮೂಲಾಧಾರವನ್ನಾಗಿ ಉಳ್ಳ ವ್ಯವಸ್ಥೆಯಲ್ಲಿ ಸಮಾನತೆಯನ್ನು ಅರಸುವ ಮೌಢ್ಯ ಹಳೆಯದಾಗಿಹೋಗಿದೆ.

ಶಿಕ್ಷಣಕ್ಕೆ ಸಂಬಂಧಿಸಿದ ಅನೇಕ ವರದಿಗಳ ಪೈಕಿ ಹೆಚ್ಚಿನ ಪ್ರಜಾಪ್ರಭುತ್ವವಾದಿ ಕ್ರಮಗಳನ್ನು ಸೂಚಿಸಿದ್ದು ಕೊಠಾರಿ ಆಯೋಗದ ವರದಿ (೧೯೬೪-೬೬) ಮತ್ತು ಅದನ್ನು ಸಂಪೂರ್ಣವಾಗಿ ನಿರಾಕರಿಸಿದ್ದು ಬಿರ್ಲಾ-ಅಂಬಾನಿ ವರದಿ (೨೦೦೨-೦೩). ಸಾಮಾನ್ಯ ಶಾಲಾ ವ್ಯವಸ್ಥೆ ಮತ್ತು ಸನಿಹದ ಶಾಲೆಯಲ್ಲಿ ಪ್ರವೇಶ, ಇವೆರಡೂ ಕೊಠಾರಿ ಸಲಹೆಗಳು. ೧೯೮೬ರ ಶಿಕ್ಷಣ ನೀತಿ ಸಹ ಸಾಮಾನ್ಯ ಶಾಲಾ ವ್ಯವಸ್ಥೆಯನ್ನು ಎತ್ತಿಹಿಡಿದಿತ್ತು ; ಸನಿಹದ ಶಾಲೆಯಲ್ಲಿ ಪ್ರವೇಶ ಎಂಬ ಕಲ್ಪನೆಯನ್ನು ಮಾತ್ರ ರದ್ದುಮಾಡಿತು. ಯಾವುದೇ ಒಂದು ಹಂತದಲ್ಲಿ ಕನಿಷ್ಠ ಕಲಿಕೆ ಯಾವ ಮಟ್ಟದ್ದೆಂದು ತೀರ್ಮಾನಿಸಿ ಅದರ ಆಧಾರದ ಮೇಲೆ ಎಲ್ಲ ಶಾಲೆಗಳಲ್ಲೂ ಪಠ್ಯವನ್ನು ಏಕಪ್ರಕಾರವಾಗಿಸುವುದು ಸಾಮಾನ್ಯ ಶಾಲಾ ವ್ಯವಸ್ಥೆಯ ಉದ್ದೇಶ. ಕಾರ್ಪೊರೇಷನ್ ಶಾಲೆಯಾದರೂ ಅಷ್ಟೇ , ಫ್ರಾಂಕ್ ಆಂತೋಣಿ ಶಾಲೆಯಾದರೂ ಅಷ್ಟೇ. ಒಬ್ಬ ಶ್ರೀನಿವಾಸ ರಾಮಾನುಜನ್ ಇದ್ದಾನೆಂದು ಪಠ್ಯವನ್ನು ಎಲ್ಲರಿಗೂ ಆತನ ಮಟ್ಟಕ್ಕೇರಿಸುವುದಿಲ್ಲ. ಸಮಾನರ ನಡುವೆ ಸ್ಪರ್ಧೆ ಏರ್ಪಡಲು

ಒನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☏ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☏ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☏ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☏ : ೦೮೪೭೨-೨೨೪೩೦೨




## ಜೂನ್ ಸಂಚಿಕೆ

**ಪ್ರೊ||** ಎಂ. ವಿ. ನಾಡಕರ್ಣಿ ಅವರ ಲೇಖನವು ಮೇಲ್ನೋಟಕ್ಕೆ ಸರಳ ಮತ್ತು ಕಾರ್ಯರೂಪಕ್ಕೆ ತರಬಹುದಾದ ಪರಿಹಾರ-ಸಲಹೆ, ಎನ್ನಿಸಿದರೂ ಭಾರತದಲ್ಲಿನ ಬಡತನದ ತೀವ್ರತೆಗೆ ಹೋಲಿಸಿದಾಗ ಅದೊಂದು ಸಂಕೀರ್ಣ, ಕ್ಲಿಷ್ಟಕರ, ಅಷ್ಟೇ ಅಲ್ಲದೆ ಮುಂದಿನದನ್ನು ಮೊದಲೇ ಊಹಿಸಿಕೊಂಡ, ಸಮಸ್ಯೆಯೆಂದು ಕಂಡು ಬರುತ್ತದೆ. ಭಾರತದಲ್ಲಿ ಬಡತನ ನಿರ್ಮೂಲನೆಗಾಗಿ ಉದ್ಯೋಗ ಆಶ್ವಾಸನೆ, ಸಂಪನ್ಮೂಲ ಸೃಷ್ಟಿಸಿಕೊಡುವ ವಿಧಾನಗಳನ್ನು ಪ್ರಸ್ತಾಪಿಸುತ್ತ ಲೇಖಕರು ಸಾಲ ನೀಡಿಕೆ ಮೂಲಕ ಬಡತನ ನಿರ್ಮೂಲನೆಗೆ ಸಲಹೆ ನೀಡಿದ್ದಾರೆ. ಲೇಖಕರ 'ಸಾಲ ನೀಡಿಕೆ' ಸಲಹೆ ಬಡಜನರು ಉದ್ಯಮ ಶೀಲತೆಯನ್ನು ಹೊಂದಿದ್ದಾರೆ ಎಂಬುದನ್ನು ಬಲವಾಗಿ ಊಹಿಸಿಕೊಳ್ಳುತ್ತದೆ. ಆದರೆ ವಾಸ್ತವವಾಗಿ ಭಾರತದಲ್ಲಿನ ೩೫ ಕೋಟಿ ಬಡಜನತೆ ತಮ್ಮ "ಸಾಮಾಜಿಕ ಹಿನ್ನೆಲೆ"ಯಲ್ಲಿನ ಸಾಂಪ್ರದಾಯಿಕ ಕೌಶಲಗಳನ್ನು ಸ್ವಲ್ಪಮಟ್ಟಿಗೆ ಬಳುವಳಿಯಾಗಿ ಪಡೆಯುತ್ತಾರೆ. ಇದನ್ನು ಹೊರತುಪಡಿಸಿದರೆ ಇವರೆಲ್ಲ ನಿರಕ್ಷರ-ಕುಕ್ಷಿಗಳಷ್ಟೇ ಅಲ್ಲದೆ ಸಂಪ್ರದಾಯ-ಮೂಢನಂಬಿಕೆಗಳಲ್ಲಿ ಮುಳುಗಿರುವವರು. ಈ ಕೌಶಲಗಳಿಂದ ಆಧುನಿಕ ಅರ್ಥವ್ಯವಸ್ಥೆಯಲ್ಲಿ (ಅದೂ ಮುಕ್ತ ವಾತಾವರಣದಲ್ಲಿ) ಸಾಲ ಮಾಡಿ ಯಾವುದೇ ಚಟುವಟಿಕೆ ನಡೆಸುವುದು ಅಥವಾ ಉತ್ಪಾದಕ ಚಟುವಟಿಕೆ ಗಳನ್ನು ಮುಂದುವರೆಸಿಕೊಂಡು ಹೋಗುವುದು ದುಸ್ತರ ಕೆಲಸ. ಸಾಮಾಜಿಕ ಅಂಶಗಳು ಬಲವಾಗಿರುವ ನಮ್ಮ ಅರ್ಥ ವ್ಯವಸ್ಥೆಯಲ್ಲಿ ಆರ್ಥಿಕ ಅಂಶಗಳು ಪ್ರಾಬಲ್ಯ ಪಡೆಯ ಬೇಕಾದರೆ ಅದಕ್ಕಾಗಿ ಹಲವು ಹಿಮ್ಮುಖ ಸಿದ್ಧತೆಗಳನ್ನು ಮಾಡಬೇಕಾಗುತ್ತದೆ.

ಸೇಡಂ — *ಬಿ. ಆರ್. ಅಣ್ಣಾಸಾಗರ್*

## ಜುಲೈ ಸಂಚಿಕೆ

ತಿಂಗಳು ಮುಗಿಯುವ ಮುಂಚಿತವಾಗಿಯೇ ನಮ್ಮ ಮನೆ-ಮನ ತಲುಪಿದ ಜುಲೈ-೦೫ರ 'ಹೊಸತು' ಸಂಚಿಕೆಯ ಮುಖಪುಟದ ಚಿತ್ರ ಅಬ್ಬಾ ವರ್ಣನಾತೀತ! ಬಿಟರ್ನ್ ಹಕ್ಕಿಯ ಚಿತ್ರವಂತೂ ಫ್ರೇಮ್ ಹಾಕಿಸುವಂತಿತ್ತು. ಇದನ್ನು ಸೆರೆಹಿಡಿದ ಛಾಯಾಗ್ರಾಹಕರಿಗೆ ಅಭಿನಂದನೆಗಳು. ಇದೇ ಸಂಚಿಕೆಯಲ್ಲಿ ಪ್ರಕಟವಾದ ಪ್ರಾಥಮಿಕ ಶಿಕ್ಷಣ – ಇಂಗ್ಲಿಷ್ ಕಲಿಕೆ ಬಗ್ಗೆ ನಾ. ದಿವಾಕರರವರ ಲೇಖನ ಗಮನ ಸೆಳೆಯಿತು. ಇಂದು ಕನ್ನಡದ ಜೊತೆ ಜೊತೆಯಲ್ಲಿಯೇ ಇಂಗ್ಲಿಷ್ ಶಿಕ್ಷಣ ಅನಿವಾರ್ಯವಾಗಿ ಬೇಕೇ ಬೇಕು. ಈ ವಿಷಯ ರಾಜಕೀಯವಾಗದಿರಲಿ.

ಮೈಸೂರು — *ಕಾಳೀಹುಂಡಿ ಕೆ. ವಿ. ಶಿವಕುಮಾರ್*

ಜಾಗತೀಕರಣದಿಂದಾಗಿ ಇಂಗ್ಲಿಷ್‌ನ ಪ್ರಾಮುಖ್ಯತೆ ಹೆಚ್ಚುತ್ತಿದೆ. ಆದ್ದರಿಂದ ಇಂಗ್ಲಿಷ್ ಕಲಿಕೆ ಅವಶ್ಯವಾಗಿ ಬೇಕಾಗಿದೆ. ಕೇವಲ ಹಣವಂತರಿಗೆ, ನಗರಗಳಲ್ಲಿರುವವರಿಗೆ ಮಾತ್ರ ಕಾನ್ವೆಂಟ್‌ಗಳಲ್ಲಿ ಇಂಗ್ಲಿಷ್ ಕಲಿಕೆ ದೊರೆಯುವುದರಿಂದ ಸರ್ಕಾರವೇ ನಡೆಸುವ ಗ್ರಾಮೀಣ ಪ್ರದೇಶದ ಹಾಗೂ ಬಡವರ ಮಕ್ಕಳು ಕಲಿಯುವ ಶಾಲೆಗಳವರು ಇಂಗ್ಲಿಷ್‌ನಿಂದ ವಂಚಿತರಾಗುತ್ತಾರೆ. ಪ್ರಥಮ ಭಾಷೆಯಾಗಿ ಕನ್ನಡವೇ ಇರಲಿ. ಒಂದನೆಯ ತರಗತಿಯಿಂದಲ್ಲದಿದ್ದರೂ ಮೂರನೆಯ ತರಗತಿಯಿಂದಲಾದರೂ ಸರ್ಕಾರಿ ಶಾಲೆಗಳಲ್ಲಿ ಇಂಗ್ಲಿಷ್ ಇರಲಿ. ಉತ್ತಮ ಇಂಗ್ಲಿಷ್ ಶಿಕ್ಷಕರನ್ನು ನೇಮಿಸಿ ಅಥವಾ ತರಬೇತಿ ನೀಡಿ ಕಲಿಸಲು ಆರಂಭಿಸುವುದು ಸೂಕ್ತ.

ಮಿಡಿಗೇಶಿ, ತುಮಕೂರು ಜಿಲ್ಲೆ — *ಶಿವರಾಮ ಎಮ್. ಎನ್.*

ಮನಮೋಹಕ ಹಕ್ಕಿಯ ಸುಂದರ ಮುಖಪುಟದ ಜೊತೆ 'ನಮ್ಮ ಮೇಷ್ಟ್ರು ರಾಮಚಂದ್ರ ಶರ್ಮ' ಲೇಖನವನ್ನು ಓದಿ ನಿಜವಾಗಿಯೂ ಸಂತೋಷವಾಯಿತು. ಆಂಗ್ಲಭಾಷೆಯ ಬಗ್ಗೆ ಇರುವ ಅಸಮಾಧಾನವನ್ನು ಶಿವಸುಂದರ್ ಅವರು ಅರ್ಥಪೂರ್ಣವಾಗಿ ವಿವರಿಸಿದ್ದಾರೆ. ಕಾವ್ಯಧಾರೆಯಲ್ಲಿ 'ರಂಗೋಲಿ' ತುಂಬಾ ಅರ್ಥಗರ್ಭಿತವಾಗಿದೆ. 'ಗಾದೆಗಳಲ್ಲಿ ಗಮ್ಮತ್ತು' ನಮ್ಮ ಹಳ್ಳಿಯ ಪರಿಸರವನ್ನು ಜ್ಞಾಪಿಸಿತು. ಮಾಂಸಾಹಾರ ವರ್ಜ್ಯವೆ ? ಎಂಬುದು ಅವರವರ ಭಾವಕ್ಕೆ




ಎಂಬಂತೆ. ಅತಿಯಾದರೆ ಎಲ್ಲವೂ ಕೆಡಕು, ಅದನ್ನು ತಿಳಿದು ನಡೆದರೆ ಒಳಿತು.

ವಿಠಲಾಪುರ, ಮಂಡ್ಯ ಜಿಲ್ಲೆ — *ಆ. ಮೃತ್ಯುಂಜಯ*

ಭಾರತವಿರುವುದು ತನ್ನ ಸುಂದರ ಹಳ್ಳಿಗಳಲ್ಲಿ ಎಂದ ಮಹಾತ್ಮಾ ಗಾಂಧೀಜಿಯವರ ತತ್ತ್ವಗಳಿಗೆ ತಿಲಾಂಜಲಿಯಿತ್ತ ಸ್ವಾತಂತ್ರ್ಯಾನಂತರದ ಸರಕಾರಗಳು, ನರಕಸದೃಶ ನಗರಗಳು ಹಾಗೂ ಮಿಲಿಟರಿ ವ್ಯವಸ್ಥೆಗಳು ಬೆಳೆಯಲು ಸಾಕಷ್ಟು ಸಂಪತ್ತನ್ನು ವ್ಯಯಿಸುತ್ತಿರುವುದರಿಂದಾಗಿ ರಾಷ್ಟ್ರ ನಿರ್ಮಾಣ ಎಂಬುದು ಕೇವಲ ಭ್ರಮೆಯಾಗಿ ಉಳಿದಿದೆ. ಅದರಿಂದ ಉಂಟಾಗಿರುವ ಪರಿಣಾಮಗಳ ಬಗ್ಗೆ ಡಾ|| ಕೆ. ಎಸ್. ಕೃಷ್ಣಸ್ವಾಮಿ ಅವರು ಮನಮುಟ್ಟುವಂತೆ ವಿವರಿಸಿದ್ದಾರೆ. ಹತ್ತು ಹಲವು ಯೋಜನೆಗಳನ್ನು ಸರಕಾರ ಹಮ್ಮಿಕೊಂಡು ಗ್ರಾಮಾಭಿವೃದ್ಧಿಯನ್ನು ಕೇವಲ ಪತ್ರಿಕೆಗಳಲ್ಲಿ ಮತ್ತು ಪ್ರಚಾರಕ್ಕಾಗಿ ಬಳಸಿಕೊಂಡಿದ್ದು ರಾಜಕೀಯ ಲಾಭಕ್ಕಾಗಿ ಮಾತ್ರ. ಹಾಗೆಯೇ ರಿಸರ್ವ್ ಬ್ಯಾಂಕ್ ಜಾರಿಗೆ ತಂದ ಸುಧಾರಣೆಗಳು ಬಡವರನ್ನು ತಲುಪದಂತೆ ಎಚ್ಚರಿಕೆ ವಹಿಸಿ ಅದನ್ನು ಬಳಸಿದವರು ಸಹ ರಾಜಕಾರಣಿಗಳು ಎಂಬುದು ನಗ್ನಸತ್ಯವಾಗಿದೆ. ಕನಿಷ್ಠ ಕಾರ್ಯಕ್ರಮ ಮತ್ತು ಮೂಲಭೂತ ಸೌಕರ್ಯಗಳು ಎಂಬುದು ಕೇವಲ ಪ್ರಚಾರವಾಗಿ ಅವುಗಳ ಬಗ್ಗೆ ದುಡಿಯುತ್ತಾ ಸದಾ ಮಳೆಗಾಗಿ ಆಕಾಶವನ್ನು ದಿಟ್ಟಿಸುತ್ತಿರುವ ರೈತನ ಬಗ್ಗೆ ಪರಿವೇ ಇಲ್ಲದಿರುವುದು ನಮ್ಮ ಸಾಮಾಜಿಕ ಕಳಕಳಿಯನ್ನು ಬಿಂಬಿಸುತ್ತಿದೆ. ರಕ್ಷಣಾ ವೆಚ್ಚವನ್ನು ತಗ್ಗಿಸಿ ಗ್ರಾಮಜನತೆಯ ಮೂಲಭೂತ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸಿ ಅವುಗಳಿಗೆ ಸೂಕ್ತ ಪರಿಹಾರವನ್ನು ಕಂಡುಕೊಳ್ಳುವಲ್ಲಿ ಸದಾ ನಿರತರಾದರೆ ಭಾರತದ ಆರ್ಥಿಕ ರಂಗ ಸದಾಕಾಲ ಸುಸ್ಥಿತಿಯಲ್ಲಿರಬಲ್ಲದು ಎಂಬ ಸರಳ ಜ್ಞಾನದಿಂದ ಮುನ್ನಡೆಯಬಹುದು. ಆದರೆ, ಇಂದಿನ ಸರಕಾರಗಳು ಕೇವಲ ಅಧಿಕಾರ ಮತ್ತು ಸಂಪತ್ತು ಗಳಿಕೆಗಾಗಿ ನಿರ್ಲಕ್ಷಿಸಿರುವುದರಿಂದ ನಮ್ಮ ಎಲ್ಲಾ ವಿತ್ತನೀತಿಗಳು ಅರ್ಥವಿಹೀನವಾಗಿವೆ.

ಎಚ್.ಎ.ಎಲ್., ಬೆಂಗಳೂರು — *ನರೇಂದ್ರ ಸಿರಕಜೆ*

ವಿಜಯ ಆರ್. ಕಾಂಬಳೆ ಅವರ 'ಜಾತಿ ಆಧಾರದ ಮೀಸಲಾತಿಯ ಪ್ರಸ್ತುತತೆ' ಎಂಬ ಲೇಖನವನ್ನು ಕುತೂಹಲದಿಂದಲೇ ಓದಿದೆ. ಲೇಖನದುದ್ದಕ್ಕೂ ಜಾತಿ ಆಧಾರದ ಮೀಸಲಾತಿಯನ್ನು ಅತ್ಯಂತ ಸಮರ್ಥವಾಗಿ ಪ್ರತಿಪಾದನೆ ಮಾಡಿದ್ದಾರೆ. ಆದರೆ ಲೇಖಕರು ಮಾದಿಗರ ಒಳಮೀಸಲಾತಿ ಬೇಡಿಕೆಯನ್ನು ವಿರೋಧಿಸಿದ್ದು ವಿಚಿತ್ರವಾಗಿ ಕಂಡಿತು. ಮಾದಿಗರ ಒಳಮೀಸಲಾತಿ ಬೇಡಿಕೆಯೂ ಜಾತಿ ಆಧಾರಿತವೇ. ಅವರು ಮೀಸಲಾತಿ ತಮಗೆ ಮಾತ್ರ ಬೇಕೆನ್ನುತ್ತಿಲ್ಲ. ಪರಿಶಿಷ್ಟ ಜಾತಿಯಲ್ಲಿ ಬರತಕ್ಕಂತಹ ಎಲ್ಲ ಉಪಜಾತಿಗಳಿಗೆ ಆಯಾ ಜನಸಂಖ್ಯೆಗನುಗುಣವಾಗಿ ಹಂಚಿಕೆಯಾಗಬೇಕೆನ್ನುವುದು ಮುಖ್ಯ ಆಶಯ. ಇಲ್ಲಿ ದಲಿತ ಸಮುದಾಯಗಳಲ್ಲಿ ಒಡಕಿನ ಪ್ರಶ್ನೆಯಾಗಲಿ, ಸಾಮಾಜಿಕ ಸಮಸ್ಯೆಯಾಗಲಿ ಬರುವುದಿಲ್ಲ. ಈ ಒಳಮೀಸಲಾತಿ ನ್ಯಾಯಯುತವಾಗಿ ಹಂಚಿಕೆಯಾದರೆ ಪರಸ್ಪರರಲ್ಲಿ ಸಾಮರಸ್ಯ, ಹೊಂದಾಣಿಕೆ ಮನೋಭಾವ ಬೆಳೆಯುತ್ತದೆ.

ಸಾಲಹಳ್ಳಿ, ಬೆಳಗಾವಿ ಜಿಲ್ಲೆ — *ಡಾ|| ಎಸ್ಸಾರ್ ರಾಮರಥ*

ಸಂಸ್ಕೃತಿಗಳ ಸಂಗಮ: ಯಾವುದೇ ಸಮಾಜ ಎಷ್ಟೇ 'ಮಡಿವಂತಿಕೆ' ಸಾಧಿಸಲು ಯತ್ನಿಸಿದರೂ ಉಳಿಯದು. ಅದು ಸಂಪದ್ಭರಿತ ದೇಶದ ಕಡೆ ಅದಕ್ಕಾಗಿಯೇ ಹುಡುಕಿಕೊಂಡು ಎಲ್ಲ ಕಡೆಯಿಂದ ನಾನಾ ಕಾರಣಗಳಿಗಾಗಿ ಹೊರಗಿನವರು ಬಂದೇಬರುತ್ತಾರೆ. ಅವರು ತಂತಮ್ಮ ಸಮಾಜದ ವಿಶಿಷ್ಟ ಕೊಡುಗೆಗಳನ್ನು ಕೊಡುತ್ತಾರೆ, ಇಲ್ಲದ್ದನ್ನು ಪಡೆಯುತ್ತಾರೆ. ಕೊಡು-ಕೊಳ್ಳುವಿಕೆಯ ಪರಿಣಾಮವೇ ಸಂಸ್ಕೃತಿ ಸಂಗಮ. ಗ್ರೀಕ್, ಪಾರಸಿ, ಇಸ್ಲಾಮೀ ಹಾಗೂ ಐರೋಪ್ಯ ಎಲ್ಲವೂ ನಮ್ಮ ಸಂಸ್ಕೃತಿಯೊಡನೆ ಮಿಲನಗೊಂಡಿರುವುದನ್ನು ಪ್ರಭು ಅವರು ವಿವರಿಸಿ, "ಆದರೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡಿದೆ, ಉಳಿಸಿಕೊಂಡಿದೆ" ಎಂದು ಹೆಚ್ಚಳಿಕೆಯನ್ನು ಮೆಚ್ಚುವುದನ್ನು ಮರೆತಿಲ್ಲ.

ಸಾಗರ — *ಬ. ನಾ. ರಘುರಾಮ*

ಸಮುದ್ರ ತೀರದಲ್ಲಿ ಏನೂ ಸಸ್ಯಗಳು ಬೆಳೆಯದೇ ಇದ್ದಾಗ ಮೀನುಗಾರಿಕೆಯಿಂದ ಜೀವನ ನಡೆಸುವುದು ಸ್ವಾಭಾವಿಕ.

'ಪತ್ರಗಳು' ವಿಭಾಗಕ್ಕೆ ಬರೆಯುವ ಓದುಗರು ತಮ್ಮ ಪೂರ್ಣ ವಿಳಾಸವನ್ನು ಕೊಡಬೇಕಾಗಿ ವಿನಂತಿ. ಇಲ್ಲದಿದ್ದರೆ ಅದನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಪತ್ರಗಳು ಸಂಕ್ಷಿಪ್ತವಾಗಿರಬೇಕಾದ್ದು ಅತ್ಯವಶ್ಯಕ.

**– ಸಂಪಾದಕರು**

ದವಸ-ಧಾನ್ಯ ಸಿಕ್ಕರೂ ನಾಲಿಗೆಯ ಚಪಲಕ್ಕೋಸ್ಕರ ಮಾಂಸಾಹಾರದಿಂದ ಬದುಕುವುದು ಹೇಯವೆನಿಸುವುದು.

ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ
ಹಲವು ಪ್ರಾಣಿಯ ಕೊಂದು ನಲಿನಲಿದಾಡುವ
ತನ್ನ ಮನೆಯಲ್ಲೊಂದು ಶಿಶು ಸತ್ತಡೆ
ಅದಕ್ಕೆ ಮರುಗುವಂತೆ ಅವಕೇಕೆ ಮರುಗನು ?
ಜಾಲಗಾರನ ದುಃಖ ಜಗಕೆಲ್ಲ ನಗೆಗೆಡೆ
ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನ
ಭಕ್ತನಾಗಿರ್ದು ಜೀವ ಹಿಂಸೆಯ ಮಾಡುವ
ಮಾದಿಗರನೇನೆಂಬೆನಯ್ಯಾ

ಎನ್ನುವ ಅಕ್ಕಮಹಾದೇವಿಯ ವಚನದ ಅನುಭಾವಕ್ಕೆ ಮಾನವರು ತಲೆದೂಗಲೇಬೇಕು. ಸಸ್ಯಾಹಾರ ಕಡ್ಡಾಯ - ಮಾಂಸಾಹಾರ ವರ್ಜ್ಯ ಎಂದು ಹೇಳಿರುವುದು ಕಾಲ, ಸ್ಥಳ ವಯೋಮಾನಕ್ಕೆ ತಕ್ಕಂತೆ ಹೇಳಿದ್ದಾರೆಯೇ ವಿನಾ ಕಡ್ಡಾಯವಾಗಿ ಹೇಳಿಲ್ಲ.

ಬಳ್ಳಾರಿ **ನಾ. ಮ. ಸಿದ್ಧರಾಮಯ್ಯ**

## ನಮಗೆ ಬೇಕಾದ ಇಂಗ್ಲಿಷ್

ಹಳ್ಳಿಗಾಡಿನ ಹಿಂದುಳಿದ ವರ್ಗಗಳ ಕನ್ನಡ ಮಾಧ್ಯಮದ ಮಕ್ಕಳಿಗೆ ನಗರಗಳ, ಮುಂದುವರೆದ ವರ್ಗಗಳ, ಇಂಗ್ಲಿಷ್ ಮಾಧ್ಯಮದ ಮಕ್ಕಳಿಗೆ ಇರುವಂತೆ ಹೆಚ್ಚು ಚೆನ್ನಾಗಿ ಇಂಗ್ಲಿಷ್ ಕಲಿಯುವ ಅವಕಾಶವಿಲ್ಲ. ಆದ್ದರಿಂದ ಎಲ್ಲರಿಗೂ ಪ್ರಾಥಮಿಕ ಮೊದಲನೆಯ ತರಗತಿಯಿಂದಲೇ ಇಂಗ್ಲಿಷ್ ಕಲಿಸಬೇಕು; ಇದು ಸಾಮಾಜಿಕ ನ್ಯಾಯದ ಪ್ರಶ್ನೆ ಎನ್ನುವ ಬೇಡಿಕೆ ಈಗ ಕೇಳಿಬರುತ್ತಿದೆ. ಸಮಸ್ಯೆ ಗಂಭೀರವಾಗಿದ್ದು ಅದರ ಬಗ್ಗೆ ತೋರುತ್ತಿರುವ ಕಳಕಳಿ ಪ್ರಾಮಾಣಿಕವೇ ಆಗಿದ್ದರೂ ಸಮಸ್ಯೆಯ ಕಾರಣ ಮತ್ತು ಪರಿಹಾರಗಳನ್ನು ತಜ್ಞರಲ್ಲದವರು ತಪ್ಪಾಗಿ ಪ್ರತಿಪಾದಿಸುತ್ತಿದ್ದಾರೆ. ನ್ಯಾಯಾಲಯದ ತೀರ್ಪಿಗೆ ಅನುಗುಣವಾಗಿ ಘೋಷಿಸಿರುವ ಕರ್ನಾಟಕ ಸರಕಾರದ ಭಾಷಾ ನೀತಿಯ ಪ್ರಕಾರ ಪ್ರಾಥಮಿಕ ಶಾಲೆ ಒಂದರಿಂದ ನಾಲ್ಕನೆಯ ತರಗತಿಯವರೆಗೆ ಒಂದೇ ಭಾಷೆಯಲ್ಲಿ ಶಿಕ್ಷಣ ನೀಡಬೇಕು; ಎರಡನೆಯ ಭಾಷೆಗೆ ಅವಕಾಶವಿಲ್ಲ. ಒಂದರಿಂದ ಮೂರನೆಯ ತರಗತಿಯವರೆಗೆ ಒಂದು ಭಾಷೆಯನ್ನು ಮಾತ್ರ ಕಲಿಸಬೇಕು. ಕನ್ನಡೇತರ ಮಾತೃಭಾಷೆಯ ಮಕ್ಕಳಿಗೆ ಮೂರನೆಯ ತರಗತಿಗೆ ಮೊದಲು ರಾಜ್ಯ ಭಾಷೆ ಕನ್ನಡವನ್ನೂ ಕಲಿಸುವಂತಿಲ್ಲ. ಹೀಗಿರುವಾಗ ಮಾತೃಭಾಷೆ, ಪರಿಸರದ ಅಥವಾ ರಾಜ್ಯಭಾಷೆ ಯಾವುದೂ ಅಲ್ಲದ ಇಂಗ್ಲಿಷನ್ನು ಮೊದಲನೆಯ ತರಗತಿಯಿಂದಲೇ ಮಾಧ್ಯಮವಾಗಿ ಮಾತ್ರವಲ್ಲ ಒಂದು ಭಾಷೆಯಾಗಿಯೂ ಕಲಿಸಲು ಸಾಧ್ಯವಿಲ್ಲ.

ಸರ್ವೋನ್ನತ ನ್ಯಾಯಾಲಯದ ಆದೇಶ ಪೂರ್ಣವಾಗಿ ಜಾರಿಗೆ ಬಂದಾಗ ಎಲ್ಲ ಕಡೆ ಕನ್ನಡ ಮಾಧ್ಯಮ-ಇಂಗ್ಲಿಷ್ ಮಾಧ್ಯಮ ಹಳ್ಳಿ-ನಗರ ಶಾಲೆಗಳು ಎಂಬ ಭೇದವು ಅಳಿಸಿ ಹೋಗಿ ಶೈಕ್ಷಣಿಕ, ಸಾಮಾಜಿಕ ಅಸಮಾನತೆ ಕಣ್ಮರೆ ಯಾಗುತ್ತದೆ. ಎಲ್ಲರೂ ತಮ್ಮ ಮಾತೃಭಾಷೆ ಅಥವಾ ಎರಡನೆಯ ಮಾತೃಭಾಷೆಯಾದ ರಾಜ್ಯಭಾಷೆಯಲ್ಲಿ ಸಮಾನ ಶಿಕ್ಷಣ ಪಡೆದು, ಸಮಾನವಾಗಿ ಸ್ಪರ್ಧಿಸುವ ಅವಕಾಶ ಪಡೆಯುತ್ತಾರೆ. ಎರಡನೆಯ ಭಾಷೆಯನ್ನು ಕಲಿಯುವ ವರ್ಷದಿಂದ ಅಂದರೆ ಮೂರನೆಯ ತರಗತಿಯಿಂದ ಎಲ್ಲರೂ ಸಮಾನವಾಗಿ ಇಂಗ್ಲಿಷನ್ನು ಕಲಿಯುತ್ತಾರೆ. ಆದ್ದರಿಂದ ಸರ್ವೋನ್ನತ ನ್ಯಾಯಾಲಯದ ಮೆಚ್ಚುಗೆಯನ್ನೂ ಸಂವಿಧಾನದ ಪೀಠದ ಅನುಮೋದನೆಯನ್ನೂ ಪಡೆದಿರುವ ಸರಕಾರದ ಶಿಕ್ಷಣ ನೀತಿಯ ಆದೇಶ ಪೂರ್ಣವಾಗಿ ಜಾರಿಯಾಗುವುದಕ್ಕೆ ಅಗತ್ಯವಾದ ಕ್ರಮವನ್ನು ಕೂಡಲೇ ಕೈಗೊಳ್ಳಬೇಕು. ಎರಡನೆಯ ಭಾಷೆಯಾಗಿ ಇಂಗ್ಲಿಷನ್ನು ಪರಿಣಾಮಕಾರಿಯಾಗಿ ಬೋಧಿಸುವ ಬಗ್ಗೆ ಈವರೆಗೆ ನಡೆದಿರುವ ಸಂಶೋಧನೆ ಮತ್ತು ಅಭಿವೃದ್ಧಿ ಕಾರ್ಯಗಳು ತುಂಬ ಕಡಿಮೆ. ಮಕ್ಕಳು ಇಂಗ್ಲಿಷ್‌ನಲ್ಲಿ ಅನುತ್ತೀರ್ಣರಾಗುತ್ತಿರುವುದರಿಂದ ಹತಾಶರಾದ ಪೋಷಕರು ಇಂಗ್ಲಿಷ್ ಮಾಧ್ಯಮದ ಮಕ್ಕಳಂತೆ ತಮ್ಮ ಮಕ್ಕಳೂ ಒಂದನೆಯ ತರಗತಿಯಿಂದಲೇ ಇಂಗ್ಲಿಷ್ ಕಲಿತರೆ ಅನುಕೂಲವಾಗುತ್ತದೆ ಎಂಬ ಸ್ವಾಭಾವಿಕ ನಿರೀಕ್ಷೆಯಿಂದ ಒತ್ತಾಯಿಸುತ್ತಿದ್ದಾರೆ. ಆದರೆ ಇಂಗ್ಲಿಷ್ ಮೊದಲ ಭಾಷೆಯವರಲ್ಲದವರಿಗೆ ಇಂಗ್ಲಿಷನ್ನು ಮೊದಲ ಭಾಷೆಯನ್ನು ಕಲಿಸುವ ಕ್ರಮದಲ್ಲಿ ಯಾವ ವಿಶೇಷ ತರಬೇತಿ ಪಡೆದಿಲ್ಲದ ಶಿಕ್ಷಕರು ಕಲಿಸುತ್ತಿರುವುದರಿಂದ ನಿರೀಕ್ಷಿತ ಫಲ ದೊರೆಯುತ್ತಿಲ್ಲ; ದೊರೆಯುವುದು ಸಾಧ್ಯವೂ ಇಲ್ಲ. ಇನ್ನು ಐದು ವರ್ಷಗಳಲ್ಲಿ ಎರಡನೆಯ ಭಾಷೆಯಾಗಿ ಇಂಗ್ಲಿಷನ್ನು ಕಲಿಸುವ ಬಗ್ಗೆ ಅಗತ್ಯ ಸಂಶೋಧನೆ ನಡೆಸದಿದ್ದರೆ ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಸಿ ಎಂದು ಈಗ ಒತ್ತಾಯಿಸು ತ್ತಿರುವ ಹತಾಶ ಪೋಷಕರು ಒಂದನೆಯ ತರಗತಿಯಿಂದ ಇಂಗ್ಲಿಷ್ ಮಾಧ್ಯಮವೇ ಬೇಕು ಎಂದು ಒತ್ತಾಯಿಸಿದರೆ ಆಶ್ಚರ್ಯವಿಲ್ಲ ಎಂದು ಎನ್‌ಸಿಇಆರ್‌ಟಿ ಎಚ್ಚರಿಸಿದೆ.

ಕರ್ನಾಟಕದಲ್ಲಿ ಎರಡನೆಯ ಭಾಷೆಯಾದ ಇಂಗ್ಲಿಷನ್ನು ಎರಡನೆಯ ಭಾಷೆಯನ್ನು ಕಲಿಸುವ ಕ್ರಮದಲ್ಲಿ ಕಲಿಸಬೇಕು. ಅದಕ್ಕಾಗಿ ಅಗತ್ಯವಾದ ವಿಶೇಷ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಬೇಕು. ರಾಜ್ಯಾದ್ಯಂತ ಶಿಕ್ಷಕರಿಗೆ ಎರಡನೆಯ ಭಾಷಾ ಬೋಧನೆಯಲ್ಲಿ ಪರಿಣತರಾದವರಿಂದ ವಿಶೇಷ ತರಬೇತಿ ಕೊಡಿಸಬೇಕು. ಇಂದು ಎಲ್ಲ ಕಡೆಗಳಲ್ಲಿ ಸ್ವಲ್ಪ ಸಮಯದಲ್ಲಿಯೇ ಪರಿಣಾಮಕಾರಿಯಾದ ವ್ಯಾವಹಾರಿಕ ಇಂಗ್ಲಿಷನ್ನು ಕಲಿಸುವ ತರಗತಿಗಳು ಕಾಣಸುತ್ತಿವೆ. ಈ ತರಗತಿಗಳಲ್ಲಿ ಇಂಗ್ಲಿಷ್ ಮಾತೃಭಾಷೆಯಲ್ಲದವರಿಗೆ ಕೆರಿಯರ್ ಇಂಗ್ಲಿಷ್, ಎಕ್ಸಿಕ್ಯೂಟಿವ್ ಇಂಗ್ಲಿಷ್, ಕಾಲ್ ಸೆಂಟರ್ ಇಂಗ್ಲಿಷ್ ಮೊದಲಾದ ವಿವಿಧ ಬಗೆಯ ಇಂಗ್ಲಿಷ್ ಗಳನ್ನು ಪರಿಣಾಮಕಾರಿಯಾಗಿ ಸ್ವಲ್ಪ ಸಮಯದಲ್ಲಿಯೇ ಕಲಿಸುತ್ತಾರೆ. ಇದು ಎರಡನೆಯ ಭಾಷೆಯನ್ನು ಬೋಧಿಸುವ ಕ್ರಮವನ್ನು ಅನುಸರಿಸುವುದರಿಂದ ಸಾಧ್ಯವಾಗಿದೆ. ಎಲ್ಲ ಮಕ್ಕಳಿಗೆ ಇಂಗ್ಲಿಷನ್ನು ಮೊದಲ ಭಾಷೆಯಾಗಿ ಕಲಿಸುವುದು ಸಾಧ್ಯವಿಲ್ಲ; ಅಗತ್ಯವೂ ಇಲ್ಲ. ಅದರ ಬಗ್ಗೆ ಆಸಕ್ತಿಯುಳ್ಳ ವವರು ಉನ್ನತ ತರಗತಿಗಳಲ್ಲಿ ಅದಕ್ಕಾಗಿ ವಿಶೇಷ ಅಧ್ಯಯನವನ್ನು ಕೈಗೊಳ್ಳುತ್ತಾರೆ. ಎಲ್ಲರಿಗೆ ಶೈಕ್ಷಣಿಕವಾಗಿ, ವ್ಯಾವಹಾರಿಕವಾಗಿ ಬೇಕಾಗುವ ಇಂಗ್ಲಿಷನ್ನು ಪರಿಣಾಮ ಕಾರಿಯಾಗಿ ಕಲಿಸುವುದು ಇಂದಿನ ಅಗತ್ಯ.

ಆದ್ದರಿಂದ ನಮಗೆ ಇಂದು ಅಗತ್ಯವಾಗಿರುವ ಎರಡನೆಯ ಭಾಷೆಯಾದ ಇಂಗ್ಲಿಷನ್ನು ಅಗತ್ಯ ಸಿದ್ಧತೆಗಳನ್ನು ಮಾಡಿಕೊಂಡ ಅನಂತರವೇ ಕಲಿಸಲು ಆರಂಭಿಸಬೇಕು. ಮೊದಲು ನ್ಯಾಯಾಲಯದ ತಡೆಯಾಜ್ಞೆಯನ್ನು ತೆರವು ಮಾಡಿಸಿ ಸರಕಾರದ ಭಾಷಾ ನೀತಿ ಪೂರ್ಣವಾಗಿ ಜಾರಿ ಯಾಗಲು ಅವಕಾಶ ಮಾಡಿಕೊಡಬೇಕು. ಆಗ ಈಗಿರುವ ಎಲ್ಲ ಇಂಗ್ಲಿಷ್ ಮಾಧ್ಯಮ ಶಾಲೆಗಳು ಮಾತೃಭಾಷೆ/ರಾಜ್ಯ ಭಾಷಾ ಮಾಧ್ಯಮದ ಶಾಲೆಗಳಾಗಿ ಪರಿವರ್ತಿತವಾಗುತ್ತವೆ. ಮೊದಲಿನ ಎರಡು ವರ್ಷಗಳಲ್ಲಿ ಅಗತ್ಯ ಪಠ್ಯಕ್ರಮ, ಪಠ್ಯ ಪುಸ್ತಕಗಳನ್ನು ಸಿದ್ಧಗೊಳಿಸಿ ಶಿಕ್ಷಕರಿಗೆ ತರಬೇತಿ ನೀಡಬೇಕು. ಅನಂತರ ಎಲ್ಲ ಮಕ್ಕಳು ಮೂರನೆಯ ತರಗತಿಯಿಂದ ಸಮಾನವಾಗಿ ಇಂಗ್ಲಿಷನ್ನು ಕಲಿಯುತ್ತಾರೆ.

ಇಂಗ್ಲಿಷನ್ನು ಹೇಗೆ ಮತ್ತು ಯಾವ ವರ್ಷದಿಂದ ಪರಿಣಾಮಕಾರಿಯಾಗಿ ಕಲಿಸಬಹುದು ಎಂಬ ಶೈಕ್ಷಣಿಕ ವಿಷಯವನ್ನು ರಾಜಕೀಯಗೊಳಿಸದೆ ಶಿಕ್ಷಣ ತಜ್ಞರಿಗೆ ಬಿಡುವುದು ವಿವೇಕಯುತ.

ಮೈಸೂರು **ಡಾ॥ ಪಂಡಿತಾರಾಧ್ಯ**

> ಗುರುರಾಜ ಪ್ರಕಾಶನದಿಂದ 'ತಾಯಿ' ಎಂಬ ಹನಿಗವನ ಸಂಕಲನವನ್ನು ಹೊರತರಲು ಉದ್ದೇಶಿಸ ಲಾಗಿದೆ. ಒಬ್ಬರು ಎಷ್ಟು ಬೇಕಾದರೂ ಹನಿಗವನಗಳನ್ನು ಕಳುಹಿಸಬಹುದು. ಆಸಕ್ತಿಯುಳ್ಳವರು ಆರು ಸಾಲು ಮೀರದ ಹನಿಗವನಗಳನ್ನು ೩೦-೯-೨೦೦೫ರೊಳಗೆ ಕಳುಹಿಸಲು ಕೋರಲಾಗಿದೆ.
>
> **ಕೋ. ಲ. ರಂಗನಾಥರಾವ್**
> ನಂ.೨೩೬, ೧೧ನೇ ಮುಖ್ಯರಸ್ತೆ, ಏಜೀಸ್ ಕಾಲೋನಿ
> ಅರೇಹಳ್ಳಿ, ಬೆಂಗಳೂರು - ೫೬೦ ೦೬೧

## ಮಾತೃಭಾಷಾ ಶಿಕ್ಷಣ

ಒಂದನೆಯ ತರಗತಿಯಿಂದಲೇ ಇಂಗ್ಲಿಷ್ ಕಲಿಸ ಬೇಕೆನ್ನುವ ಬಗ್ಗೆ ಈಗ ಪರ ವಿರೋಧ ಚರ್ಚೆ ನಡೆಯುತ್ತಲೇ ಇದೆ. ಮಾತೃಭಾಷಾ ಶಿಕ್ಷಣವೇ ಮಗುವಿಗೆ ಒಳ್ಳೆಯದು ಎಂಬುದರಲ್ಲಿ ಎರಡು ಮಾತಿಲ್ಲ. ಈ ಬಗ್ಗೆ ಡಾ॥ ಪ್ರಭಾಕರ ಶಿಶಿಲ 'ದೇಶ ಯಾವುದಾದರೇನು' ಎಂಬ ತಮ್ಮ ಪುಸ್ತಕದಲ್ಲಿ ಒಂದು ಅನುಭವವನ್ನು ದಾಖಲಿಸಿದ್ದಾರೆ. ಫ್ರಾನ್ಸಿನ ಒಬ್ಬ ತಜ್ಞರೊಡನೆ ಅವರ ಸಂವಾದ ಭಾಗಶಃ ಹೀಗಿದೆ: "ನೀವು ಸ್ವಾತಂತ್ರ್ಯ ಗಳಿಸಿ ೫೦ ವರ್ಷಗಳಾದುವು ಎಂದು ಹೇಳುತ್ತೀರಿ. ಇನ್ನು ಕೂಡಾ ನಿಮ್ಮದೇ ಭಾಷೆಯನ್ನು ಶಿಕ್ಷಣ ಮಾಧ್ಯಮ ವಾಗಿಸಲು ನಿಮಗೇಕೆ ಸಾಧ್ಯವಾಗಿಲ್ಲ? ಇಂಗ್ಲಿಷನ್ನು ಕಲಿಯೋದೇ ಬೇರೆ, ಇಂಗ್ಲಿಷಿನಲ್ಲಿ ಕಲಿಯೋದೆ ಬೇರೆ. ಆಸಕ್ತಿ ಸಮಯವಿದ್ದರೆ ಇಂಗ್ಲಿಷ್ ಮಾತ್ರ ಅಲ್ಲ ಫ್ರೆಂಚ್, ಜರ್ಮನ್, ಸ್ಪ್ಯಾನಿಷ್ ಹೀಗೆ ಏನನ್ನು ಬೇಕಾದರೂ ಕಲಿಯಿರಿ. ಆದರೆ ನಿಮ್ಮ ದೇಶದ ಇತಿಹಾಸ, ನಿಮ್ಮ ಸಮಾಜ, ನಿಮ್ಮ ಅರ್ಥವ್ಯವಸ್ಥೆ, ನಿಮ್ಮ ಕಾನೂನುಗಳನ್ನು ನಿಮ್ಮ ಭಾಷೆಯಲ್ಲಿ ಅರ್ಥಮಾಡಿಕೊಳ್ಳುವುದು ಸುಲಭವೊ ಇಂಗ್ಲಿಷಿನಲ್ಲೊ? ಇವುಗಳ ಜತೆ ಸೈನ್ಸ್, ಮೆಡಿಕಲ್, ಎಂಜಿನಿಯರಿಂಗನ್ನು ನಿಮ್ಮದೇ ಭಾಷೆಯಲ್ಲಿ ಚೆನ್ನಾಗಿ ಅರ್ಥ ಮಾಡಿಕೊಂಡು ಅತ್ಯಂತ ಸುಲಭವಾಗಿ ಏಕೆ ಕಲಿಯ ಬಾರದು ? ಈಗಿನದ್ದು ಏನಿದ್ದರೂ ಉರುಹೊಡೆದ ಜ್ಞಾನ ತಾನೆ ?" ಅದಕ್ಕೆ ಶಿಶಿಲರ ಉತ್ತರ: "ಕಲಿಯಬಹುದು, ಆದರೆ ಮೆಡಿಸಿನ್ ಮತ್ತು ಎಂಜಿನಿಯರಿಂಗ್ ಬಗ್ಗೆ ಭಾರತೀಯ ಭಾಷೆಗಳಲ್ಲಿ ಸಾಕಷ್ಟು ಪುಸ್ತಕ ರಚನೆಯಾಗಿಲ್ಲ. ಕನ್ನಡದಲ್ಲಿ ಕಂಪ್ಯೂಟರ್ ಸಾಫ್ಟ್‌ವೇರನ್ನು ಸಾಕಷ್ಟು ಅಭಿವೃದ್ಧಿಪಡಿಸಿಲ್ಲ. ಅಲ್ಲದೆ ಸರಕಾರ ಕೂಡ ಮಾಧ್ಯಮದ ಬಗ್ಗೆ ಸರಿಯಾದ ನೀತಿ ರೂಪಿಸಿಲ್ಲ. ಇರುವ ನೀತಿಯೂ ಅನುಷ್ಠಾನದಲ್ಲಿಲ್ಲ."

"ನೀನು ಎಲ್ಲವನ್ನು ಇಲ್ಲ ಎನ್ನುತ್ತೀಯೆ! ಇವನ್ನು ಮಾಡ ಬೇಕಾದವರು ಯಾರು? ಕಂಪ್ಯೂಟರ್ ಮತ್ತು ಎಲೆಕ್ಟ್ರಾನಿಕ್ಸ್‌ನಲ್ಲಿ ನಿನ್ನ ಬೆಂಗಳೂರು ಇಲ್ಲಿಯೂ ಪ್ರಸಿದ್ಧ. ಹಾಗಿದ್ದೂ ನಿಮ್ಮದೇ ಭಾಷೆಯಲ್ಲಿ ಇವೆಲ್ಲವನ್ನು ಮಾಡಿ ಕೊಂಡಿಲ್ಲವೆಂದರೆ ಹೇಗೆ? ನಿಮ್ಮ ದೇಶದಲ್ಲಿರುವ ಅಷ್ಟೊಂದು ಮಂದಿ ಡಾಕ್ಟರು, ಎಂಜಿನಿಯರು, ಸೈಂಟಿಸ್ಟು ಗಳಿಗೆ ತಾವು ಕಲಿತಿದ್ದನ್ನು ತಮ್ಮ ಭಾಷೆಯಲ್ಲಿ ಬೇರೆಯವರಿಗೆ ನೀಡಲು ಏಕೆ ಸಾಧ್ಯವಾಗುತ್ತಿಲ್ಲ?... ಯೂರೋಪಿನ ಎಲ್ಲ ದೇಶಗಳಲ್ಲಿ ಅಲ್ಲಿಯ ದೇಶಭಾಷೆಯೇ ಶಿಕ್ಷಣ ಮಾಧ್ಯಮ ವಾಗಿರುತ್ತದೆ. ಅದರೊಂದಿಗೆ ಯೂರೋಪಿನ ಯಾವುದಾದ ರೊಂದು ಭಾಷೆಯನ್ನು ಕೂಡಾ ನಾವು ಕಲಿಯುತ್ತೇವೆ. ನಿಮ್ಮ ಜಪಾನು ಮತ್ತು ಚೀನಾ ಅಷ್ಟು ಪ್ರಗತಿ ಸಾಧಿಸಲು ಸಾಧ್ಯವಾದದ್ದು ದೇಶೀಯ ಭಾಷೆಯನ್ನೇ ಶಿಕ್ಷಣ ಮಾಧ್ಯಮ ಮಾಡಿಕೊಂಡದ್ದರಿಂದ. ತಮ್ಮ ಸ್ವಂತ ಭಾಷೆಯಲ್ಲಿ ವಿಜ್ಞಾನ, ಮಾನವಿಕ, ವಾಣಿಜ್ಯಶಾಸ್ತ್ರಗಳನ್ನು ರೂಪಿಸಿಕೊಳ್ಳುವುದೇ ನಿಜವಾದ ಸ್ವಾವಲಂಬನೆ. ನೀವು ಇಂಗ್ಲಿಷಿನ ಮೋಹದಿಂದ ನಿಮ್ಮೆಲ್ಲ ಭಾಷೆಗಳನ್ನು ಕೊಲ್ಲುತ್ತಿದ್ದೀರಿ. ಒಂದು ಭಾಷೆ

ಯೊಂದಿಗೆ ಒಂದು ಸಂಸ್ಕೃತಿ ನಿರ್ನಾಮ ಹೊಂದುತ್ತದೆ. ಎಂದಿನವರೆಗೆ ನಿಮಗೆ ಎಲ್ಲ ಜ್ಞಾನಾಂಗಗಳನ್ನು ನಿಮ್ಮ ಸ್ವಂತ ಭಾಷೆಯಲ್ಲಿ ಕಲಿಯಲು ಸಾಧ್ಯವಾಗುವುದಿಲ್ಲವೋ ಅಲ್ಲಿಯ ವರೆಗೆ ನಿಮ್ಮ ಸಾಂಸ್ಕೃತಿಕ ದಾಸ್ಯ ತಪ್ಪಿದ್ದಲ್ಲ. ಅನ್ಯಭಾಷೆಯನ್ನು ಕಲಿಯಿರಿ. ಆದರೆ ನಿಮ್ಮ ಭಾಷೆಯೇ ಶಿಕ್ಷಣ ಮಾಧ್ಯಮ ವಾಗಿರಬೇಕು. ಅದು ಹೊರತು ನಿಮ್ಮ ಸ್ವಾತಂತ್ರ್ಯ ಅರ್ಥಹೀನ.''

ಮೈಸೂರು **ರುಕ್ಮಿಣಿಮಾಲಾ**

## ಮಾತೃಭಾಷೆಯಲ್ಲಿ ಶಿಕ್ಷಣ; ಇಂಗ್ಲಿಷ್ ದಬ್ಬಾಳಿಕೆ ನಿಲ್ಲಿಸಬೇಕಾಗಿದೆ ತಕ್ಷಣ

''ಕನ್ನಡ ಮಾಧ್ಯಮದ ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲಿಷನ್ನು ಎಷ್ಟನೆಯ ತರಗತಿಯಿಂದ ಕಲಿಸಬೇಕು ?'' ಎಂಬುದು ವಾದವಿವಾದವಾಗಿ ರೂಪುಗೊಂಡಿದೆ. ಪ್ರಗತಿಪರರು, ಬುದ್ಧಿಜೀವಿಗಳು, ಜನಪರ ಸಂಘಟನೆಗಳು ಪರ ವಿರೋಧವೆಂಬ ಎರಡು ಗುಂಪುಗಳಾಗಿ ಆಳುವ ವರ್ಗದ ಒಡೆದು ಆಳುವ ಕುತಂತ್ರದ ದಾಳಕ್ಕೆ ಬಲಿಯಾಗಿ ಪರಸ್ಪರ ವಾದವಿವಾದಗಳಲ್ಲಿ ಮಗ್ನರಾಗಿದ್ದಾರೆ. ಯಾಕೆ ಅವರೆಲ್ಲರೂ ಒಂದಾಗಿ ಸಮಾನ ಶಿಕ್ಷಣ ನೀತಿ ಜಾರಿಗೆ ಒತ್ತಾಯಿಸಿ ಹೋರಾಡಬಾರದು ? ಇಂತಹವೇ ಹಲವಾರ ಪ್ರಶ್ನೆಗಳು ಪ್ರಜ್ಞಾವಂತ ಜನರ ಮುಂದಿವೆ. ಕನ್ನಡ ಭಾಷೆಯ ಉಳಿವಿನ ದೃಷ್ಟಿಯಿಂದ ಮೊದಲು ಮಾತೃಭಾಷೆಯಲ್ಲಿ ಶಿಕ್ಷಣ ಜಾರಿಯಾಗಲೇಬೇಕಿದೆ. ಇಂಗ್ಲಿಷನ್ನು ಒಂದು ಭಾಷೆಯಾಗಿ ಮಾತ್ರ ಕಲಿಸಬೇಕಾಗಿದೆ. ಎಲ್ಲಕ್ಕಿಂತ ಮೊದಲು ಇಂಗ್ಲಿಷ್ ದಬ್ಬಾಳಿಕೆ ನಿಲ್ಲಲೇಬೇಕಾಗಿದೆ.

ಮಗು ಪ್ರಪಂಚವನ್ನು ಅರಿಯುವುದು ತನ್ನ ಇಂದ್ರಿಯಗಳ ಮೂಲಕ. ಅದರ ಕಲಿಕೆಯಲ್ಲಿ ಓದು, ಬರಹ, ದೃಶ್ಯ, ಸ್ಪರ್ಶ, ತರ್ಕ, ಯೋಚನೆ, ಗ್ರಹಿಕೆ, ಅಭಿವ್ಯಕ್ತಿ, ನೆನಪು – ಈ ಎಲ್ಲ ವಿಚಾರಗಳಲ್ಲಿ ಆ ಮಗುವಿನ ಮಾತೃಭಾಷೆ ಅತ್ಯಂತ ಮಹತ್ವದ ನಿರ್ಣಾಯಕ ಪಾತ್ರವಹಿಸುತ್ತದೆ. ಐದನೆಯ ವರ್ಷದ ನಂತರ ಮಗು ತನ್ನ ಶಿಕ್ಷಣ, ಸಂಸ್ಕೃತಿ ಮತ್ತು ಬೌದ್ಧಿಕ ವಿಕಾಸಕ್ಕಾಗಿ ಶಾಲೆ ಸೇರಬೇಕಾಗುತ್ತದೆ. ಈ ಸಂದರ್ಭದಲ್ಲಿ ಕಲಿಕೆ, ಬೋಧನೆ ಇವು ಮಾತೃಭಾಷೆಯಲ್ಲಿ ಕೊಡಿಸಬೇಕೆ ಹೊರತು ಅಪರಿಚಿತವಾದ ಅನ್ಯಭಾಷೆಗಳಲ್ಲಲ್ಲ. ತನ್ನ ಪರಿಸರದಲ್ಲಿ ತನ್ನ ಪರಿವಾರ, ಆಟದ ಮೈದಾನ, ಸ್ನೇಹಿತರೊಂದಿಗೆ ಮಾತೃಭಾಷೆಯಲ್ಲಿ ವ್ಯವಹರಿಸುವ ಮಗುವಿಗೆ ತಾಯಿ ಭಾಷೆಯಲ್ಲಿ ಶಿಕ್ಷಣ ಕೊಟ್ಟಲ್ಲಿ ಯಾವುದೇ ಮಾನಸಿಕ ಒತ್ತಡಕ್ಕೂ ಒಳಗಾಗದೆ ಎಲ್ಲವನ್ನೂ ಸರಾಗವಾಗಿ ಕಲಿಯಲು ಅನುಕೂಲವಾಗುತ್ತದೆ. ಅಷ್ಟೇ ಅಲ್ಲದೇ, ಮಕ್ಕಳು ಜ್ಞಾನವನ್ನು ಮಾತೃಭಾಷೆಯ ಮೂಲಕ ಸುಲಭವಾಗಿ ಗ್ರಹಿಸಬಲ್ಲರು.

ಕರ್ನಾಟಕದ ಆಳುವ ವರ್ಗಗಳು ಕನ್ನಡದ ಬಗ್ಗೆ ವಿಪರೀತ ಕಾಳಜಿ ತೋರಿಸುತ್ತಲೇ ಒಳಗೊಳಗೆ ಅಸಂಖ್ಯಾತ ಇಂಗ್ಲಿಷ್ ಶಾಲೆಗಳನ್ನು ಸ್ಥಾಪಿಸುವ ಮೂಲಕ, ಕನ್ನಡ ಶಾಲೆಗಳನ್ನು ಕಡೆಗಣಿಸಿ, ಜನತೆಯಲ್ಲಿ ಕನ್ನಡದ ಬಗ್ಗೆ ಕೀಳರಿಮೆ ಮೂಡಿಸಿದ್ದಾರೆ. ನಮ್ಮ ನಾಡಿನ ಆಡಳಿತ, ಉದ್ಯಮ, ವ್ಯವಹಾರವೆಲ್ಲ ಇಂಗ್ಲಿಷಿನಲ್ಲೆ ನಡೆಯುವಂತೆ ನೋಡಿಕೊಳ್ಳುತ್ತಾ ಸಾಮ್ರಾಜ್ಯಶಾಹಿ ಹಿತಾಸಕ್ತಿಗಳನ್ನು ಕಾಪಾಡುತ್ತಾ ವ್ಯವಸ್ಥಿತವಾಗಿ ಜನರಲ್ಲಿ ಗುಲಾಮಿ ಭಾವನೆ ಬೆಳೆಸುತ್ತಿದ್ದಾರೆ. ಇನ್ನು ಇಂಗ್ಲಿಷ್ ಕಲಿಯುವ ಕನ್ನಡ ನಾಡಿನ ಮಕ್ಕಳ ಸ್ಥಿತಿಯಂತೂ ನೀರಿಳಿಯದ ಗಂಟಲಿಗೆ ಕಡುಬು ತುರುಕಿದಂತಾಗಿದೆ.

**ನರಕವೋ-ಇಂಗ್ಲಿಷ್ ಶಾಲೆಯೋ ?**

ಇಂದಿನ ಇಂಗ್ಲಿಷ್ ಶಾಲೆಗಳು ಮಕ್ಕಳ ಪಾಲಿಗೆ ನರಕಗಳಾಗಿವೆ. ಶಾಲಾ ಕೊಠಡಿಗೆ ಒಂದು ಭಾಷೆ, ಬಾಹ್ಯ ಪ್ರಪಂಚಕ್ಕೆ ಮತ್ತೊಂದು ಭಾಷೆ. ಈ ರೀತಿ ಎರಡು ಭಾಷೆಗಳ ವಾತಾವರಣದಲ್ಲಿ ಬೆಳೆಯುತ್ತಿರುವ ಮಕ್ಕಳು ತೀವ್ರ ಗೊಂದಲಕ್ಕೊಳಗಾಗುತ್ತಾರೆ. ಇಂಗ್ಲಿಷ್ ಕಲಿತರೆ ಒಳ್ಳೆ ಘನತೆ ಗೌರವ ಸಿಗುತ್ತದೆಂದೋ, ಒಳ್ಳೆಯ ಉದ್ಯೋಗ ಸಿಗುತ್ತದೆಂದೋ, ಮಕ್ಕಳು ಬುದ್ಧಿವಂತರಾಗುತ್ತಾರೆಂದೋ, ವ್ಯವಸ್ಥೆ ಮೂಡಿಸಿರುವ ಭ್ರಮೆಗೆ ಒಳಗಾಗಿ ಇಂದಿನ ತಂದೆ-ತಾಯಂದಿರು ತಮ್ಮ ಮಕ್ಕಳನ್ನು ಇಂಗ್ಲಿಷ್ ಶಾಲೆಗಳಿಗೆ ಸೇರಿಸಲು ಮುನ್ನುಗ್ಗುತ್ತಿದ್ದಾರೆ. ಪಾಪ! ಅವರಿಗೆ ಗೊತ್ತಿಲ್ಲವೆಂದು ಕಾಣುತ್ತದೆ: ಇಂಗ್ಲಿಷ್ ಶಾಲೆಗಳಲ್ಲಿ ಓದಿ ಬಂದ ಎಷ್ಟು ಮಕ್ಕಳು ಬುದ್ಧಿವಂತರಾಗಿದ್ದಾರೆ, ಎಷ್ಟು ಮಕ್ಕಳು ವಿಚಾರಶೀಲರಾಗಿ, ಅರ್ಥಶಾಸ್ತ್ರಜ್ಞರಾಗಿ, ವಿಜ್ಞಾನಿಗಳಾಗಿ ಈ ದೇಶಕ್ಕೆ ಕೊಡುಗೆ ಕೊಟ್ಟಿದ್ದಾರೆ ಮತ್ತು ಕನ್ನಡ ಶಾಲೆಗಳಿಂದ ಬಂದ ಅದೆಷ್ಟು ಮಂದಿ ಇಂದು ವಿಜ್ಞಾನಿಗಳಾಗಿಯೂ, ಪ್ರಗತಿಶೀಲರಾಗಿಯೂ ಮುಂದೆ ಬಂದಿದ್ದಾರೆಂದು.

ಸಾಮಾನ್ಯ ಜನರಿಗೆ ಇಂಗ್ಲಿಷ್ ಭಾಷೆ ಗೊತ್ತಿಲ್ಲದಿರುವುದನ್ನೇ ದುರುಪಯೋಗಪಡಿಸಿಕೊಳ್ಳುತ್ತಿರುವ ಸರಕಾರ, ಜನರಿಗೆ ಮೋಸ ಮಾಡಿ ಶೋಷಣೆ ಮಾಡಲು ಇಂಗ್ಲಿಷ್ ಒಂದು ಅಸ್ತ್ರವಾಗಿ ಉಪಯೋಗವಾಗುತ್ತಿದೆ. ಆದ್ದರಿಂದ ಇಂಗ್ಲಿಷಿನ ದಬ್ಬಾಳಿಕೆಯನ್ನು, ಆಳುವ ವರ್ಗದವರ ಕುತಂತ್ರವನ್ನು ಶತಾಯ ಗತಾಯ ಕೊನೆಗೊಳಿಸದಿದ್ದಲ್ಲಿ ನಾವು ನಮ್ಮ ಮಕ್ಕಳನ್ನು ಆ ಮೂಲಕ ಈ ನಾಡನ್ನು ಸಾಮ್ರಾಜ್ಯಶಾಹಿಗಳ ಬಲಿಪೀಠಕ್ಕೆ ಬಲಿಪಶುವನ್ನಾಗಿಸಬೇಕಾಗುತ್ತದೆ.

ಬೆಂಗಳೂರು **ಎಸ್. ಶಶಿಕಾಂತ ಯಡಹಳ್ಳಿ**

ಧಾರವಾಡದ ಪರ್ಯಾಯ ಕೃಷಿಮಾಧ್ಯಮ ಕೇಂದ್ರವು ರಾಜ್ಯಮಟ್ಟದ ಕೃಷಿಪತ್ರಿಕೋದ್ಯಮ ಪ್ರಶಸ್ತಿಗೆ ಪ್ರವೇಶಗಳನ್ನು ಆಹ್ವಾನಿಸಿದೆ. ಕೃಷಿಕರೇ ಬರೆದ ಲೇಖನಗಳು ಹಾಗೂ ಮುಕ್ತ ವಿಭಾಗದ್ದು, ಹೀಗೆ ಎರಡು ವಿಭಾಗಗಳಿವೆ. ಕೃಷಿಕರೇತರರೂ ಭಾಗವಹಿಸಬಹುದು. ಆಸಕ್ತರು ಸೆಪ್ಟೆಂಬರ್ ೨೦೦೪ರಿಂದ ಆಗಸ್ಟ್ ೨೦೦೫ರ ನಡುವೆ ಯಾವುದೇ ಪತ್ರಿಕೆ ಅಥವಾ ನಿಯತಕಾಲಿಕದಲ್ಲಿ ಪ್ರಕಟಗೊಂಡ ಕೃಷಿಕಪರ ಬರಹವನ್ನು ಕಳುಹಿಸಿಕೊಡಲು ಕೋರಲಾಗಿದೆ. ಒಬ್ಬರು ಗರಿಷ್ಠ ಎರಡು ಲೇಖನಗಳನ್ನು ಕಳುಹಿಸಬಹುದು. ಪೂರ್ಣ ವಿಳಾಸ ಹಾಗೂ ಉದ್ಯೋಗದ ವಿವರ ಬರೆಯುವುದು ಅಗತ್ಯ. ಪ್ರವೇಶದೊಂದಿಗೆ ಹತ್ತು ರೂಪಾಯಿ ಅಂಚೆ ಚೀಟಿ ಕಳುಹಿಸಲು ಕೋರಿಕೆ. ಪ್ರವೇಶ ಸ್ವೀಕರಿಸಲು ಕೊನೆಯ ದಿನಾಂಕ: ಸೆಪ್ಟೆಂಬರ್ ೧೦, ೨೦೦೫. ಸಂಪರ್ಕ ವಿಳಾಸ

**ಅನಿತಾ ಪೈಲೂರು**
ಪರ್ಯಾಯ ಕೃಷಿಮಾಧ್ಯಮ ಕೇಂದ್ರ, ಕೃಷ್ಣಾಲಯ,
೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ,
ಧಾರವಾಡ - ೫೮೦ ೦೦೮

*೫ನೇ ಪುಟದಿಂದ (ಸಂಪಾದಕೀಯ)*

ಇದು ಕನಿಷ್ಠ ಅವಶ್ಯಕತೆ. ಇದಿಲ್ಲದಿದ್ದರೆ ಆರಂಭದಿಂದಲೂ ಕಲಿಕೆಯಲ್ಲಿ ವ್ಯತ್ಯಾಸವಿದ್ದು ಸ್ಪರ್ಧೆಯು ಅನಿವಾರ್ಯವಾಗಿ ಅಸಮಾನವಾಗಿರುತ್ತದೆ. ಇದಕ್ಕೆ ಪೂರಕವಾದ್ದು ಸನಿಹದ ಶಾಲೆಯಲ್ಲಿ ನಿರ್ಬಂಧದ ಪ್ರವೇಶ. ಶ್ರೇಷ್ಠ-ಕನಿಷ್ಠ ಎಂಬ ತಾರತಮ್ಯ ಬರದಿರಬೇಕಾದರೆ ಎಲ್ಲ ವರ್ಗಗಳವರೂ ಒಂದೇ ಶಾಲೆಗೆ ಹೋಗಬೇಕು. ಅದು ಸರ್ಕಾರದ್ದಿರಬಹುದು, ಖಾಸಗಿಯೂ ಇರಬಹುದು. ಆಗ ಸವಲತ್ತುಗಳು ಎಲ್ಲರಿಗೂ ಸಮಾನವಾಗಿರುತ್ತವೆ. ಕೆಲವನ್ನು ಒಳ್ಳೆಯವೆಂದು ಬೆಳೆಸಿ ಮಿಕ್ಕವನ್ನು ಕಳಪೆಯವೆಂದು ಇರಿಸುವುದು ಸಾಮಾಜಿಕ ನ್ಯಾಯಕ್ಕೆ ವಿರೋಧವಾದ್ದು. ಶ್ರೀಮಂತರ ಮಕ್ಕಳು ದಲಿತರ ಮಕ್ಕಳೊಡನೆ ಕೂತು ಕಲಿಯುವಾಗ ಆ ಶಾಲೆಯ ಆಗುಹೋಗುಗಳತ್ತ ಎಲ್ಲರೂ ಗಮನ ನೀಡುತ್ತಾರೆ, ಅದು ಕಳಪೆಯಾಗಲು ಬಿಡುವುದಿಲ್ಲ. ಹಾಗಿಲ್ಲದಾಗ ಶ್ರೇಷ್ಠತೆಯ ದ್ವೀಪಗಳಿಗೆ ಆದ್ಯತೆ ದೊರೆತು ಉಳಿದವು ಅಸಡ್ಡೆಗೆ ಗುರಿಯಾಗುತ್ತವೆ. ಏರುಪೇರುಗಳನ್ನು ಹಾಗೆಯೇ ಉಳಿಸಿ ಬೆಳೆಸುವುದು ಅಂತಹ ಸಂದರ್ಭದಲ್ಲಿ.

ಎಲ್ಲರಿಗೂ ಒಂದನೇ ತರಗತಿಯಲ್ಲಿ ಇಂಗ್ಲಿಷ್ ಕಲಿಸುವುದರಿಂದ ಸಮಾನತೆ ಬರುವುದಿಲ್ಲ; ಏಕೆಂದರೆ ಪಠ್ಯ ಒಂದೇ ಆದರೂ ಸೌಲಭ್ಯಗಳಲ್ಲಿ ವಿಪರೀತ ವ್ಯತ್ಯಾಸಗಳಿರುತ್ತವೆ. ಈ ವ್ಯತ್ಯಾಸ ಮುಂದುವರಿದಾಗ ಉದ್ಯೋಗ ಪಡೆಯಬೇಕಾದ ವಯಸ್ಸಿನಲ್ಲಿ ಮತ್ತೆ ಅಸಮಾನ ಸ್ಪರ್ಧೆಯಲ್ಲಿ ಹಿಂದುಳಿದ ಕುಟುಂಬಗಳವರು ಸೋಲುತ್ತಾರೆ. ಮೇಲ್ವರ್ಗದ ಮಕ್ಕಳು ಕಲಿಯುವುದನ್ನು ಬೇರೆ ವರ್ಗಗಳವರೂ ಕಲಿಯುವ ಹಕ್ಕನ್ನುಳ್ಳವರಾಗಿರಬೇಕು; ಆದರೆ ಅವರು ಪಡೆಯುವ ವಾತಾವರಣವೂ ಸಾಮಾನ್ಯಾರ್ಥದಲ್ಲಿ ಸಮಾನವಾಗಿರಬೇಕು. ಇಂಗ್ಲಿಷ್ ಮತ್ತು ಉದ್ಯೋಗಗಳ ನಡುವೆ ಸಮೀಕರಣವಿಲ್ಲ. ಆ ಭಾಷೆಯಲ್ಲಿ ಪರಿಣತರಾದವರೂ ನಿರುದ್ಯೋಗಿಗಳಾಗಲು ಅಡ್ಡಿಯಿಲ್ಲ. ಉತ್ಪಾದನಾ ಘಟಕಗಳನ್ನು ವೃದ್ಧಿಗೊಳಿಸದೆ ಭಾಷೆಯ ಕಲಿಕೆಯಿಂದಲೇ ನಿರುದ್ಯೋಗಕ್ಕೆ ಪರಿಹಾರ ದೊರೆಯದು. ಸೀಮಿತ ಸಂಖ್ಯೆಯಲ್ಲಿ ಉದ್ಯೋಗ ಲಭ್ಯವಿದ್ದಾಗ ಸಹಜವಾಗಿಯೇ ಚೆನ್ನಾಗಿ ಕಲಿತವರು ಅದನ್ನು ತಮ್ಮದನ್ನಾಗಿಸಿಕೊಳ್ಳುತ್ತಾರೆ. ಈಗಿರುವ ಅಂತರ ಹಾಗೇ ಉಳಿಯುತ್ತದೆ. ಇನ್ನೊಂದು ದಶಕದ ನಂತರ ಸಾಮಾನ್ಯ ಶಾಲೆಗಳ ವಿದ್ಯಾರ್ಥಿಗಳ ಗುಣಮಟ್ಟದ ಬಗ್ಗೆ ಸಾಂತ್ವನ ವ್ಯಕ್ತಪಡಿಸಿ ಅವರನ್ನು ಹೇಗಾದರೂ ಇಂಗ್ಲಿಷಿನಲ್ಲಿ ತೇರ್ಗಡೆಗೊಳಿಸಬೇಕೆಂಬ ಒತ್ತಡ ಬಂದರೆ ಆಶ್ಚರ್ಯವಿಲ್ಲ. ಈಗಿನ ವ್ಯವಸ್ಥೆಯಲ್ಲಿ ಇಬ್ಬರು ವಿದ್ಯಾರ್ಥಿಗಳು ಬೇರೆ ಬೇರೆ ರೀತಿಯ ಸೌಲಭ್ಯವಿರುವೆಡೆಗಳಲ್ಲಿ ಎಂಟು ವರ್ಷ ಇಂಗ್ಲಿಷ್ ಕಲಿತಿದ್ದರೆ, ಆ ಮಟ್ಟದಲ್ಲಿ ಅವರು ಸಮಾನ ಸ್ಪರ್ಧಿಗಳಾದಾರೆ ? ಈ ಕಾರಣದಿಂದಲೇ ಕೊಠಾರಿ ಆಯೋಗದ ಎರಡು ಸಲಹೆಗಳನ್ನು ಸರ್ವಥಾ ಅಳವಡಿಸಿಕೊಳ್ಳಬೇಕೆಂದು ಚಳುವಳಿ ನಡೆಸುವುದು ಯೋಗ್ಯವಾಗಿರುತ್ತದೆ. ಒಂದನೆಯ ತರಗತಿಯಿಂದಲೇ ಇಂಗ್ಲಿಷ್ ಕಲಿಸಲು ವಿರೋಧವಿಲ್ಲ; ಆದರೆ ಅಸಮಾನ ಶಿಕ್ಷಣ ಕ್ರಮಕ್ಕೆ ವಿರೋಧ ಇರಲೇಬೇಕು. (ನೋಡಿ, ಕೊಠಾರಿ ಆಯೋಗದ ವರದಿ: ೧.೩೬-೩೮ ಮತ್ತು ೧೦.೧೯-೨೦). ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ಅನೀತಿಯುತವಾಗಿ ತಾರತಮ್ಯಗಳನ್ನು ಅನಿವಾರ್ಯವೆಂದು ಅಂಗೀಕರಿಸುವಂತೆ ಸಲಹೆ ನೀಡಿತು; ಅದು ಈಗ ಜಾರಿಯಲ್ಲಿದೆ.

ಮಕ್ಕಳಿಗೆ ಏನು ಕಲಿಸಿದರೂ ಕಲಿಯುವ ಸಾಮರ್ಥ್ಯವಿರುತ್ತದೆಂದು ನಾಲ್ಕು ಭಾಷೆಗಳನ್ನು ಹೇರುವುದು ಶೈಕ್ಷಣಿಕ ಅಪರಾಧ. ಮಾತೃಭಾಷೆಯನ್ನು ಎರಡು-ಮೂರು ವರ್ಷ ಕಲಿತು ಆಮೇಲೆ ಇಂಗ್ಲಿಷ್ ಕಲಿತರೆ ತೊಂದರೆಯೇನೂ ಇಲ್ಲ. ಏಕೆಂದರೆ,

ಮುಂದಿನ ಪುಟಕ್ಕೆ

*೩ನೇ ಪುಟದಿಂದ (ಈ ತಿಂಗಳು)*

ಅನುಭವ, ಸೈದ್ಧಾಂತಿಕ ತಿಳುವಳಿಕೆ, ದೇಶದ ಹಿತ, ಇವೆಲ್ಲಾ ರಾಮ ಮಾಧವ, ಸುದರ್ಶನ, ಶೇಷಾದ್ರಿ ಮುಂತಾದವರಿಗೆ ಮಾತ್ರ ಇದೆಯೆಂದು ಭಾಜಪದ ಸದಸ್ಯರು ಭಾವಿಸುತ್ತಾರೆಯೇ ? ಪಾಪ, ಜಾರ್ಜ್ ಫರ್ನಾಂಡಿಸ್‌ಗೆ ಬೇರಾರಿಗೂ ಇಲ್ಲದ ಕಾಳಜಿ; ಮೊದಲು ಭಕ್ತರಾಗಿ ಸುದರ್ಶನರ ಸಂದರ್ಶನ ಪಡೆದರು, ಆಮೇಲೆ ಕೋಪದಿಂದ 'ಇದೆಂತಹ ಸಂಸ್ಕೃತಿ ನಿಮ್ಮದು' ಎಂದು ಸಾರ್ವಜನಿಕ ಹೇಳಿಕೆ ನೀಡಿದರು. ಭಾಜಪಕ್ಕೆ ಸ್ವಂತದ ಸಂವಿಧಾನವಿದೆಯೆ, ಅದರ ಪ್ರಣಾಲಿಕೆ ಏನು, ಆರೆಸ್ಸೆಸ್ ಮಹಾರಾಜನ ಮಾಂಡಲಿಕರ ಸ್ಥಾನದಲ್ಲಿ ಭಾಜಪ ಇದೆಯೇ, ಇತ್ಯಾದಿ ಪ್ರಶ್ನೆಗಳು ಅನುಚಿತವಲ್ಲ. ಉಮಾ, ಸುಷ್ಮಾ, ಮುರಳಿ ಮುಂತಾದವರು ಅದ್ವಾನಿಯವರ ತೆರಳುವಿಕೆಗೆ ಕಾಯುತ್ತಿದ್ದಾರೆ; ನಿಜವಾದ ರಾಜಕೀಯ ಶಿಷ್ಯರೆಂದರೆ ಇವರೇ. ಶಿಷ್ಯರಿಂದ ಪರಾಜಿತರಾಗುವ ಸದವಕಾಶಕ್ಕಾಗಿ ಅದ್ವಾನಿಯವರೇನೂ ಉತ್ಸುಕತೆ ತೋರುತ್ತಿಲ್ಲ. ಭಾಜಪಕ್ಕೆ ಒಂದು ರಾಜಕೀಯ ಸ್ವಂತಿಕೆ ಇದೆಯೆಂಬುದನ್ನು ಅವರು ಖಚಿತಪಡಿಸುತ್ತಾರೆಂಬ ನಿರೀಕ್ಷೆ ಇದೆ.

ಅದ್ವಾನಿಯವರಿಗಿಂತಲೂ ಡಾ॥ ಮನಮೋಹನ ಸಿಂಗರೇನೂ ಕಡಿಮೆಯಲ್ಲ. ಆದ್ದರಿಂದ ಆಕ್ಸ್‌ಫರ್ಡಿನಲ್ಲಿ ಅವರೂ ಭಾವುಕರಾದರು, ಬ್ರಿಟನ್ನಿನ ''ಶ್ರೇಷ್ಠ ಕೊಡುಗೆ''ಯನ್ನು ನೆನೆದು ಭಾರತದ ಪರವಾಗಿ ಪರವಶರಾದರು, ಮತ್ತು ಇದನ್ನು ಮೆಚ್ಚದೆ ಹೆಡ್ಡರಾಗಿ ಸ್ವಾತಂತ್ರ್ಯ ಹೋರಾಟ ನಡೆಸಿದ ಗಾಂಧೀಜಿ ಮೊದಲಾದವರ ಬಗ್ಗೆ ಮರುಕ ವ್ಯಕ್ತಪಡಿಸಿದರು. ನಮ್ಮ ದೇಶದ ಪ್ರಧಾನಿಯ ಇತಿಹಾಸ ಪ್ರಜ್ಞೆ ಅಮೋಘವಾಗಿದೆ ಎನ್ನಲೇಬೇಕು ! ಇವರು ಜಾರ್ಜ್ ಬುಷ್ ಮುಂದೆ ನಿಂತಾಗ ಇನ್ನೇನೇನು ಹೇಳಬಲ್ಲರೆಂದು ಊಹಿಸಬಹುದು - ಅವರು ವಿಶ್ವಬ್ಯಾಂಕಿನ ನೌಕರರಾಗಿದ್ದವರು, ವಾಷಿಂಗ್‌ಟನ್ನಿನಲ್ಲಿ ವಾಸಿಸುತ್ತಿದ್ದವರು. ''ಅಮೆರಿಕಾ ಎಂಬುದು ಉಚ್ಚ ಮಾನವ ಸಂಸ್ಕೃತಿಗೆ ಇನ್ನೊಂದು ಹೆಸರು; ಆದ್ದರಿಂದ ಭಾರತವು ನಿಮ್ಮ ಮುಂದೆ ತಲೆಬಾಗುತ್ತದೆ'' ಎಂಬರ್ಥ ಬರುವ ಮಾತುಗಳನ್ನೇ ಆಡಿಯಾರು. ಅದರ ಸಾಧ್ಯತೆ ಬಹಳಷ್ಟಿದೆಯೆಂಬುದನ್ನು ರಕ್ಷಣಾ ಸಚಿವ ಪ್ರಣವ ಮುಖರ್ಜಿ ಸಾಬೀತುಗೊಳಿಸಿದ್ದಾರೆ. ಅವರಿಗೆ ಅಮೆರಿಕಾದ ರಕ್ಷಣೆಯ ಬಗ್ಗೆ ವಿಶೇಷ ಆಸಕ್ತಿ; ಆದರೆ ಅವರು ಭಾರತದ ರಕ್ಷಣಾ ಸಚಿವರು ! ಏಷ್ಯಾದಲ್ಲಿ ಅಮೆರಿಕಾದ ಸ್ಥಾನಕ್ಕೆ ಚ್ಯುತಿಯುಂಟಾಗುತ್ತದೆಂಬ ಭೀತಿಯಂತೆ. ಚೀಣಾ, ಉತ್ತರ ಕೊರಿಯಾ ಇವೆಲ್ಲ ಸವಾಲೆಸೆಯಬಹುದು. ಇರಾನ್ ಈಗಾಗಲೇ ಅಮೆರಿಕಾದ ವಿರುದ್ಧವಿದೆ. ಆದ್ದರಿಂದ ನಾಳೆಯ ದೃಷ್ಟಿಯಿಂದ ಭಾರತವನ್ನು ಬುಟ್ಟಿಗೆ ಹಾಕಿಕೊಳ್ಳಬೇಕು. ಅದಕ್ಕಾಗಿ ಅಪಾಯಕಾರಿ ಒಪ್ಪಂದಗಳು. ಪ್ರಣವ ಮುಖರ್ಜಿ ಅವಕ್ಕೆಲ್ಲಾ ಸಮ್ಮತಿ ಸೂಚಿಸುತ್ತಾರೆ. ಯಾವುದಾದರೂ ದೇಶದಲ್ಲಿ (ಇರಾಕ್ ಇದ್ದಂತೆ) ''ವಿಶ್ವಶಾಂತಿಗೆ ಧಕ್ಕೆಯುಂಟುಮಾಡುವ ಪರಿಸ್ಥಿತಿ ಉದ್ಭವಿಸಿದರೆ'' (ಅಂದರೆ ತನ್ನ ಸಂಪತ್ತನ್ನು ಅಮೆರಿಕಾಕ್ಕೆ ದಾನಮಾಡಲು ಒಪ್ಪದಿದ್ದರೆ) ಅಮೆರಿಕಾದ ಸೈನ್ಯದೊಟ್ಟಿಗೆ ಭಾರತದ ಸೈನ್ಯವೂ ಭಾಗಿಯಾಗಿ ಪರಿಸ್ಥಿತಿಯನ್ನು ಹತೋಟಿಗೆ ತರಬೇಕಂತೆ ! ಅಂದರೆ, ಅವನು ಸೂರೆ ಮಾಡಲು ನಾವು ಬಾಡಿಗೆ ಸೈನಿಕರು !! ಇಂತಹ ಹತ್ತಾರು ಅವಮಾನಕರ ಸಂಗತಿಗಳಿರುವ ಒಪ್ಪಂದಕ್ಕೆ ಪ್ರಣವ ಮುಖರ್ಜಿ ಒಪ್ಪಿಗೆ ನೀಡಿದ್ದಾರೆ. ಅದ್ವಾನಿಯವರು ಸಿ.ಐ.ಎ. ಕಚೇರಿಗೆ ಹೋಗಿ ನಮ್ಮ ಸಾರ್ವಭೌಮತ್ವಕ್ಕೆ ಕಪ್ಪು ಚುಕ್ಕೆ ಹಚ್ಚಿದರೆ ಪ್ರಣವ ಮುಖರ್ಜಿ ಭಾರತವನ್ನು ಪೆಂಟಗನ್ ಒಳಕ್ಕೆ ತಳ್ಳಿ ಕೂಡಿಹಾಕಲು ಹವಣಿಸಿದ್ದಾರೆ. ''ಒಪ್ಪಂದದ ಅರ್ಥ ಅದಲ್ಲ''ವೆಂದು ಅವರು ಹಾಗೂ ಅವರ ಸಚಿವಾಲಯದ ಕಾರ್ಯದರ್ಶಿ ಹೇಳುತ್ತಿದ್ದಾರೆ. ಡಂಕೆಲ್ ಪ್ರಸ್ತಾವಗಳ ಬಗೆಗೂ ಹಿಂದೆ ಇದೇ ರೀತಿ ಹೇಳುತ್ತಿದ್ದುದನ್ನು ದೇಶ ಮರೆತಿಲ್ಲ. ಮನಮೋಹನ ಸಿಂಗ್ ಅವರು ಅಮೆರಿಕಾಕ್ಕೆ ಹೋಗಿ ಇನ್ನೇನು ಅಪಘಾತಗಳ ಸರಣಿಯನ್ನು ಆಹ್ವಾನಿಸುತ್ತಾರೋ ಎಂಬ ಅಂಜಿಕೆ ದೇಶದಲ್ಲಿ ವ್ಯಾಪಿಸಬೇಕು. ನೇರವಾಗಿ ಬುಷ್‌ಗೆ ಅವರು ಹೇಳಬೇಕು : ''ಎಲಾ, ಹೇಗೂ ನನ್ನ ದೇಶದವರು ನಿಮ್ಮ ನಿಕ್ಸನ್-ಕಿಸಿಂಜರ್ ಹೇಳಿದ್ದಂತೆ ಎಂಥದೋ... ಮಕ್ಕಳು ! ನಾವು ಹಾಗೇ ಉಳಿಯುವುದರಲ್ಲಿ ಹೆಮ್ಮೆಪಡುತ್ತೇವೆ. ನಿಮ್ಮೊಡನೆ ನಮಗೆ ಯಾವ ಒಪ್ಪಂದವೂ ಬೇಡ.''

ಇಂದಿರಾ ಗಾಂಧಿಯವರಿಗೆ ಹಿಗ್ಗಾಮುಗ್ಗ ಅಪ್ಪಳಿಸಬೇಕೆಂದು ನಿಕ್ಸನ್ನನ ರಕ್ಷಣಾ ಸಲಹೆಗಾರ ಹೆನ್ರಿ ಕಿಸಿಂಜರ್ ಒಮ್ಮೆ ಹೇಳಿದ್ದನಂತೆ. ಅಂದಿನ ಸಂದರ್ಭದಲ್ಲಿ ಅಮೆರಿಕಾದ ರಾಯಭಾರಿಗೆ ಪ್ರಸ್ತುತ ಲೇಖಕ ಒಂದು ಪತ್ರ ಬರೆದು ಹೇಳಿದ್ದ : ''ನಿಮ್ಮ ನಿಕ್ಸನ್ ಒಬ್ಬ ಪಿಗ್ಸನ್; ನೀನು ಕೀಟಿಂಗ್, ನಿನಗೆ ಬೇಕು ಬೀಟಿಂಗ್.'' ನಮ್ಮ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಈ ಕೀಟಿಂಗ್‌ಗೆ ಭಾರಿ ಆಪ್ತರಾಗಿದ್ದರಂತೆ. ನಿಕ್ಸನ್-ಕಿಸಿಂಜರ್ ಅಂತಹ ದುಷ್ಟರ ವಿರುದ್ಧ ಅಂಜದೆ ನಿಲ್ಲಲು ಇಂದಿರಾ ಗಾಂಧಿಯವರ ದೃಢತೆ ಶ್ಲಾಘನೀಯವಾದುದು. ಈಚೆಗಿನ ನಮ್ಮ ನಾಯಕರು ವಾಷಿಂಗ್‌ಟನ್‌ಗೆ ಹೋಗಿಬಂದ ನಂತರ ಅಲ್ಲಿ ಅಧ್ಯಕ್ಷರಾದಿಯಾಗಿ ಏನೇನು ಮಾತನಾಡಿಕೊಂಡಿರಬಹುದು ಎಂಬುದನ್ನು ಊಹಿಸಿಕೊಳ್ಳಬೇಕು. ಕೊಂಡಲಿಸ್ಸಾ ಹೇಳಬಹುದು : ''ನಮ್ಮ ಕಿಂಕರ ಮಿತ್ರನೆಂದರೆ ಈತ. ನನ್ನ ಸಾಕುಪ್ರಾಣಿಗೆ ಪ್ರಣವ್ ಎಂಬ ಹೆಸರನ್ನಿಡಬೇಕೆಂಬ ಆಸೆಯುಂಟಾಗಿದೆ.'' ಅದ್ವಾನಿಯವರ ಬಗ್ಗೆ ಏನು ಹೇಳಿರಬಹುದು ? ''ರಾಜರ್ಷಿಯಂತೆ ಇವರು. ಭಾರಿ ಗುಡುಗಾಟದ ಮನುಷ್ಯ. ಆದರೆ ಅದೆಷ್ಟು ದೈನ್ಯತೆ, ನಮ್ರತೆ. ಲ್ಯಾಂಗ್ಲೆಗೆ ಭೇಟಿಕೊಟ್ಟು ಅದೆಷ್ಟು ಉಬ್ಬಿಹೋದ ! ನಮ್ಮ ಬಗ್ಗೆ ಅದೆಷ್ಟು ಅಭಿಮಾನ. ಇಂದಿರಾ ಗಾಂಧಿಯ ಸೊಕ್ಕಿಗೆ ಪೂರ್ತಿ ತದ್ವಿರುದ್ಧ. ಸ್ನೇಹಿತರು ಎಂದರೆ ಹೀಗಿರಬೇಕು,'' ಎಂದೆ ?

ಡಾ॥ ಮನಮೋಹನ ಸಿಂಗರ ಬಗ್ಗೆ ? ''ಇವರು ನಮ್ಮವರೇ. ಇವರ ಅರ್ಥಮಂತ್ರಿ ವಿದ್ಯೆ ಗಳಿಸಿದ್ದೇ ನಮ್ಮಲ್ಲಿ. ಬ್ರಿಟಿಷರನ್ನು ಹೊಗಳಿದ ಮಹಾಶಯ ನಮ್ಮನ್ನು ಹೀಯಾಳಿಸಿಯಾನೆ ! ಅದ್ಭುತ ವ್ಯಕ್ತಿ. ನಾಳೆಗೆ ನಮಗೆ ಸೇತುವೆ ಇವರೇ.''

– ಹೀಗೆಲ್ಲಾ ಆಗದಿರುವಂತೆ ನೋಡಿಕೊಳ್ಳಬೇಕಾದ ಜವಾಬ್ದಾರಿ ನಮ್ಮ ದೇಶದ ಮೇಲಿದೆ. ನಮ್ಮ ಘನತೆ ಕಾಪಾಡದಿರುವವರನ್ನು ನಮ್ಮ ಪ್ರತಿನಿಧಿಗಳನ್ನಾಗಿ ಕಳಿಸುವುದು ಬೇಡ; ಮೂವತ್ತು ವರ್ಷಗಳ ನಂತರ ಅಮೆರಿಕಾದವರು ಇಂದಿನ ದಾಖಲೆಗಳನ್ನು ಬಹಿರಂಗಗೊಳಿಸುವ ತನಕ ಕಾಯುವುದು ಬೇಡ. ಇದೆಲ್ಲದರ ಮಧ್ಯೆ ಆ ಅಯೋಗ್ಯ ಸಲ್ಮಾನ್ ಖಾನನನ್ನು ಬಂಧಿಸಿ ಜೈಲಿಗೆ ತಳ್ಳಲು ಮುಂಬೈ ಪೊಲೀಸರು ಇನ್ನೆಷ್ಟು ವರ್ಷ ಮೀನ-ಮೇಷ ಎಣಿಸುತ್ತಿರಬೇಕು ?

[signature]

---

*ಹಿಂದಿನ ಪುಟದಿಂದ (ಸಂಪಾದಕೀಯ)*

ಎಲ್ಲರೂ ಆ ಹಂತದಲ್ಲೇ ಕಲಿಯಲಾರಂಭಿಸುತ್ತಾರೆ. ಐದನೆಯ ತರಗತಿಯಿಂದ ಎರಡನೆಯ ಭಾಷೆ ಇರಬೇಕಾದ್ದು ಶೈಕ್ಷಣಿಕವಾಗಿ ಸಮರ್ಥನೀಯ. ಮಕ್ಕಳು ಮೊದಲು ವಿಶ್ವವನ್ನು, ತಮ್ಮ ಪರಿಸರವನ್ನು, ನೋಡಲು ಕಲಿಯಬೇಕು. ವಿಸ್ಮಯ-ಕುತೂಹಲ ಬೆಳೆಯಬೇಕಾದ್ದು ಆ ವಯಸ್ಸಿನಲ್ಲಿ. ನಮಗೆ ವಿಜ್ಞಾನಿ, ಗಣಿತಶಾಸ್ತ್ರಜ್ಞ, ತಂತ್ರಜ್ಞ, ಸಮಾಜ ವಿಜ್ಞಾನಿ ಮುಂತಾಗಿ ಉನ್ನತ ಮಟ್ಟದವರು ದೊರೆಯುವುದು ಆಗಲೇ. ಕೇವಲ ಭಾಷೆಗಳನ್ನು ಕಲಿಸುವುದು ಶಿಕ್ಷಣವಲ್ಲ, ಅದು ಹೊರೆ. ಮೊದಲ ನಾಲ್ಕು ವರ್ಷ ಮಾತೃಭಾಷೆ ಮತ್ತು ಇತರ ವಿಷಯಗಳು; ಐದರಿಂದ ಇನ್ನೊಂದು ಭಾಷೆ (ಇಂಗ್ಲಿಷ್); ಏಳರ ನಂತರ ವಿದ್ಯಾರ್ಥಿ ಇಚ್ಛಿಸಿದರೆ ಇನ್ನೊಂದು ಭಾಷೆ (ಸಂಸ್ಕೃತ, ಫ್ರೆಂಚ್, ಹಿಂದಿ ಇತ್ಯಾದಿ). ಇದು ಎಲ್ಲರಿಗೂ ಅನ್ವಯವಾಗುವ ಪಠ್ಯಕ್ರಮವಾಗಬೇಕು. ಯಾವ ದೇಶದಲ್ಲೂ ಮಾತೃಭಾಷೆಯನ್ನು ಬಿಟ್ಟು ಮೊದಲ ತರಗತಿಯಿಂದಲೇ ಇಂಗ್ಲಿಷ್ ಕಲಿಸುವುದಿಲ್ಲ; ಕಲಿಸಿದರೆ ಅದು ಅವೈಜ್ಞಾನಿಕ, ಅನನುಕರಣೀಯ.

ಶಿಕ್ಷಣದ ಮಾಧ್ಯಮ ಸಹ ಏಕಪ್ರಕಾರವಾಗದಿದ್ದರೆ ಸಮಾನ ಪಠ್ಯಕ್ರಮ ಸಾಧ್ಯವಿಲ್ಲ. ಕರ್ನಾಟಕದ ಸದ್ಯದ ಪರಿಸ್ಥಿತಿಯಲ್ಲಿ ಕನ್ನಡ ಮಾಧ್ಯಮವು ಸಾರ್ವತ್ರಿಕವಾಗುವುದು ಸಾಧ್ಯವೇ ಇಲ್ಲ. ವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ನ್ಯಾಯಾಲಯ ಅಡ್ಡ ಬರಬಹುದು ಇಲ್ಲವೆ ಕಡ್ಡಾಯ ಮಾಡಿದರೆ ಖಾಸಗಿ ಶಾಲೆಗಳು ಕೇಂದ್ರ ಶಿಕ್ಷಣ ಮಂಡಲಿಯ ಪಠ್ಯಕ್ಕೆ ಜಿಗಿಯಬಹುದು. ಆಗ ಮತ್ತೆ ಸರ್ಕಾರಿ ಶಾಲೆಗಳು ಮಾತ್ರ ನಿಯಮವನ್ನು ಪಾಲಿಸಿ ಅಲ್ಲಿಯ ಮಕ್ಕಳು ಅಸಮಾನ ಸ್ಪರ್ಧೆಗೆ ತುತ್ತಾಗುತ್ತಾರೆ. ಶಿಕ್ಷಣವು ರಾಜ್ಯದ ಅಧೀನದಲ್ಲಿರಬೇಕು ಮತ್ತು ರಾಜ್ಯದಲ್ಲಿ ಕೇಂದ್ರದ ಪಠ್ಯವು ಕೇಂದ್ರೀಯ ಶಾಲೆಗಳಿಗೆ ಮಾತ್ರ ಸೀಮಿತವಾಗಿರಬೇಕು. ಇಲ್ಲದಿದ್ದರೆ ಕನ್ನಡ ಮಾಧ್ಯಮ ನಿರಂತರವಾಗಿ ಮರೀಚಿಕೆಯಾಗಿರುತ್ತದೆ, ಬಾಯಿಯ ಚಪಲಕ್ಕೆ ಅದರ ಬಗ್ಗೆ ಮಾತನಾಡುತ್ತಿರಬಹುದು, ಅಷ್ಟೆ. ಆದರೆ ಇದೆಲ್ಲದಕ್ಕೂ ಪೂರ್ವಭಾವಿಯಾಗಿ ೧೯೮೬ರ ಶಿಕ್ಷಣ ನೀತಿಯ ಸೂತ್ರಗಳನ್ನು ಕಿತ್ತೊಗೆದು ತಾರತಮ್ಯರಹಿತವಾದ ಶಾಲೆಗಳನ್ನು ರಚಿಸಿಕೊಳ್ಳಬೇಕು. ಅಂತಹ ಸಮಾನತೆಯ ಸನ್ನಿವೇಶ ರಚಿಸಿಕೊಳ್ಳದಿದ್ದರೆ ಯಾವ ಭಾಷೆಯನ್ನು ಯಾವ ಹಂತದಿಂದ ಸಾರ್ವಜನಿಕ ಶಾಲೆಗಳಲ್ಲಿ ಕಲಿಸಿದರೂ ಖಾಸಗಿ ಶಾಲೆಗಳ ಮೇಲುಗೈ ಮುಂದುವರೆಯುತ್ತದೆ, ಹಿಂದುಳಿದಿರುವವರು ''ಅಲ್ಲೇ ಕುಂತಿರುತ್ತಾರೆ''. ನಮ್ಮ ಮಕ್ಕಳೂ ಒಂದನೆಯ ತರಗತಿಯಿಂದಲೇ ಇಂಗ್ಲಿಷ್ ಕಲಿಯುತ್ತವೆಂಬ ಭಾವನಾತ್ಮಕ ತೃಪ್ತಿ ಬಹಳ ಕಾಲ ನೆಮ್ಮದಿ ನೀಡುವುದಿಲ್ಲ. ಹೂರಣವಿಲ್ಲದ ಕಡುಬು ನೋಡಲಷ್ಟೇ ಕಡುಬಿನಂತಿರುತ್ತದೆಯಲ್ಲವೇ ?

[signature]

# ಸ್ವತಂತ್ರ ಭಾರತದಲ್ಲಿ ನಾವೆಷ್ಟು ಸುಖಿಗಳು ?

**ಈ ಪಾಟಿ ಬೆಲೆ ತೆತ್ತು , ದೌರ್ಜನ್ಯ ಸಹಿಸಿ ಗಳಿಸಿದ ಸ್ವಾತಂತ್ರ್ಯ ನಮ್ಮದು. ಯಾವ ಕನಸನ್ನು ಕಟ್ಟಿಕೊಂಡು ನೂರೆಂಟು ನೋವುಗಳನ್ನು ಸಹಿಸಿ ನಮ್ಮ ಹಿರಿಯರು ಈ ದೇಶವನ್ನು ಬ್ರಿಟಿಷರ ಕಬಂಧಬಾಹುವಿನಿಂದ ಮುಕ್ತಗೊಳಿಸಿದರೋ ಆ ಕನಸು ನನಸಾಗಿದೆಯೇ ಎಂಬ ಪ್ರಶ್ನೆಯೊಂದಿಗೆ ನಾವು ನಮ್ಮ ದಿನಚರಿಯನ್ನು ಆರಂಭಿಸಬೇಕಾಗಿದೆ. ಹಾಗಿದ್ದರೆ ನಮ್ಮ ಹಿರಿಯರು ಕಂಡ ಸ್ವತಂತ್ರ ಭಾರತದ ಸುಂದರ ಬದುಕಿಗೆ ಕಿಚ್ಚು ಹಚ್ಚಿದವರು ಯಾರು ? ಬ್ರಿಟಿಷರು ಇದ್ದಾಗಿನ ಭಾರತಕ್ಕಿಂತ ಅವರಿಲ್ಲದ ಇಂದಿನ ದಿನಗಳು ಯಾಕೆ ನೆಮ್ಮದಿಯ ದಾಗಿಲ್ಲ? – ಇಂಥ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವಾಗ ನಾವು ಸ್ವಾತಂತ್ರ್ಯೋತ್ತರ ಭಾರತದ ಒಟ್ಟಾರೆ ಆಡಳಿತ ಶೈಲಿಯನ್ನು ವಿಶ್ಲೇಷಣೆಗೆ ಒಡ್ಡಬೇಕಾಗುತ್ತದೆ.**

ವಿಷ್ಣು ನಾಯ್ಕ

“ನಿಮ್ಮ 'ಜನ' ಭಾರತೀಯ ಮಹಿಳೆಯರನ್ನು ಬೆತ್ತಲೆಗೊಳಿಸಿ, ಅವರನ್ನು ಮರಕ್ಕೆ ಕಟ್ಟಿ ಹಾಕಿ, ಹಿಂಸಿಸಿ ಸಾಯಿಸಿದ್ದಾರೆ. ನಿಮ್ಮ 'ಜನ' ಅವರನ್ನು ಬೆದರಿಸಿ ಬೀದಿ ಬೀದಿಯಲ್ಲಿ ಅವರ ಮೇಲೆ ಬಲಾತ್ಕಾರ ಮಾಡಿದ್ದಾರೆ, ಕೊಂದಿದ್ದಾರೆ. ನೀವು ಫ್ಯಾಸಿಸ್ಟ್ ಸೇಡಿನ ನೀತಿಯನ್ನು ಉದಾಹರಿಸಿದ್ದೀರಿ. ಆದರೆ ನಿಮ್ಮ 'ಜನ' ತಮಗೆ ಬೇಕಾದ ಹೋರಾಟಗಾರರು ಸಿಕ್ಕದಿದ್ದಾಗ, ಅವರ ಮನೆಯ ಹೆಂಗಸರ ಮೇಲೆ ಬಲಾತ್ಕಾರ ಮಾಡಿ, ಅವರನ್ನು ಕೊಲೆ ಮಾಡಿದ್ದಾರೆ... ಒಂದು ಸಾವಿರಕ್ಕಿಂತ ಕಡಿಮೆ ದೇಶ ಭಕ್ತರನ್ನು ಕೊಂದಿರುವುದಾಗಿ ನೀವು ಹೇಳಿಕೊಂಡಿದ್ದೀರಿ. ಆದರೆ ವಾಸ್ತವವಾಗಿ ಐವತ್ತು ಸಾವಿರಕ್ಕಿಂತ ಹೆಚ್ಚು ಜನ ದೇಶಭಕ್ತರು ಜೀವ ಕಳೆದುಕೊಂಡಿದ್ದಾರೆ; ಅದಕ್ಕಿಂತ ಎಷ್ಟೋ ಪಟ್ಟು ಹೆಚ್ಚು ಮಂದಿ ಗಾಯಗೊಂಡಿದ್ದಾರೆ, ದೌರ್ಜನ್ಯಕ್ಕೀಡಾಗಿದ್ದಾರೆ. ಕೇವಲ ಎರಡು ವಾರಗಳ ಕಾಲ ದೇಶವನ್ನು ಸುತ್ತಲು ನನಗೆ ಅವಕಾಶ ಕೊಡಿ; ನಿಮ್ಮ ಪೊಲೀಸರು ನನ್ನನ್ನು ತಡೆಯದಿರಲಿ. ಆಗ, ನಿಮ್ಮ ದೌರ್ಜನ್ಯಕ್ಕೆ ಬಲಿಯಾದ ಹತ್ತು ಸಾವಿರಕ್ಕೂ ಹೆಚ್ಚು ದೇಶ ಭಕ್ತರ ಹೆಸರು, ವಿಳಾಸಗಳನ್ನು ನಾನು ಪಟ್ಟಿ ಮಾಡಿಕೊಡುತ್ತೇನೆ...''

– ಆಗಸ್ಟ್ ಕ್ರಾಂತಿಯ ಸಂದರ್ಭದಲ್ಲಿ ಬ್ರಿಟಿಷ್ ಆಡಳಿತದ ಕಣ್ಣು ತಪ್ಪಿಸಿಕೊಂಡು ಭೂಗತರಾಗಿದ್ದ ಡಾ॥ ರಾಮಮನೋಹರ ಲೋಹಿಯಾ ಅವರು ಸ್ವಾತಂತ್ರ್ಯ ಹೋರಾಟಗಾರರ ಮೇಲೆ ಬ್ರಿಟಿಷ್ ಸರ್ಕಾರ ನಡೆಸಿದ ಹಿಂಸೆಯನ್ನು ಪ್ರತಿಭಟಿಸಿ, ಅಂದಿನ ಭಾರತದ ವೈಸ್‌ರಾಯ್ ಲಾರ್ಡ್ ಲಿನ್‌ಲಿಥ್‌ಗೋ ಅವರಿಗೆ ಬರೆದ ಸುದೀರ್ಘ ಬಹಿರಂಗ ಪತ್ರದಲ್ಲಿ ಅಡಕವಾಗಿರುವ ಮಾತುಗಳಿವು (ನೋಡಿ : 'ಸ್ವಾತಂತ್ರ್ಯದ ಅಂತರ್ಜಲ', ಅನು : ಮಂಗಳೂರು ವಿಜಯ, ಪುಟ-೫).

ನಮಗೆ ಸ್ವಾತಂತ್ರ್ಯ ದೊರಕುವದಕ್ಕೂ ಮೊದಲು ಹರಿದುಹೋದ ರಕ್ತದ ಕಲ್ಪನೆ-ದೌರ್ಜನ್ಯಗಳ ಅಂದಾಜು ಇಂದಿನ ಪೀಳಿಗೆಗೆ ಇರಲಿ ಎಂಬ ಉದ್ದೇಶದಿಂದ ಇದನ್ನಿಲ್ಲಿ ಪ್ರಸ್ತಾಪಿಸಿದ್ದೇನೆ. ಸ್ವಾತಂತ್ರ್ಯೋತ್ತರ ಕಾಲದ ತಲೆಮಾರಿನವರಾದ ನಮ್ಮಲ್ಲಿ ಹೆಚ್ಚಿನವರಿಗೆ, ನಾವೀಗ ಅನುಭವಿಸುತ್ತಿರುವ ಸ್ವಾತಂತ್ರ್ಯ ಗಾಂಧೀಜಿ ತಂದು ಕೊಟ್ಟದ್ದು; ಸತ್ಯ-ಅಹಿಂಸೆ-ಸತ್ಯಾಗ್ರಹಗಳೆಂಬ ಮಂತ್ರ ದಂಡಗಳನ್ನು ಅವರು ಪ್ರಯೋಗಿಸಿ ಇದನ್ನು ನಮಗೆ ದೊರಕಿಸಿಕೊಟ್ಟರು – ಎಂಬುದಷ್ಟೇ ಗೊತ್ತು. ನಿಜ, ಗಾಂಧಿ ಎಂಬ 'ಗುರು' ಹೇಳಿದ ಮಾತನ್ನು ದೇವರ ಆದೇಶವೆಂಬಷ್ಟೇ ಶ್ರದ್ಧೆಯಿಂದ ಅನುಸರಿಸಿ ಅಹಿಂಸಾ ಮಾರ್ಗದಲ್ಲಿಯೇ ನಮ್ಮ ಹೋರಾಟ ನಡೆದದ್ದಿದೆ. ಗಾಂಧೀ ನಾಯಕತ್ವದ ಕಾಲಾವಧಿಯ ನಮ್ಮ ಹೋರಾಟದ ಪ್ರಥಮ ಮತ್ತು ಪರಮೋಚ್ಚ ಕಾಳಜಿ ಕೂಡ ಅದೇ ಆಗಿತ್ತು. ಆದರೆ ಚಲೇಜಾವ್ ಚಳವಳಿಯ ಸಂದರ್ಭದಲ್ಲಿ ಇಡೀ ದೇಶಕ್ಕೆ ಬ್ರಿಟಿಷ್ ರಾಜಸತ್ತೆ ರಕ್ತದ ಕಲೆಗಳನ್ನು ಅಂಟಿಸಿಬಿಟ್ಟಿದ್ದು ಮರೆಯಲಾಗದ ಇತಿಹಾಸ. ಅದಕ್ಕಿಂತ ಪೂರ್ವದಲ್ಲೂ ಕೂಡ ಜಲಿಯನ್‌ವಾಲಾಬಾಗ್ ಹತ್ಯಾಕಾಂಡದಂಥ ಕರಾಳ ಅಧ್ಯಾಯಗಳು ನಡೆದುಹೋದದ್ದಿವೆ.

ಈ ಪಾಟಿ ಬೆಲೆ ತೆತ್ತು, ದೌರ್ಜನ್ಯ ಸಹಿಸಿ ಗಳಿಸಿದ ಸ್ವಾತಂತ್ರ್ಯ ನಮ್ಮದು. ಯಾವ ಕನಸನ್ನು ಕಟ್ಟಿಕೊಂಡು ನೂರೆಂಟು ನೋವುಗಳನ್ನು ಸಹಿಸಿ ನಮ್ಮ ಹಿರಿಯರು ಈ ದೇಶವನ್ನು ಬ್ರಿಟಿಷರ ಕಬಂಧಬಾಹುವಿನಿಂದ ಮುಕ್ತಗೊಳಿಸಿದರೋ ಆ ಕನಸು ನನಸಾಗಿದೆಯೇ ಎಂಬ ಪ್ರಶ್ನೆಯೊಂದಿಗೆ ನಾವು ನಮ್ಮ ದಿನಚರಿಯನ್ನು ಆರಂಭಿಸಬೇಕಾಗಿದೆ. ಹಾಗಿದ್ದರೆ ನಮ್ಮ ಹಿರಿಯರು ಕಂಡ ಸ್ವತಂತ್ರ ಭಾರತದ ಸುಂದರ ಬದುಕಿಗೆ ಕಿಚ್ಚು ಹಚ್ಚಿದವರು ಯಾರು ? ಬ್ರಿಟಿಷರು ಇದ್ದಾಗಿನ ಭಾರತಕ್ಕಿಂತ ಅವರಿಲ್ಲದ ಇಂದಿನ ದಿನಗಳು ಯಾಕೆ ನೆಮ್ಮದಿಯದಾಗಿಲ್ಲ? – ಇಂಥ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವಾಗ ನಾವು ಸ್ವಾತಂತ್ರ್ಯೋತ್ತರ ಭಾರತದ ಒಟ್ಟಾರೆ ಆಡಳಿತ ಶೈಲಿಯನ್ನು ವಿಶ್ಲೇಷಣೆಗೆ ಒಡ್ಡಬೇಕಾಗುತ್ತದೆ.

ಬೆಚ್ಚಿಬೀಳಿಸುವ ಸಂಗತಿಯೆಂದರೆ, ಗಾಂಧೀ ಯಾವ ಮೌಲ್ಯಗಳ ಪ್ರತಿಪಾದಕರಾಗಿದ್ದರೋ, ಆ ಅಂಥ ಕೆಲವು ಜಗದ್ವಂದ್ಯ ಮೌಲ್ಯಗಳನ್ನು ನಾವು ಅವರ ಭೌತಿಕ ಶರೀರದ ಜೊತೆಜೊತೆಯಲ್ಲೇ ಕೊಲೆ ಮಾಡಿದ್ದು. ಈ ದೇಶವನ್ನು ತಳಮಟ್ಟದಿಂದ ಕಟ್ಟುವುದಕ್ಕಾಗಿ ಗಾಂಧಿ ಎಂಬ 'ಗುರು' ನಮ್ಮ ಮುಂದೆ ಹಲವು ಪ್ರಸ್ತಾಪಗಳನ್ನಿಟ್ಟಿದ್ದರು. ಮುಖ್ಯವಾಗಿ ಸ್ವಯಂಪೂರ್ಣವಾದ ಬಲಿಷ್ಠ ಗ್ರಾಮಗಳ ಕನಸಿನೊಂದಿಗೆ, ಗ್ರಾಮ ಸ್ವಯಮಾಡಳಿತದ ಪರಿಕಲ್ಪನೆಯನ್ನು ತೆರೆದಿಟ್ಟಿದ್ದರು. ಗಾಂಧೀಜಿಯವರ ಈ ಗ್ರಾಮಸ್ವರಾಜ್ಯ ಕಲ್ಪನೆ ಅವರ ಪಟ್ಟಶಿಷ್ಯರಲ್ಲಿ ಒಬ್ಬರಾದ ನೆಹರೂ ಅವರ ಆಡಳಿತದ ಕಾಲಾವಧಿಯಲ್ಲೇ ಅವಜ್ಞೆಗೆ ಒಳಗಾದದ್ದು ಬಹುದೊಡ್ಡ ವ್ಯಂಗ್ಯ. ಆ ಕಹಿಫಲವನ್ನು ಈ ಗಳಿಗೆಯವರೆಗೂ ನಾವು ಅನುಭವಿಸಬೇಕಾಯಿತು. ಇತ್ತೀಚಿನ ದಶಕಗಳಲ್ಲಿ ವಿಕೇಂದ್ರೀಕರಣ ವ್ಯವಸ್ಥೆಯೇನೋ ಬಂತು. ಆದರೆ, ಅದು ಆರಂಭವಾದ ಕಾಲ ಎಷ್ಟು ಕೆಟ್ಟದ್ದೆಂದರೆ – ಅದು ಭ್ರಷ್ಟಾಚಾರವೆಂಬ ರಕ್ತ ಬೀಜಾಸುರನನ್ನು ತನ್ನ ಜೊತೆ ಗಿಟ್ಟುಕೊಂಡೆ ಬಂತು. ಹೀಗಾಗಿ, ಗಾಂಧೀಜಿ ಕಂಡ ಗ್ರಾಮ ಸ್ವರಾಜ್ಯ ಕಲ್ಪನೆ ಕಾನೂನಿನ ಪುಸ್ತಕದಲ್ಲಿ ಬಂತೇ ವಿನಾ ಕ್ರಿಯೆಯಾಗಿ ಫಲಿಸಲೇ ಇಲ್ಲ.

ಇನ್ನು, ಪಕ್ಷರಾಜಕಾರಣದ ಬಗ್ಗೆ ತುಸು ಯೋಚಿಸೋಣ : ಈ ದೇಶ ಹೆತ್ತಷ್ಟು ರಾಜಕೀಯ ಪಕ್ಷಗಳನ್ನು – ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡಿರುವ ಜಗತ್ತಿನ – ಯಾವ ರಾಷ್ಟ್ರದಲ್ಲೂ ಕಾಣಲು ಸಾಧ್ಯವಿಲ್ಲ. 'ಸ್ವಾತಂತ್ರ್ಯ ಕೈಗೆ ಬಂದಿದೆ, ಬಾಯಿಗೆ ಬಂದಿಲ್ಲ' ಎಂಬಂಥ ಪರಿಸ್ಥಿತಿಯಲ್ಲಿ ನಾವಿಂದೂ ಇದ್ದೇವೆ. ಈ ಪರಿಸ್ಥಿತಿಯ ಬಲಿಷ್ಠ ಕಾರಣಗಳಲ್ಲಿ 'ಕೀಳಭಿರುಚಿಯ ಪಕ್ಷ ರಾಜಕಾರಣದ ಮೇಲಾಟ'ವೂ ಸೇರಿದೆ. ಈ ದೇಶಕ್ಕೆ ಎರಡು, ಹೆಚ್ಚೆಂದರೆ ಮೂರು ರಾಜಕೀಯ ಪಕ್ಷಗಳು ಸಾಕೆಂಬ ಮಾತನ್ನು ಐವತ್ತರ ದಶಕದಿಂದಲೂ ರಾಜಕೀಯ ತಜ್ಞರು ಹೇಳುತ್ತಲೇ ಬಂದಿದ್ದಾರೆ. ಆದರೆ, ಅದನ್ನು ನಮ್ಮ ರಾಜಕಾರಣಿಗಳು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ. ನೂರಕ್ಕಿಂತ ಹೆಚ್ಚು ರಾಜಕೀಯ ಪಕ್ಷಗಳು, ಇವುಗಳ ಲೆಕ್ಕಾಚಾರ ಮತ್ತು ಇವುಗಳ ಬಗ್ಗೆ ನಿಗಾ ಇಡುವುದೇ ಚುನಾವಣೆ ಆಯೋಗಕ್ಕೊಂದು ಸವಾಲಾಗಿ ಪರಿಣಮಿಸಿದೆ. ಪಕ್ಷಾಂತರ ನಿಷೇಧ ಕಾನೂನುಗಳು ಒಂದರ ಮೇಲೊಂದರಂತೆ ಬಂದವು. ಅವೆಲ್ಲವನ್ನೂ ನಿಷ್ಪ್ರಯೋಜಕಗೊಳಿಸುವಂಥ ರಾಜಕೀಯ ಒಳತಂತ್ರಗಳು ನಡೆಯುತ್ತಲೇ ಇವೆ.

ಸ್ವತಂತ್ರ ಭಾರತದಲ್ಲಿ ನಿಜವಾದ ಅರ್ಥದೊಳಗೆ ಬಹುಮತದ ಸರ್ಕಾರವೇ ಬಂದಿಲ್ಲವೆಂದರೆ ಯಾರೂ ಅಚ್ಚರಿಪಡಬೇಕಾಗಿಲ್ಲ. ಹೆಚ್ಚೆಂದರೆ ಮಹಾಚುನಾವಣೆಗಳಲ್ಲಿ ದಾಖಲಾದುದು ಶೇ. ೬೦ರಿಂದ ೭೦ರಷ್ಟು ಮತದಾನ. ಚಲಾಯಿಸಲಾಗುವ ಮತಗಳು ಸ್ಪರ್ಧಾಕಣದಲ್ಲಿರುವ ಆರೇಳು ಪಕ್ಷಗಳಿಗೆ ಹಂಚಿಹೋಗುತ್ತವೆ. ತತ್‌ಪರಿಣಾಮವಾಗಿ ಒಟ್ಟು ಮತದಾರರ ಸಂಖ್ಯೆಯ

ಶೇ. ೩೦ ಪಡೆದವನೂ ಕೂಡ ಲೋಕಸಭೆಗೋ, ವಿಧಾನಸಭೆಗೋ ಆಯ್ಕೆಯಾಗಿ ಹೋಗುತ್ತಾನೆ ಮತ್ತು ಇಡೀ ನಮ್ಮ ಶಾಸನಸಭೆಗಳು ಇಂಥ ನಾಯಕರಿಂದಲೇ ತುಂಬಿವೆ. ಅಲ್ಲಿಂದ ಇಲ್ಲಿಯವರೆಗೆ ಈ ದೇಶವನ್ನು ಆಳಿದ ಯಾವ ಆಡಳಿತಾರೂಢ ಪಕ್ಷವೂ ಚಲಾವಣೆಯಾದ ಒಟ್ಟು ಮತಗಳಲ್ಲಿ ಶೇ. ೪೫ಕ್ಕಿಂತ ಹೆಚ್ಚು ಪಡೆದಿಲ್ಲ ಎಂಬುದರ ಕಲ್ಪನೆ ಮಾಡಿಕೊಂಡರೆ ನಮ್ಮ ಪ್ರಜಾಪ್ರಭುತ್ವ ಯಾವ ಸ್ಥಿತಿಯಲ್ಲಿದೆ ಎಂಬುದರ ಅರಿವಾದೀತು.

ಪ್ರಜಾಸತ್ತೆಯ ನಿಜವಾದ ಕಾವಲುಗಾರನ ಪಾತ್ರ ವಿರೋಧಪಕ್ಷದ್ದು. ಇತ್ತೀಚಿನ ದಶಕಗಳಲ್ಲಿ ವಿರೋಧ ಪಕ್ಷಗಳೂ ಕೂಡ ಆಳುವ ಪಕ್ಷಗಳಿಗಿಂತ ಹೆಚ್ಚು ನಿರ್ಲಜ್ಜ ನಡವಳಿಕೆಯನ್ನು ದಾಖಲಿಸತೊಡಗಿರುವುದು ಇನ್ನೊಂದು ಬಗೆಯ ದುರಂತ.

ಗಾಂಧೀ ಕನಸಿನ ಭಾರತದಲ್ಲಿ ಬಡತನಕ್ಕೆ ಅವಕಾಶವಿಲ್ಲ. ಕುಡಿತ ಎಂಬುದೊಂದು ಅಭಿಶಾಪ. ಅಸ್ಪೃಶ್ಯತೆ ಎಂಬುದು ಅಂಟಿಕೊಂಡಿರುವ ಮಹಾನ್ ಕಳಂಕ – ಇವೆಲ್ಲ ನಮಗೆ ನೆನಪಾಗುವುದು ಅಕ್ಟೋಬರ್ ೨ರಂದು ಮಾತ್ರ!

ಇಂದು, ಈ ದೇಶದ ಯಾವುದೇ ಮನೆಯಲ್ಲಿ ಒಂದು ಹೊಸ ಮಗು ಹುಟ್ಟಿಬಂದರೆ, ತನ್ನದಲ್ಲದ ತಪ್ಪಿಗೆ ಸುಮಾರು ಐದು ಸಾವಿರ ರೂ.ಗಳಷ್ಟು ಸಾಲವನ್ನು ಹೊತ್ತುಕೊಂಡೇ ಬರುತ್ತದೆ. ಸ್ವಾತಂತ್ರ್ಯ ಸಿಕ್ಕಿದ ಆರಂಭದ ದಿನಗಳಲ್ಲಿ ಈ ದೇಶದೊಳಗೆ ಐದುನೂರು ಕೋಟಿ ರೂ.ನಷ್ಟು ಸಂಪತ್ತಿರುವ ಏಳು ಜನ ಶ್ರೀಮಂತರಿದ್ದರಂತೆ. ಈಗ ಹತ್ತು ಸಾವಿರ ಕೋಟಿ ರೂ.ಗಿಂತ ಹೆಚ್ಚು ಸಂಪತ್ತುಳ್ಳವರ ಸಂಖ್ಯೆ ನೂರಕ್ಕೆ ದಾಟಿದೆ! ಪ್ರಾಯಶಃ ಈ ಹಿನ್ನೆಲೆಯಲ್ಲೇ ಡಾ|| ಅಂಬೇಡ್ಕರ್, ''ಶ್ರೀಮಂತರ ಸಿರಿತನವು ದರಿದ್ರರ ಬಡತನದಲ್ಲಿದೆ'' ಎಂದು ಹೇಳಿರಬಹುದು.

ಗಾಂಧಿ ವರ್ಣಾಶ್ರಮ ಪದ್ಧತಿಯನ್ನು ಆರ್ಥಿಕ ಕಾರಣಗಳಿಗಾಗಿ ಸಮರ್ಥಿಸುತ್ತಿದ್ದರು. ಯಾವ ಕಾರಣಗಳಿಗಾಗಿ ಸಮರ್ಥಿಸಿದರೂ ಕೂಡ ಅದು ತಪ್ಪೇ. ಗಾಂಧಿ ಇನ್ನಷ್ಟು ಕಾಲ ಬದುಕಿದ್ದರೆ ತಮ್ಮ ಆ ನಿಲುವನ್ನು ಬಹಿರಂಗವಾಗಿ ಒಪ್ಪಿಕೊಂಡು ಪಶ್ಚಾತ್ತಾಪ ಪಡುತ್ತಿದ್ದರೇನೋ! ೨೧ನೇ ಶತಮಾನಕ್ಕೆ ಕಾಲಿಟ್ಟು ಐದು ಸಂವತ್ಸರ ಕಳೆದರೂ ಕೂಡ ಇಂದು ಈ ದೇಶ ಯಾವ ಸ್ಥಿತಿಯಲ್ಲಿದೆ ?! ನನಗೆ ಪುನಃ ಇಲ್ಲಿ ಅಂಬೇಡ್ಕರ್ ನೆನಪಾಗುತ್ತಾರೆ. ಭಾರತೀಯ ಹಿಂದೂ ಸಮಾಜವನ್ನು ಅಸಮಾನತೆಯ ತವರು ಎಂದು ಗುರುತಿಸಿದ ಅವರು, ''ಅದು ಏಣಿಯಿಲ್ಲದ, ಪ್ರವೇಶ ದ್ವಾರವಿಲ್ಲದ ಅನೇಕ ಮಹಡಿಗಳ ಗೋಪುರ'' ಎನ್ನುತ್ತಾರೆ. ಅಂದರೆ ಪ್ರವೇಶ ದ್ವಾರವಿಲ್ಲದ ಈ ಮಹಡಿಯ ಒಂದು ಕೋಣೆಯಲ್ಲಿ ಹುಟ್ಟಿದವರು ಇನ್ನೊಂದು ಕೋಣೆಯ ಸಂಪರ್ಕ ಬೆಳೆಸುವಂತೆಯೇ ಇಲ್ಲ. ಕಾಲರಾಯ ಅಂಬೇಡ್ಕರರ ಈ ಅಭಿಪ್ರಾಯವನ್ನು ಒರೆಗೆ ಹಚ್ಚಿ ನೋಡಿದ್ದಾನೆ ಮತ್ತು ಅದರಿಂದಾಗಿ ಒಂದಷ್ಟು ಬದಲಾವಣೆಗಳು ಇತ್ತೀಚಿನ ದಿನಗಳಲ್ಲಿ ನಮಗೆ ಕಂಡುಬಂದಿವೆಯಾದರೂ ದಲಿತರ ಬಾಯಿಗೆ ಮಲ ತುರುಕುವ, ಕಾಲುಗಳಿಗೆ ಸರಪಳಿ ತೊಡಿಸುವ, ಶೂದ್ರ ವರ್ಗವನ್ನು ತುಚ್ಛವಾಗಿ ಕಾಣುವ ವಾತಾವರಣ ಈಗಲೂ ಅಲ್ಲಲ್ಲಿ ಉಳಿದಿವೆ. ತುಂಬಾ ಆತಂಕದ ಸಂಗತಿಯೆಂದರೆ, ನಾವು ವರ್ಷ ಕಳೆದಂತೆ ಹೆಚ್ಚು ಹೆಚ್ಚು ಮನುಷ್ಯ ಸಂಬಂಧಗಳಿಂದ ದೂರವಾಗುತ್ತಿರುವುದು.

ರಾಜಕೀಯದಲ್ಲಿ ಧರ್ಮ ಬೆರೆಸಬಾರದೆಂಬ ಮಾತನ್ನು ಅಂದಿನಿಂದ ಇಂದಿನವರೆಗೆ ಎಲ್ಲರೂ ಹೇಳುತ್ತ ಬಂದವರೇ. ನಮಗೆ ಕೊಡಲ್ಪಟ್ಟ ಹಕ್ಕುಗಳು ಒಮ್ಮೊಮ್ಮೆ ನಮ್ಮ ದೇಶಕ್ಕೆ ಹೇಗೆ ಮುಳುವಾಗಿವೆ ಎಂಬುದನ್ನು ನೋಡಬಹುದು. ಆಸ್ತಿಯ ಹಕ್ಕು ನಮಗೆ ಇದ್ದುದರಿಂದಲೇ ಇಂದು ಸಾವಿರ ಕೋಟಿ ಆಸ್ತಿ ಇದ್ದವನನ್ನು ನಾವು ಪ್ರಶ್ನಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಹಾಗೆಯೇ, ನಂಬಿಕೆಯ ಸ್ವಾತಂತ್ರ್ಯ ನಮಗೆ ಇದ್ದುದರಿಂದಲೇ ಇಂದು ನಾವು ಇಡೀ ಸಮಾಜವನ್ನು ಹೋಳುಹೋಳು ಮಾಡುವಂಥ ಅಪಾಯಕಾರಿಯಾದ ನಂಬಿಕೆಗಳನ್ನು ಬೆಳೆಸಿಕೊಂಡಿದ್ದೇವೆ ಮತ್ತು ಅದನ್ನು ಮುಚ್ಚಿಹಾಕುವುದಕ್ಕೆ ಧರ್ಮ-ದೇವರು-ಆರಾಧನೆಗಳೆಂಬ ಶಾಲೀನತೆಯ ಶಾಲನ್ನು ಹೊದ್ದುಕೊಂಡಿದ್ದೇವೆ. ''ಗುಡಿ, ಚರ್ಚು, ಮಸೀದಿಗಳನ್ನು ಬಿಟ್ಟು ಹೊರಬನ್ನಿ'' ಎಂದೇನೊ ಕರೆ ಕೊಟ್ಟರು ರಾಷ್ಟ್ರಕವಿಗಳು. ಆದರೆ ಇಂದಿನ ರಾಜಕಾರಣದ ಮುಖ್ಯನೆಲೆಯೇ ಗುಡಿ-ಚರ್ಚು-ಮಸೀದಿಗಳಾಗಿವೆ!

ಅಂದು ಬ್ರಿಟನ್ ನಮ್ಮನ್ನು ಆಳುತ್ತಿತ್ತು, ಇಂದು ನಮ್ಮ ಜುಟ್ಟು ಅಮೆರಿಕೆಯ ಕೈಯಲ್ಲಿದೆ. ನಮ್ಮ ಮಾರ್ಕೆಟನ್ನು ಅವರು ಕಂಟ್ರೋಲ್ ಮಾಡುತ್ತಿದ್ದಾರೆ. ಪರೋಕ್ಷವಾಗಿ ನಮ್ಮ ಗಡಿ ನಿಯಂತ್ರಣ ರೇಖೆಗಳ ಮೇಲೂ ಅವರ ಹತೋಟಿಯಿದೆ. ಮನುಷ್ಯನ ಅಂತಃಕರಣಕ್ಕೆ ಯಾವ ಹಿತವನ್ನೂ ಕೊಡದ ಜಾಗತೀಕರಣ, ಖಾಸಗೀಕರಣ, ಉದಾರೀಕರಣಗಳೆಂಬ ತ್ರಿವಳಿ ಸವಾಲುಗಳನ್ನು ನಾವು ಎದುರಿಸಬೇಕಾಗಿದೆ.

ಎಲ್ಲಕ್ಕಿಂತ ಹೆಚ್ಚಿನ ನೋವಿನ ಸಂಗತಿ ಎಂದರೆ, ಇಂದು ನಮ್ಮ ಪಾರ್ಲಿಮೆಂಟಿನಲ್ಲಿ ಪ್ರತಿ ಐದು ಜನರಲ್ಲಿ ಒಬ್ಬ ಒಂದಲ್ಲಾ ಒಂದು ಕ್ರಿಮಿನಲ್ ಮೊಕದ್ದಮೆ ಎದುರಿಸುವವನಾಗಿದ್ದಾನೆ ಎಂಬುದು! ಇವರಲ್ಲಿ ಶೇಕಡ ಅರ್ಧದಷ್ಟು ನಿರಪರಾಧಿಗಳೆಂದು ಭಾವಿಸಿದರೂ ಪ್ರತಿ ಹತ್ತು ಜನರಲ್ಲಿ ಒಬ್ಬ ಗೂಂಡಾ ನಮ್ಮನ್ನು ಆಳುತ್ತಿದ್ದಾನೆಂದಾಯಿತು!

ಇನ್ನೆರಡು ವರ್ಷ ಕಳೆದರೆ ಸ್ವತಂತ್ರ ಭಾರತಕ್ಕೆ ಅರವತ್ತು ತುಂಬುತ್ತದೆ. ಅಂದರೆ, ಸರಿ ಸುಮಾರು ಎರಡು ತಲೆಮಾರುಗಳು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕಳೆದಿವೆ ಅಥವಾ ಕಳೆಯುತ್ತಿವೆ. ಹಾಗಿದ್ದರೆ ನಮ್ಮ ಈ ದುಃಸ್ಥಿತಿಗೆ ಯಾರು ಹೊಣೆ ?... ಈಗಲೂ ಶೇ. ೪೦ರಷ್ಟು ಜನ ಈ ದೇಶದಲ್ಲಿ ಬಡತನದ ರೇಖೆಗಿಂತ ಕೆಳಗಿದ್ದಾರೆ. ಇವರನ್ನು ಮೇಲೆತ್ತುವುದಕ್ಕೆ ಯಾಕೆ ನಮ್ಮ ಅರವತ್ತು ವರ್ಷಗಳು ಸೋತವು ?... 'ಸರ್ವರಿಗೆ ಸಮಬಾಳು' ಎಂಬ ನೀತಿಗೆ ಅಡ್ಡಿಯಾದವರು ಯಾರು ?...

ಇದ್ದುದರಲ್ಲೇ ಒಂದು ನೆಮ್ಮದಿಯ ಸಂಗತಿಯೆಂದರೆ, ಆಹಾರ ಸಾಮಗ್ರಿಗಳಲ್ಲಿ ನಾವು ಸ್ವಯಂಪೂರ್ಣರಾಗಿದ್ದೇವೆ. ನಾಲ್ಕಾರು ವರ್ಷ ಬರಗಾಲ ಬಿದ್ದರೂ ಭಾರತದ ಜನಸಂಖ್ಯೆಗೆ ಸಾಲುವಷ್ಟು ನಮ್ಮಲ್ಲಿ ಆಹಾರ ದಾಸ್ತಾನುಗಳಿವೆ. ಆದರೂ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾನೆ! ಕೂಲಿಯ ಬೆವರಿಗೆ ತಕ್ಕ ಕಾಳು ಸಿಗುತ್ತಿಲ್ಲ. ಬಾಲ ಕಾರ್ಮಿಕರ ಸಮಸ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚತೊಡಗಿದೆ. ನಿರಕ್ಷರತೆ, ವಿಶೇಷವಾಗಿ ಉತ್ತರ ಭಾರತದಲ್ಲಿ, ಇಂದಿಗೂ ಒಂದು ಗಂಭೀರ ಸಮಸ್ಯೆಯಾಗಿಯೇ ಉಳಿದಿದೆ.

ಏನೂ ಪ್ರಗತಿಯಾಗಿಲ್ಲ, ಎಲ್ಲವೂ ಕೆಟ್ಟುಹೋಗಿದೆ, ಪ್ರತಿಯೊಬ್ಬನೂ ಕೊಳಕನಾಗಿದ್ದಾನೆ ಎಂಬಂಥ ಸಿನಿಕತನದ ಷರಾ ಎಳೆಯುವುದಕ್ಕೆ ನಾನು ಸಿದ್ಧನಿಲ್ಲ. ಆದರೆ ಮನುಷ್ಯ ಹೆಚ್ಚು ಹೆಚ್ಚು ಸುಶಿಕ್ಷಿತನಾದಷ್ಟೂ ಹೆಚ್ಚು ಹೆಚ್ಚು ಭ್ರಷ್ಟನಾಗುತ್ತಿದ್ದಾನಲ್ಲ! ತನ್ನೊಳಗೇ ಒಂದು ದ್ವೀಪ ಕಟ್ಟಿಕೊಂಡು ತಾನೇ ಭೂಪನಾಗಿ ಮೆರೆಯ ಬಯಸುತ್ತಾನಲ್ಲ! ಈ ಪ್ರವೃತ್ತಿ ನಿಜಕ್ಕೂ ಇಂದಿನ ದೊಡ್ಡ ಗಂಡಾಂತರವಾಗಿದೆ. 'ಎಲ್ಲೂ ಸಲ್ಲದವರು ರಾಜಕೀಯಕ್ಕೆ' ಎಂಬ ನಂಬಿಕೆ ಹೊರಟುಹೋಗುವವರೆಗೆ ಈ ದೇಶ ಇನ್ನೇನನ್ನೇ ಪಡೆದಿರಲಿ, ಬರಕತ್ತಾಗದು!

ವಿಷ್ಣು ನಾಯ್ಕ
'ಪರಿಮಳ', ಅಂಬಾರಕೊಡ್ಲು, ಅಂಕೋಲಾ - ೫೮೧ ೩೧೪

ನಮ್ಮ ಕೇರಿಯ ಕೊನೆಯ ಅಂಚಿನಲ್ಲಿ ಮೂಡಣಕ್ಕೆ ಎದುರಾಗಿ ಜೋಪಡಿಯೊಂದಿದೆ. ಅದು ಚವರಿ ಕೂದಲು ಮಾರೋ ದುಗ್ಗಿಯದು. ಆಕೆಯ ಜೋಪಡಿಯಲ್ಲಿ ಅಡಗಿರುವುದು ದಟ್ಟ ದರಿದ್ರ ಬಡತನ. ಚವರಿ ಕೂದಲು ಮಾರಿದರೇನೇ ಆಕೆಯ ಹೊಟ್ಟೆಗೆ ಅವತ್ತು ತುತ್ತು ಕೂಳು ಸಿಗೋದು. ಇಲ್ಲದಿದ್ದರೆ ಅದ್ಯಾರೋ ನೀಡಿದ ಹಳಸಿದ ಅನ್ನವೇ ಗತಿ. ಹಸಿವು ತಾಳದೇ ಹೀಗೆ ಸಿಕ್ಕದ್ದನ್ನೆಲ್ಲಾ ತಿಂದು ಕಾಯಿಲೆಗೆ ಬಿದ್ದದ್ದು ಇದೆ! ದೈವವನ್ನು ಶಪಿಸಿ, ಹಣೆಬರಹದಾಗ ಬರದಿದ್ದು ಆಕ್ಕೈತೆ ಎಂದು ಮತ್ತೆ ತನ್ನ ನಿತ್ಯ ಕಾಯಕದಲ್ಲಿ ನಿರತಳಾಗುತ್ತಿದ್ದಳು.

ದುಗ್ಗಿಗೊಂದು ಪುಟ್ಟ ಮಗುವಿರೋದು ಖರೆ. ಅದು



ಡಿ. ಎಸ್. ಗೊರವರ

# ಚವರಿ ಮಾರೋ ದುಗ್ಗಿ ಕತೆ

ಹೆಣ್ಣೋ, ಗಂಡೋ ಇದ್ದಿರಬಹುದು. ಹಾದರಕ್ಕೆ ಹುಟ್ಟಿದ್ದು ಎಂಬೋ ಗುಮಾನಿ ನಮ್ಮ ಕೇರಿಯಲ್ಲಿ ಕಾಳ್ಗಿಚ್ಚಂತೆ ಹಬ್ಬಿದೆ. ಇದು ಸುಳ್ಳಿನ ಕಂತೆ. ಅದ್ಯಾವನದೋ ಕಾಮದ ಹಸಿವೆಗೆ ಹುಟ್ಟಿದ್ದಿರಬಹುದೆಂದು, ದುಗ್ಗಿ ಜೋಪಡಿ ಸಮೀಪದ ಮನೆಯ ಹನುಮಜ್ಜಿಯ ಅಂಬೋಣ.

ದುಗ್ಗಿಯ ವ್ಯಕ್ತಿತ್ವ ಹೀಗೆ ದ್ವಂದ್ವಾತೀತಕ್ಕೆ ಗ್ರಾಸವಾಗಿರೋದರಿಂದ ಅವಳ ದಿನಚರಿಯನ್ನು ನಾನೂ ಸೂಕ್ಷ್ಮಗ್ರಾಹಿಯಾಗಿ ಗಮನಿಸತೊಡಗಿದೆ. ಆಕೆಯನ್ನು ಕುರಿತು ದಿನದಿಂದ ದಿನಕ್ಕೆ ಕುತೂಹಲ ಕೆರಳತೊಡಗಿತು.

* * *

ಮಬ್ಬುಗತ್ತಲು ಬೆಳಕನ್ನು ತನ್ನೊಳಗೆ ಅಪೋಶನ ಮಾಡಿಕೊಳ್ಳತೊಡಗಿತ್ತು. ದುಗ್ಗಿಯು ಜೋಪಡಿಯೊಳಗೆ ಚಂಜಿಯ ಮಬ್ಬು ಕವಿಯಿತು. ಚಿಮಣಿ ಬುಡ್ಡಿಗೆ ದೀಪ ಹೊತ್ತಿಸಿ, ಉರಿಯೋ ದೀಪದ ಬೆಳಕಿನಲ್ಲಿ ಮಗುವನ್ನು ದಿಟ್ಟಿಸಿದಳು. ಅದು ಹೇತು ಅದರಾಗೆ ಬೆರಳಾಡಿಸ ತೊಡಗಿತ್ತು. ದುಗ್ಗಿ ಹೇಲು ಬಳೆದು, ಮಗುವಿನ ಮುಕುಳಿ ತೊಳೆದು, ಒಲೆ ಹೊತ್ತಿಸಿ ಕುಡಿಕೆಯಲ್ಲಿ ಮುಕ್ಕು ಅಕ್ಕಿ ಹಾಕಿ ಕುದಿಸತೊಡಗಿದಳು. ಹಾಗೇ ನಿಗಿ ನಿಗಿ ಉರಿಯೋ ಉರಿಯನ್ನು ದಿಟ್ಟಿಸಿದಳು. ಮಹಡಿ ಮನೆ ಸೌಕಾರ್ತಿ ನೆಪ್ಪಿಗೆ ಬಂದಳು. ಆಕೆ ಚೆಂದನೆ ಚವರಿ ಹೆಣಕೊಂಡು ಬರ ಹೇಳಿದ್ದಳು. ಮಗು ಕಿರಿ ಕಿರಿ ಮಾಡಹತ್ತಿತ್ತು. ಮಗುವಿನ ಬಾಯಿಗೆ ಮೊಲೆ ತುರುಕಿ ಕಟ್ಟಿಗೆ ಒಲೆಯಾಗೆ ತುರುಕಿದಳು.

ಊಟ ಮಾಡಿದ ನಂತರ ಕಾಲ್ಮಡಿದು ಚವರಿ ಹೆಣೆಯಲು ಸಜ್ಜುಗೊಂಡಳು. ಹಾಳೆ ಚೀಲದಾಗೇ ಕೂದಲನ್ನು ಮಡಗಿದ್ದಳು. ಅದರಾಗೆ ತಡಕಾಡಿ ನೋಡಿದರೆ ಕೂದಲೇ ಆಗಿದ್ದವು. ದುಗ್ಗಿ ಪೇಚಿಗಿಟ್ಟುಕೊಂಡಳು. ಹೊಟ್ಟೆ ಹೊರೆಯೋ ಚಿಂತೆ ಕ್ಷಣದಿಂದ ಕ್ಷಣಕ್ಕೆ ಬೇತಾಳಾಗಿ ಕಾಡತೊಡಗಿತು. ಸೌಕಾರ್ತಿಗೆ ಚವರಿ ಹೆಣೆದುಕೊಟ್ಟಿದ್ದರೆ ಎರಡು ಕಾಸು ಹೆಚ್ಚಿಗೆ ಹುಟ್ಟುತಿದಿತ್ತು. ಚಿಂತಾಕ್ರಾಂತಳಾದಳು. ಉರಿಯೋ ದೀಪ ತಿರುಗಿದಂತೆನಿಸಿ, ಕಣ್ಣಾಗೆ ನೀರು ತುಂಬಿ ಕತ್ತಲು ಕವಿದಂಗಾತು. ಕತ್ತರಿಸಿಕೊಳ್ಳುವುದೋ, ಬಿಡುವುದೋ, ಮನಸ್ಸು ದ್ವಂದ್ವ ನೀತಿಯಲ್ಲಿ ಸಿಲುಕಿತು. ಯೋಚಿಸಿದಳು. ಕೂದಲು ಮುಖ್ಯವೋ ? ಕಾಸು ಮುಖ್ಯವೋ ? ಉಗುಳೆಲ್ಲಾ ಒಣಗಿ ನಾಲಗೆ ಅಂಟಂಟಾಗತೊಡಗಿತು. ಚಂಬು ನೀರು ಕುಡಿದು ಸುಧಾರಿಸಿಕೊಂಡು, ಕತ್ತರಿಸಿಕೊಳ್ಳಬೇಕೆಂದು ತನ್ನ ಮನಸ್ಸಿಗೆ ವಿರುದ್ಧವಾಗಿ ನಿರ್ಣಯ ಕೈಗೊಂಡಳು.

ಹೊಟ್ಟೆ ಹಸಿವನ್ನು ತೃಪ್ತಿಪಡಿಸಲು ಪರ್ಯಾಯ ವ್ಯವಸ್ಥೆ ಕಾಸೆಂದು ಮನಗಂಡ ದುಗ್ಗಿ ನಿರ್ವಾಹವಿಲ್ಲದೆ ಕೂದಲು ಕತ್ತರಿಸಿಕೊಳ್ಳಲು ಅಣಿಯಾದಳು. ಜೋಪಡಿಯ ತಡಿಕೆಯಾಗೆ ಸಿಗಿಸಿದ್ದ ಕತ್ತರಿ ತೆಗೆದುಕೊಂಡು ಕೂದಲು ಕತ್ತರಿಸಿಕೊಂಡಳು. ತನ್ನಿಂದ ತಾನೇ ಅವಳ ಕಣ್ಣಿಂದ ಕಣ್ಣೀರು ಧಳ ಧಳ ಹರಿಯಿತು.

ಸವರಾತ್ರಿ ತನಕ ಚವರಿ ಹೆಣೆದು, ದೀಪ ಆರಿಸಿ ಮಗುವನ್ನು ತಬ್ಬಿಕೊಂಡು ಮಲಗಿದಳು.

* * *

ಬೆಳಗಿನ ಸೂರ್ಯನ ಕಿರಣಗಳು ಜೋಪಡಿಯೊಳಗೆ ಮಲಗಿದ್ದ ದುಗ್ಗಿ ಮೈಗೆ ಮುಳ್ಳಿನಂಗೆ ಚುಚ್ಚಿದವು. ಹೊತ್ತೇರಿದೆಯೆಂದು ಆತುರದಿಂದ ಅಬ್ಬರಸ್ಯಾಡಿ ಏಳಲು ಹೋದರೆ ಮೈಯೆಲ್ಲಾ ಹೆಣಭಾರ. ಮೈ ಯಾಕೋ ಬಿಸಿಯಾಗಿ ಜ್ವರ ಬಂದಹಾಗಿತ್ತು. ತೊಡೆಯಲ್ಲಿ ತೇವ ಅನಿಸಿತು. ಎದ್ದು ಸೀರೆ ಅಗಲಿಸಿ ನೋಡಿದರೆ ಮುಟ್ಟಾಗಿದ್ದಳು. ರಕ್ತಸ್ರಾವದಿಂದ ನಡು ನೋವಾಗಿ, ಹೊಕ್ಕುಳದಲ್ಲಿ ಚಿಟಮುಳ್ಳು ಆಡಿಸಿದಂಗಾಗುತ್ತಿತ್ತು.

ಒಲೆಯಾಗೆ ಬೆಂಕಿ ಮಾಡಿ, ಉಗುರು ಬೆಚ್ಚಗೆ ನೀರು ಕಾಯಿಸಿ ತಲೆಗೆ ಹಣಿಸಿಕೊಂಡಳು. ಕತ್ತರಿಸಿದ, ವದ್ದೆಯಾದ ತಲೆಗೂದಲನ್ನು ಒರೆಸುವಾಗ ದುಗ್ಗಿಯ ಎದೆಯಾಗ ಸಂಕಟವಾದಂತಾಗಿ, ಕಣ್ಣಲ್ಲಿ ನೀರಾಡ ತೊಡಗಿತು. ಜ್ವರದ ಬಾಧೆಯಿಂದ ಮೈ ಮತ್ತಷ್ಟು ಸುಡ ಹತ್ತಿತು. ಜೋಪಡಿ ಎದುರಿಗಿನ ತಿಪ್ಪೆಯಲ್ಲಿ ಸತ್ತ ನಾಯಿಯ ಹೊಲಸು ವಾಸನೆ ಸಹಿಸದೆ, ಅನ್ನ ಈಸಿಗಚ್ಚಾಗಿ ತುತ್ತು ಕೂಳು ಗಂಟಲಕ್ಕಿಳಿಯದೆ, ಮಗುವನ್ನು ಕಂಕುಳಲ್ಲಿ ಕೂಡ್ರಿಸಿಕೊಂಡು ನಡೆಯಲೊಲ್ಲದೆ ನಡೆದು ಚವರಿ ಜೋಪಡಿಗೆ ಹತ್ತಿದಂಗಾತು. ಆಕೆ ಕುಳಿತ ನೆಲ ಬಿರುಕು ಬಿಟ್ಟು ನುಂಗತೊಡಗಿದಂತೆ ಭಾಸವಾಯಿತು. ತೂತುಬಿದ್ದ ಗಡಿಗೆಗಳು ಇವಳನ್ನು ಅಣಕಿಸಿ ಕುಣಿಯತೊಡಗಿದಂತೆ ಕಂಡವು. ತಟಾರನೆ ಜೋಪಡಿ ಹೊರಗೆ ಬಂದು ಆಕಾಶ ದಿಟ್ಟಿಸಿದರೆ ನಕ್ಷತ್ರಗಳು ಬಚ್ಚಲಿನ ಹುಳುಗಳಂತೆ ವಿಲವಿಲನೆ ಒದ್ದಾಡುತ್ತಿರುವಂತೆ ಕಂಡವು.

ದುಗ್ಗಿಯ ಹಣೆಯ ಮೇಲೆ ಚಿಂತೆಯ ಗೆರೆ ಮೂಡಿದವು. ಹೊಕ್ಕುಳದಾಳದಲ್ಲಿ ನೋವು ಕಾಣಿಸಿತು. ಮೈಯೆಲ್ಲಾ ಬೆವರು. ಹಾಗೇ ಚಿಂತಿಸಿದಳು. ದಟ್ಟದರಿದ್ರ ಕತ್ತಲೆಯೊಳಗೊಂದು ನಕ್ಷತ್ರ ಮಿನುಗಿದಂತೆ ಯೋಚನೆಯೊಂದು ಬಂತು. ಒತ್ತಾಗಿ, ಕಪ್ಪಾಗಿ ಬೆಳೆದಿರೊ ತನ್ನ ಕೂದಲನ್ನೇ ಕತ್ತರಿಸಿಕೊಂಡರೆ? ತಲೆ ಗರಗರ

ಕೂದಲು ಕೊಡಲು ಸೌಕಾರ್ತಿಯ ಮನೆ ಕಡೆ ಹೊರಟಳು.

ದುಗ್ಗಿ ಸೌಕಾರ್ತಿಯ ಮನೆಗೆ ಬಂದಾಗ, ಆಕೆ ತುಳಸಿ ಕಟ್ಟೆಯ ಪೂಜೆಯಲ್ಲಿ ನಿರತಳಾಗಿದ್ದಳು. ಪೂಜೆ ಮುಗಿದ ನಂತರ ದುಗ್ಗಿಯನ್ನು ಕಾಂಪೌಂಡಿನ ಗೇಟ್ ಬಳಿ ಕೂಡ್ರಿಸಿ, ಚವರಿ ತೆಗೆದುಕೊಂಡು ಒಳಹೋಗಿ, ಕಣ್ಣ ತುಂಬ ವಿಶ್ವ ಸುಂದರಿಯರ ರೂಪವನ್ನೇ ತುಂಬಿಕೊಂಡು, ಮುಖಕ್ಕೆ ಪೌಡರ್, ತುಟಿಗೆ ತುಟಿಗೆಂಪು ಲೇಪಿಸಿ, ಚವರಿ ಕೂದಲು ಧರಿಸಿ, ಹೂವು ಮುಡಿದು ನಿಲುಗನ್ನಡಿಯ ಮುಂದೆ ನಿಂತಾಗ ಆಕೆಗೆ ಪರಮಾಶ್ಚರ್ಯ !

ತುಪ್ಪಳ ಕೂದಲದ ತಾನು ಈಟೊಂದು ಸುಂದರಿ ಅಂಬೋದು ಆಕೆಯ ಕಲ್ಪನಾದಾಗ ಇದ್ದಿಲ್ಲ, ಸೌಕಾರ್ತಿಗೆ

೧೬ನೇ ಪುಟಕ್ಕೆ

# ಭಾರತದಲ್ಲಿ ಇಂಗ್ಲಿಷ್ ಭಾಷೆಯ ಸ್ಥಾನ ಈ ಶತಮಾನದ ಪ್ರಶ್ನೆ

ಕರ್ನಾಟಕದಲ್ಲಿ ಕನ್ನಡಿಗರು ಸ್ವಾಭಿಮಾನವಿಲ್ಲದ ಜನ; ಸರ್ಕಾರದ ಬೇಜವಾಬ್ದಾರಿ ನೀತಿ ಮತ್ತು ಮಂತ್ರಿಗಳ ಆಷಾಢಭೂತಿತನದಿಂದಾಗಿ ಇಂದು ಕನ್ನಡ ಭಾಷೆಯ ಸ್ಥಾನ ಅಭದ್ರ ಸ್ಥಿತಿಯಲ್ಲಿದೆ ಇತ್ಯಾದಿ, ನಮಗೆ ಎಲ್ಲೆಲ್ಲೂ ಕೇಳಿಬರುವ ಆಪಾದನೆಗಳು. ಇದು ನಿಜವೆ ? ಅಥವಾ ಉತ್ಪ್ರೇಕ್ಷೆಯೆ ? ಅಥವಾ ಜಾಗತೀಕರಣಗೊಂಡಿರುವ ಭಾರತದಲ್ಲಿ ನಮ್ಮ ಪ್ರಾದೇಶಿಕ ಭಾಷೆಗಳ – ಕರ್ನಾಟಕದಲ್ಲಿ ಕನ್ನಡದ – ಸೃಜನಶೀಲ ಶಕ್ತಿಯ ಮೇಲೆ, ಸಾಂಸ್ಕೃತಿಕ ಇತಿಹಾಸದ ಮೇಲೆ ನಾವು ನಂಬಿಕೆ ಕಳೆದುಕೊಳ್ಳುತ್ತಿದ್ದೇವೆಯೆ ?

ಎನ್. ಎಸ್. ರಘುನಾಥ್

ಇಂಗ್ಲಿಷ್ ಭಾಷೆ ಒಂದು ಕೊಲೆಗಡುಕ ಭಾಷೆ; ಇದು ತಾನು ಹೊಕ್ಕ ದೇಶದ ಭಾಷೆಗಳನ್ನು ನಾಶಮಾಡುವ ಒಂದು ವಿಧವಾದ ವಿಷ ಅನಿಲವಿದ್ದಂತೆ ಎನ್ನುತ್ತಾರೆ ಕೆಲವು ಸಾಮಾಜಿಕ ಭಾಷಾವಿಜ್ಞಾನಿಗಳು. ಈಗಿನ ಪರಿಸ್ಥಿತಿಯಲ್ಲಿ ಯಾವುದೇ ಭಾಷೆಯನ್ನು ಒಳಗಿನಿಂದಲೇ ವಿಸ್ಫೋಟಗೊಳಿಸ ಬಲ್ಲ ತನ್ನದೇ ಆದ ರಾಜಕೀಯ ಶಕ್ತಿಯನ್ನು ಈಗ ಇಂಗ್ಲಿಷ್ ಭಾಷೆ ಪಡೆದುಕೊಂಡಿದೆ; ಆದರೂ ಈ ಭಾಷೆಗೆ ನಾವು ಈ ದೇಶದಲ್ಲಿ ಸ್ಥಾನ ಕೊಡಲೇಬೇಕು; ಮಕ್ಕಳಿಗೆ ಕಲಿಸಲೇಬೇಕು. ಇದು ನಮ್ಮ ದೇಶದ ಅಧಿಕೃತ ಸಂಪರ್ಕ ಭಾಷೆ. ನಮ್ಮ ಎಲ್ಲ ವಿದ್ಯಾರ್ಥಿಗಳಿಗೆ ಕಾಲೇಜಿಗೆ ಬರುವ ವೇಳೆಗೆ ಸಮರ್ಥವಾಗಿ ಬಳಸುವಷ್ಟು ಇಂಗ್ಲಿಷನ್ನು ಕಲಿಸಲೇಬೇಕು. ಇದು ನಮ್ಮ ಭಾಷಾಪ್ರಪಂಚದಲ್ಲಿ ನಮ್ಮೆದುರು ನಿಂತಿರುವ ವಿಪರ್ಯಾಸ ಅಥವಾ ಜಾಗತೀಕರಣದಿಂದಾಗಿ ಕುಗ್ಗಿರುವ ವಿಶ್ವದ ವಾಣಿಜ್ಯ ಪ್ರಪಂಚದಲ್ಲಿ ಅನಿವಾರ್ಯದಿಂದ ಬೆಳೆಯುತ್ತಿರುವ ಈ ಭಾಷೆ ನಮಗೆ ಸಾಂಸ್ಕೃತಿಕವಾಗಿ ಒಡ್ಡಿರುವ ಸವಾಲೆ ? ಹಿಂದೆಂದೂ ಯಾವ ಭಾಷೆಯೂ ಪಡೆಯದ ರಾಜಕೀಯ ಮತ್ತು ಆರ್ಥಿಕ ಶಕ್ತಿಗಳನ್ನು ಪಡೆದುಕೊಂಡು ಭಾರತದ ಏಕೈಕ ಅಕೆಡೆಮಿಕ್ ಭಾಷೆಯಾಗಿ ಬೆಳೆಯುತ್ತಿರುವ ಜೊತೆಯಲ್ಲೆ ನಮಗೆ ಎಲ್ಲ ರೀತಿಯಲ್ಲೂ ಸವಾಲಾಗುತ್ತಿದೆ. ಈ ಭಾಷೆಯನ್ನು ಮಕ್ಕಳಿಗೆ ಕಲಿಸುವಲ್ಲಿ ಮತ್ತು ಸಾಂಸ್ಕೃತಿಕವಾಗಿ ನಮ್ಮ ಸಮಾಜದಲ್ಲಿ ಇದನ್ನು ನಿಭಾಯಿಸುವಲ್ಲಿ – ಈ ಎರಡೂ ಕ್ಷೇತ್ರದಲ್ಲೂ ನಮಗೆ ಇದು ಸವಾಲಾಗುತ್ತಿದೆ. ಇದನ್ನು ನಾವು ಎದುರಿಸುವಲ್ಲೆ ನಮ್ಮ ಸಂಸ್ಕೃತಿ ಮತ್ತು ಭಾಷೆಗಳ ಅಳಿವು ಉಳಿವು ಇರುವುದು.

ಇಂಗ್ಲಿಷನ್ನು ವಿಶ್ವದ ಏಕೈಕ ಭಾಷೆಯನ್ನಾಗಿ ಬೆಳೆಸುವ ಹುನ್ನಾರ ಪಶ್ಚಿಮ ರಾಷ್ಟ್ರಗಳಿಂದಲೇ ನಡೆದಿದೆ ಎಂದು ಬ್ರಜ್ ಬಿಹಾರಿ ಖಚ್ರುವಿನಂತಹ ಹಲವಾರು ಭಾರತೀಯ ಭಾಷಾವಿಜ್ಞಾನಿಗಳು ಅನುಮಾನ ಪಟ್ಟಿದ್ದಾರೆ. ಆದರೆ ಪತ್ರಿಕೆಗಳಲ್ಲಿ ಬರೆಯುವ ಕೆಲವು ಇಂಗ್ಲಿಷ್ ವ್ಯಾಮೋಹಕರು ಇಂಗ್ಲಿಷನ್ನು ಅಂತರರಾಷ್ಟ್ರೀಯ ಭಾಷೆಯನ್ನಾಗಿ ಎಲ್ಲರೂ ಒಪ್ಪಿಕೊಂಡಿದ್ದಾರೆ ಎಂದೇ ಬರೆಯುತ್ತಾರೆ. ಯಾರು ಆ ರೀತಿ ಒಪ್ಪಿಕೊಂಡಿರುವವರು ಎಂದು ಅವರು ಸ್ಪಷ್ಟವಾಗಿ ಹೇಳುವುದಿಲ್ಲ. ಹಲವಾರು ರಾಜ್ಯಭಾಷೆಗಳು ಈಗ ತಮ್ಮ ರಾಜ್ಯದಲ್ಲೆ ಅವನ್ನು ಮಾತನಾಡುತ್ತಿರುವ ನಮ್ಮ ಜನಗಳಿಂದಲೇ ತಿರಸ್ಕಾರಕ್ಕೆ ಒಳಗಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಬಹುಶಃ ಭಾರತದ ಎಲ್ಲ ಭಾಷೆಗಳಿಗಿಂತ ಹೆಚ್ಚು, ೭ ಜ್ಞಾನಪೀಠಗಳನ್ನು ಗಳಿಸಿರುವಂಥ ಮತ್ತು ಇನ್ನು ೨-೩ ಗಳಿಸಲು ಶಕ್ತಿ ಇರುವಂಥ ಅಪಾರ ಸಾಹಿತ್ಯವನ್ನು ಸೃಷ್ಟಿಸಿರುವ ಕನ್ನಡ ಭಾಷೆಗೇ ಈ ದುರ್ಗತಿ ಬರುವ ಕುರುಹುಗಳು ಕಾಣುತ್ತಿವೆ. ಇದು ನಮ್ಮೆಲ್ಲರನ್ನೂ ಕಾಡುತ್ತಿರುವ ಸಮಸ್ಯೆಯಾಗಿದೆ. ಕನ್ನಡಿಗರ ಅಭಿಮಾನ ಹೀನತೆಯೂ ಇದಕ್ಕೆ ಕಾರಣ ಎನ್ನುವ ಆಪಾದನೆ ಎಲ್ಲೆಲ್ಲೂ ಕೇಳಿಬರುತ್ತಿದೆ. ಇಂತಹ ಇಂಗ್ಲಿಷ್ ಭಾಷೆಯನ್ನು ನಿಭಾಯಿಸುವುದು ಹೇಗೆ ? ನಿಭಾಯಿಸುವುದು ಎಂದರೆ ಈ ಭಾಷೆಯನ್ನು ಯಾವ ಕಾರಣಕ್ಕೂ, ಯಾವುದೇ ರೀತಿಯಲ್ಲೂ ನಾವು ಮಕ್ಕಳ ವಿದ್ಯಾಭ್ಯಾಸದಿಂದ ಹೊರಗಿಡಲು ಸಾಧ್ಯವಿಲ್ಲ. ಇದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಇದನ್ನು ಯಾವ ಸ್ಥಾನದಲ್ಲಿಟ್ಟು, ಯಾವ ಹಂತದಿಂದ ಮಕ್ಕಳಿಗೆ ಕಲಿಸಬೇಕು, ಯಾವ ಮಟ್ಟದಲ್ಲಿಟ್ಟರೆ ರಾಜ್ಯ ಭಾಷೆಗಳ ಅಳಿವಿಗೆ ಇದು ಕಾರಣವಾಗದಂತೆ ತಡೆಯಬಹುದು ಎಂಬುದು ನಮ್ಮ ಬಹು ಮುಖ್ಯ ಗಮನವಾಗಬೇಕು.

ಕರ್ನಾಟಕದಲ್ಲಿ ಕನ್ನಡಿಗರು ಸ್ವಾಭಿಮಾನವಿಲ್ಲದ ಜನ; ಸರ್ಕಾರದ ಬೇಜವಾಬ್ದಾರಿ ನೀತಿ ಮತ್ತು ಮಂತ್ರಿಗಳ ಆಷಾಢಭೂತಿತನದಿಂದಾಗಿ ಇಂದು ಕನ್ನಡ ಭಾಷೆಯ ಸ್ಥಾನ ಅಭದ್ರ ಸ್ಥಿತಿಯಲ್ಲಿದೆ ಇತ್ಯಾದಿ. ನಮಗೆ ಎಲ್ಲೆಲ್ಲೂ ಕೇಳಿಬರುವ ಆಪಾದನೆಗಳು. ಇದು ನಿಜವೆ? ಅಥವಾ ಉತ್ಪ್ರೇಕ್ಷೆಯೆ? ಅಥವಾ ಜಾಗತೀಕರಣಗೊಂಡಿರುವ ಭಾರತದಲ್ಲಿ ನಮ್ಮ ಪ್ರಾದೇಶಿಕ ಭಾಷೆಗಳ – ಕರ್ನಾಟಕದಲ್ಲಿ ಕನ್ನಡದ – ಸೃಜನಶೀಲ ಶಕ್ತಿಯ ಮೇಲೆ, ಸಾಂಸ್ಕೃತಿಕ ಇತಿಹಾಸದ ಮೇಲೆ, ನಾವು ನಂಬಿಕೆ ಕಳೆದುಕೊಳ್ಳುತ್ತಿದ್ದೇವೆಯೆ ? ಈಗಿನ ನಮ್ಮ ಧೋರಣೆ ಅದರಿಂದ ಉದ್ಭವವಾಗಿರುವ ಭಯವೆ ? ಇವುಗಳ ಬಗ್ಗೆ ಎಲ್ಲ ಪ್ರಜ್ಞಾವಂತ ಭಾರತೀಯನೂ ಗಂಭೀರವಾಗಿ ಚಿಂತಿಸಬೇಕಾದ ವಿಷಯ. ಮಕ್ವೇರಿ ವಿಶ್ವವಿದ್ಯಾಲಯದ ಪ್ರೊಫೆಸರ್ ಕ್ರಿಶ್ಚಿಯನ್ ಮೆತಿಜ಼ನ್ ಅವರ ಅಭಿಪ್ರಾಯದಲ್ಲಿ:

> ''ಮಾಹಿತಿ ತಂತ್ರಜ್ಞಾನದಲ್ಲಿ ನಡೆದಿರುವ ಕ್ರಾಂತಿಯಲ್ಲಿ ಇಂಗ್ಲಿಷ್ ಪ್ರಮುಖ ಸಂವಹನದ ವಾಹನವಾಗಿ ಬಳಕೆಯಾಗುತ್ತಿರುವುದರಿಂದ ಮಾತೃ ಭಾಷೆಗಳು ತಮ್ಮ ಅನನ್ಯತೆಯನ್ನೇ ಕಳೆದುಕೊಳ್ಳುವ ಅಪಾಯದಲ್ಲಿವೆ. ಭಾರತದಂತಹ ಬಹುಭಾಷಾ ರಾಷ್ಟ್ರದಲ್ಲಿ ಇಂಥ ಅಪಾಯ ಇನ್ನೂ ಹೆಚ್ಚಾಗಿದೆ.
> ಪ್ರಪಂಚದಲ್ಲಿ ಅತಿ ಹೆಚ್ಚು ಬಳಕೆಯಾಗುತ್ತಿರುವ ಮತ್ತು ಹೆಚ್ಚು ಪ್ರದೇಶಗಳಲ್ಲಿ ಅರ್ಥಮಾಡಿ ಕೊಳ್ಳಲ್ಪಡುವ ಭಾಷೆಯಾಗಿರುವ ಇಂಗ್ಲಿಷ್‌ಅನ್ನು ಕಲಿಯುವುದು ಒಳ್ಳೆಯದು. ಆದರೆ ಸ್ಥಳೀಯ ಭಾಷೆಗಳಿಗೆ ಮತ್ತು ಮಾತೃಭಾಷೆಗಳಿಗೆ ಹೆಚ್ಚು ಮಹತ್ವವನ್ನು ಕೊಡಬೇಕು.''

ಭಾರತೀಯರು ತಮ್ಮ ದೇಶದಲ್ಲಿ ತಮ್ಮ ಭಾಷೆಗಳ ಸಾಂಸ್ಕೃತಿಕ ಮಹತ್ವವನ್ನು ಅರಿತಿರುವುದಕ್ಕಿಂತ ಹೊರ ದೇಶದವರಿಗೇ ಹೆಚ್ಚು ತಿಳಿದಂತೆ ಕಾಣುತ್ತದೆ. ಇಲ್ಲಿ ಹೊರ ದೇಶದವರು ಮತ್ತು ನಮ್ಮ ದೇಶದವರು ಎನ್ನುವುದಕ್ಕಿಂತ ಒಂದು ಸಂಸ್ಕೃತಿಯಲ್ಲಿ ಭಾಷೆಗಳ ಮಹತ್ವವೇನು ಎನ್ನುವುದನ್ನು ನಾವು ಅರಿಯ ಬೇಕಾಗಿದೆ. ಮೂರನೇ ಜಗತ್ತಿನ ಬಹುಭಾಷಾ ರಾಷ್ಟ್ರದಲ್ಲಿ ವಿಶ್ವದ ವಾಣಿಜ್ಯ ಮಾಧ್ಯಮ, ಆರ್ಥಿಕ ವಹಿವಾಟುಗಳ ಮಾಧ್ಯಮ, ಸಂಪರ್ಕ ಮಾಧ್ಯಮ, ಮಾಹಿತಿ ತಂತ್ರಜ್ಞಾನದ ಮಾಧ್ಯಮ ಮತ್ತು ಜ್ಞಾನ ಮಾಧ್ಯಮವಾಗಿ ವ್ಯಾಪಕವಾಗಿ ಬಳಕೆಯಾಗುತ್ತಿರುವ ಒಂದು ಭಾಷೆಯನ್ನು ನಮ್ಮ ಸಾಂಸ್ಕೃತಿಕ ಬದುಕಿನಲ್ಲಿ ನಮ್ಮನ್ನು ಆಳುವ ಶಕ್ತಿಯಾಗಿ ಪ್ರವೇಶಮಾಡದಂತೆ ಹೇಗೆ ನಿಯಂತ್ರಿಸಬೇಕು ಎನ್ನುವುದೇ ನಮ್ಮ ಮುಂದಿ

ಚಿಂತನೆ. ಈ ಭಾಷೆಯನ್ನು ಬಳಸದೆ ಇರುವುದು, ಕಲಿಯದೆ ಇರುವುದು ಸಾಧ್ಯವಿಲ್ಲ ಎನ್ನುವುದು ಈಗ ನಮ್ಮೆಲ್ಲರಿಗೂ ಮನದಟ್ಟಾಗಿರುವ ವಿಷಯ. ಆದರೆ ಈ ಭಾಷೆಯನ್ನು ನಮ್ಮೆಲ್ಲ ಭಾಷೆಗಳ ಜೊತೆ ನಿಭಾಯಿಸುವುದು ಹೇಗೆ ಎನ್ನುವುದು ಈ ಶತಮಾನದಲ್ಲಿ ನಾವು ಎದುರಿಸಬೇಕಾಗಿರುವ ಬಹು ಮುಖ್ಯವಾದ ಪ್ರಶ್ನೆ ಎಂದೇ ನಾನು ಭಾವಿಸುತ್ತೇನೆ. ಇಲ್ಲಿ ನಾವು ಎಡವಿದರೆ ಭವಿಷ್ಯದಲ್ಲಿ ಪಶ್ಚಾತ್ತಾಪ ಪಡಬೇಕಾಗಬಹುದು. ಆದರೆ ಈ ಭಾಷೆ ಶಿಕ್ಷಣ ಮಾಧ್ಯಮವಾಗದಂತೆ ಮತ್ತು ನಮ್ಮ ಸಾಂಸ್ಕೃತಿಕ ಬದುಕಿನಲ್ಲಿ ಪ್ರವೇಶಮಾಡದೆ ಇರುವಂತೆ ನೋಡಿಕೊಳ್ಳುವುದು ಹೇಗೆ ಎನ್ನುವುದು ನಮ್ಮ ಚರ್ಚೆಯ ವಿಷಯವಾಗಬೇಕು. ಈ ಹಿನ್ನೆಲೆಯಲ್ಲಿ ಈ ಚರ್ಚೆಯನ್ನು ಬೆಳೆಸಲು ಪ್ರಯತ್ನಿಸಿದ್ದೇನೆ.

ಇಂಗ್ಲಿಷ್ ಭಾಷೆಯ ವ್ಯಾಪಕ ಬಳಕೆಯಿಂದಾಗಿ ನಮ್ಮ ಪ್ರಾದೇಶಿಕ ಭಾಷೆಗಳಿಗೆ ಪ್ರಾಮುಖ್ಯತೆ ಕಡಿಮೆ ಆಗಿರುವುದನ್ನು, ಆಗುತ್ತಿರುವುದನ್ನು ನಾವು ಗಮನಿಸುತ್ತಿದ್ದೇವೆ. ಈ ಭಾಷೆಯ ಪ್ರಾಬಲ್ಯದಿಂದಾಗಿ ಭಾರತದಲ್ಲಿ ಕೆಲವು ಪ್ರಾದೇಶಿಕ ಭಾಷೆಗಳು (ಅಂಡಮಾನೀಸ್, ಅಗಾರಿಯ) ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿವೆ ಎಂದು ಕೆಲವು ಪ್ರಮುಖ ಭಾಷಾವಿಜ್ಞಾನಿಗಳು ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಇದು ಆಗುವಂತಹದ್ದೆ. ಚರಿತ್ರೆಯಲ್ಲಿ ೫ರಿಂದ ೧೨ನೇ ಶತಮಾನದವರೆಗೆ ಇಂಗ್ಲಿಷ್ ಭಾಷೆಗೆ ಇಂತಹದ್ದೇ ಪರಿಸ್ಥಿತಿ ಒದಗಿಬಂದಿತ್ತು ಎನ್ನುವುದನ್ನು ನೆನೆಸಿಕೊಳ್ಳಬಹುದು. ಕ್ರಿ.ಪೂ.೪೩ರಲ್ಲಿ ರೋಮನ್ ಜನಾಂಗ ಇಂಗ್ಲೆಂಡನ್ನು ಗೆದ್ದು ಅಲ್ಲೆ ನೆಲಸಿದ್ದರಿಂದ ಲ್ಯಾಟಿನ್ ಇಂಗ್ಲೆಂಡಿನವರ ಭಾಷೆಯಾಯಿತು. ಇದು ಮುಖ್ಯವಾಗಿ ಬುದ್ಧಿಜೀವಿಗಳ ಭಾಷೆಯಾಗಿ ಸ್ಥಾಪಿತವಾಗಿತ್ತು. ಈಗ 'ಇಂಗ್ಲಿಷ್' ಎಂದು ಕರೆಯಲಾಗುತ್ತಿರುವ ಭಾಷೆ ಆಗ ಇನ್ನೂ ಸರಿಯಾಗಿ ರೂಪುಗೊಂಡಿರಲಿಲ್ಲ. ೧೧ನೇ ಶತಮಾನದಲ್ಲಿ (ಕ್ರಿ.ಶ.೧೦೬೬) ನಾರ್ಮನ್ನರು ಇಂಗ್ಲೆಂಡನ್ನು ಗೆದ್ದಿದ್ದರಿಂದ ೧೩ನೇ ಶತಮಾನದ ಆರಂಭದವರೆಗೂ ಫ್ರೆಂಚ್ ಭಾಷೆ ಬುದ್ಧಿಜೀವಿಗಳ ಭಾಷೆಯಾಗಿ ಸ್ಥಾಪಿತವಾಯಿತು. ಇನ್ನೂ ಒಂದು ಭಾಷೆಯಾಗಿ ರೂಪುಗೊಳ್ಳದ ಇಂಗ್ಲಿಷ್ ಸಾಧಾರಣ ಮನುಷ್ಯನ ಭಾಷೆಯಾಗಿ ಉಳಿಯಿತು.

ಅಲ್ಲಿನ ಬುದ್ಧಿಜೀವಿಗಳು ಇಂಗ್ಲಿಷ್ ಭಾಷೆಯನ್ನು ಬಳಸುವುದು ತಮ್ಮ ಘನತೆ ಗೌರವಗಳಿಗೆ ಕಡಿಮೆ ಎಂದೆ ಭಾವಿಸುತ್ತಿದ್ದರು. ಆಲಿವರ್ ಕ್ರಾಂವೆಲ್ಲನ ಲ್ಯಾಟಿನ್ ಕಾರ್ಯದರ್ಶಿಯಾಗಿದ್ದ ಕವಿ ಮಿಲ್ಟನ್ ಇಂಗ್ಲಿಷ್‌ನಲ್ಲಿ ಬರೆಯಲು ನಿರಾಕರಿಸುತ್ತಿದ್ದುದು ಎಲ್ಲರಿಗೂ ಗೊತ್ತಿರುವ ವಿಷಯ. ೧೫೮೮ರ ಯುದ್ಧದಲ್ಲಿ ಸ್ಪ್ಯಾನಿಷ್ ಆರ್ಮೆಡ ವಿರುದ್ಧ ಯುದ್ಧದಲ್ಲಿ ಇಂಗ್ಲೆಂಡಿನ ಜನಕ್ಕೆ ಸಿಕ್ಕ ಗೆಲುವು ಅವರ ರಾಜಕೀಯ ಚರಿತ್ರೆಯ ಜೊತೆಗೆ ಭಾಷಾ ಚರಿತ್ರೆಯನ್ನು ಸಂಪೂರ್ಣ ಬದಲಿಸಿತು.

ಛಾಸರ್, ಸ್ಪೆನ್ಸರ್‌ನಂತಹ ಉತ್ತಮ ಕವಿಗಳು ಮತ್ತು ಶೇಕ್ಸ್‌ಪಿಯರ್‌ನಂತಹ ಮಹಾನ್ ನಾಟಕಕಾರ ಇಂಗ್ಲಿಷ್‌ನಲ್ಲಿ ಸಾಹಿತ್ಯ ರಚಿಸಿದ್ದರಿಂದ ಆ ಭಾಷೆ ಒಂದು ಪ್ರಬುದ್ಧ ಭಾಷೆಯಾಗಿ ಬೆಳೆಯಿತು. ಮುಂದೆ ವಿಜ್ಞಾನಿಗಳು, ತತ್ವಶಾಸ್ತ್ರಜ್ಞರು, ಚಿಂತಕರು ಮತ್ತು ಎಲ್ಲದಕ್ಕಿಂತ ಹೆಚ್ಚಾಗಿ ಶ್ರೇಷ್ಠ ಸಾಹಿತಿಗಳು ಈ ಭಾಷೆಯಲ್ಲಿ ಬರೆದುದರಿಂದ ಈ ಭಾಷೆ ಎಲ್ಲ ಮಟ್ಟದಲ್ಲೂ ಬೆಳೆಯಿತು. ಬುದ್ಧಿಜೀವಿಗಳು ಬೆಳೆಸಿದರು. ಆನಂತರ ಇಂಗ್ಲೆಂಡಿನ ಸಾಮ್ರಾಜ್ಯ ವಿಸ್ತರಣೆಯಿಂದಾಗಿ ಅದು ಪ್ರಮುಖ ರಾಜಕೀಯ ಭಾಷೆಯಾಗಿ ಬೆಳೆಯಿತು; ಹಾಗೆ ಸಾಧಾರಣ ಮನುಷ್ಯನ ಅನಿವಾರ್ಯ ಭಾಷೆಯಾಗಿ ಪರಿವರ್ತನೆಯಾಯಿತು. ಸಂಸ್ಕೃತ 'ದೇವ ಭಾಷೆ' ಎನ್ನುವ ಸುಳ್ಳನ್ನು ಹುಟ್ಟಿಸಿ ಜನಸಾಮಾನ್ಯರಿಂದ ದೂರವಿಟ್ಟ ಕಾರಣ ಕ್ರಿ.ಪೂ.೬ನೇ ಶತಮಾನದಲ್ಲಿ ಜೈನರು ಪ್ರಾಕೃತ ಮತ್ತು ಅರ್ಧಮಾಗಧಿ ಬಳಸಿ ಸಾಹಿತ್ಯ ರಚಿಸಿದರು; ಬೌದ್ಧಧರ್ಮೀಯರು ಪಾಲಿ ಭಾಷೆಯಲ್ಲಿ ಸಾಹಿತ್ಯ ರಚಿಸಿದರು. ಒಂದೇ ಒಂದು ಜನಾಂಗಕ್ಕೆ ಮೀಸಲಾಗಿದ್ದ 'ದೇವಭಾಷೆ' ಈಗ ಅವರಿಂದಲೂ ಜಾರಿ ಗ್ರಾಂಥಿಕ ಭಾಷೆಯಾಗಿದೆ. 'ದೇವಭಾಷೆ' ಎಂದರೇನು ? ಯಾವ ದೇವ ಯಾವ ಕಾಲದಲ್ಲಿ ಸಂಸ್ಕೃತವನ್ನು ಒಂದು ಜಾತಿಯವರು ಕಲಿಯಬೇಕು, ಉಳಿದವರು ಇದನ್ನು ಕಲಿಯಬಾರದು ಎಂದು ಹೇಳಿದ್ದಾನೆ ? ಒಂದು ಜಾತಿಯವರು ಬಿಟ್ಟು ಉಳಿದವರು ಇದನ್ನು ಕಲಿತರೆ ಅದು ಮೈಲಿಗೆಯಾಗುತ್ತದೆ ಎನ್ನುವುದು ಅವೈಜ್ಞಾನಿಕ ಚಿಂತನೆ. ಇಂತಹ ವಿವೇಚನೆ ನಮಗೆ ವಿಶ್ವದ ಭಾಷಾವಿಜ್ಞಾನದ ಚರಿತ್ರೆಯಲ್ಲೆಲ್ಲೂ ಸಿಗುವುದಿಲ್ಲ. ಇದು ಭಾಷಾವಿಜ್ಞಾನದಲ್ಲೆ ಅತ್ಯಂತ ಹಾಸ್ಯಾಸ್ಪದವಾದ ಮತ್ತು ಜನವಿರೋಧಿ ನಿಲುವು. ಜನಸಾಮಾನ್ಯರು ಬಳಸದ ಭಾಷೆ ಯಾವುದೇ ಸಮಾಜದಲ್ಲಿ ಬದುಕುವುದು ಕಷ್ಟ ಎನ್ನುವುದಕ್ಕೆ ಸಂಸ್ಕೃತದ ಈಗಿನ ಸ್ಥಿತಿ ಒಳ್ಳೆಯ ಉದಾಹರಣೆ. ಆದರೂ ಸಂಸ್ಕೃತಕ್ಕೇ ಇರದಿದ್ದ ಒಂದು ಅಂತರರಾಷ್ಟ್ರೀಯ ಶಕ್ತಿಯನ್ನು ಈಗ ಇಂಗ್ಲಿಷ್ ಗಳಿಸಿಕೊಂಡಿದೆ. ಸಂಸ್ಕೃತ ಕಲಿಯಲು ಅವಕಾಶವಿಲ್ಲದ ಜನ ಇಂಗ್ಲಿಷ್ ಕಲಿತು ಸಮಾಜದಲ್ಲಿ ಮೇಲೆ ಬಂದರು. ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಉನ್ನತ ವ್ಯಾಸಂಗ ಇದಕ್ಕೆ ಬಹಳ ಒಳ್ಳೆಯ ಉದಾಹರಣೆ. ಈಗ ಜನಸಾಮಾನ್ಯರಿಗೂ ಇದರ ಅವಶ್ಯಕತೆ ಇದೆ. ಈ ಸಂದರ್ಭವೇ ನಮಗೆ ಆತಂಕಕಾರಿಯಾಗುವಷ್ಟು ಶಕ್ತಿ ಪಡೆದಿದೆ.

ಒಂದು ಭಾಷೆ ಮತ್ತೊಂದು ದೇಶದಲ್ಲಿ ಶತಮಾನಗಳ ಕಾಲ ಉಳಿದಾಗ, ಅದು ರಾಜಕೀಯ ಶಕ್ತಿ ಪಡೆದುಕೊಳ್ಳುತ್ತದೆ. ಇಂತಹ ಭಾಷೆ ಪ್ರಾದೇಶಿಕ ಭಾಷೆಗಳಿಗೆ ಸ್ವಾಭಾವಿಕವಾಗಿ ಕಂಟಕಪ್ರಾಯವಾಗುತ್ತದೆ. ಇದು ಜೀವಂತ ಭಾಷೆಗಳಿಗಿರುವ ಶಕ್ತಿ. ಇಲ್ಲಿನೊಯ ವಿಶ್ವವಿದ್ಯಾಲಯದಲ್ಲಿ ಭಾಷಾವಿಜ್ಞಾನಿ (ಸೋಸಿಯೋ ಲಿಂಗ್ವಿಸ್ಟ್) ಆಗಿ ಈಗ ಭಾಷಾವಿಜ್ಞಾನದ ವಲಯಗಳಲ್ಲಿ ಬಹಳ ಪ್ರಸಿದ್ಧಿ ಪಡೆದಿರುವ ಬ್ರಜ್ ಬಿಹಾರಿ ಖಚ್ರು ಅವರು ಒಂದು ಹೆಜ್ಜೆ ಮುಂದಿಟ್ಟು ಹೀಗೆ ಹೇಳುತ್ತಾರೆ :

"ಇಂಗ್ಲಿಷ್ ಮಾತನಾಡುವ ದೇಶಗಳಲ್ಲಿ ಇಂಗ್ಲಿಷ್ ಸಂಪೂರ್ಣ ಪ್ರಾಧಾನ್ಯತೆಯನ್ನು ಸಾಧಿಸಿದೆ ಮತ್ತು ಈಗಾಗಲೇ ದಾಖಲಾಗಿರುವಂತೆ ಇದು ಬೇರೆ ಬೇರೆ ಭಾಷೆಗಳನ್ನು ಶೇಕಡ ೯೦ರಷ್ಟು ನಾಶಗೊಳಿಸುವಷ್ಟು ಪ್ರಾಬಲ್ಯವನ್ನು ಸಾಧಿಸುತ್ತ ಮುಂದುವರೆಯುತ್ತಿದೆ. ಇದು ಸಾಮೂಹಿಕ ಭಾಷಾಹನನ.. ಇದು ಅಂತರರಾಷ್ಟ್ರೀಯ ಮಟ್ಟದಲ್ಲಿ ವ್ಯವಸ್ಥಿತವಾಗಿ, ಉದ್ದೇಶಪೂರಿತವಾಗಿ ಪೂರ್ವ ಯೋಜನೆಯಂತೆ ನಡೆಯುತ್ತಿರುವ ಕೆಲಸ. ಇಂದು ಸಣ್ಣ ಭಾಷೆಗಳಿಗಾಗಿರುವುದು ನಾಳೆ ಪ್ರಮುಖ ಭಾಷೆಗಳಿಗಾಗಬಹುದು. ಇಂಗ್ಲಿಷ್ ಒಂದು ಕೊಲೆಗಡುಕ ಭಾಷೆ.

ಇದೊಂದು ಸಾಂಸ್ಕೃತಿಕ ನರಗಳನ್ನು ಕೊಲ್ಲುವ ಅನಿಲ ವಿದ್ದಂತೆ. ವಿದ್ಯಾಕ್ಷೇತ್ರದಲ್ಲಿ ನಮ್ಮ ಭಾಷಾ ಕಾರ್ಯಕ್ರಮ ಈ ಸಮಸ್ಯೆಯನ್ನು ಬಗೆಹರಿಸುವಲ್ಲಿ ಹೆಚ್ಚೇನೂ ಸಹಾಯ ಮಾಡಿಲ್ಲ. ಈ ಪ್ರಮಾಣದಲ್ಲಿ ಭಾಷಾಹನನ ಮುಂದು ವರಿದರೆ ಮುಂದಿನ ಶತಮಾನದಲ್ಲಿ ಶೇಕಡ ೯೦ರಷ್ಟು ಮಾನವ ಜನಾಂಗದ ಭಾಷೆಗಳು ಅವನತಿ ಹೊಂದುತ್ತವೆ ಅಥವಾ ಮರಣ ಹೊಂದುತ್ತವೆ. ಭಾಷಾ ಪ್ರಪಂಚದಲ್ಲಿ ಈ ರೀತಿಯ ಭಾಷೆಗಳ ವಿನಾಶವನ್ನು ತಪ್ಪಿಸಲು ಅಥವಾ ಅದನ್ನು ಎದುರಿಸಲು ಭಾಷಾವಿಜ್ಞಾನಿಗಳು ಏನು ಮಾಡುತ್ತಿದ್ದಾರೆ ?'' ಎಂದು ಪ್ರಶ್ನಿಸುವ ಮತ್ತೊಬ್ಬ ಭಾಷಾ ವಿಜ್ಞಾನಿ ಕ್ರೌಸ್‌ನನ್ನು ಉಲ್ಲೇಖಿಸುತ್ತಾರೆ. ''ಸಾಂಸ್ಕೃತಿಕ ಮತ್ತು ಭಾಷಾ ವೈವಿಧ್ಯತೆ ಉಳಿಯಬೇಕಾದರೆ ಭಾಷೆ ಗಳನ್ನು ರಕ್ಷಿಸುವುದು ಅತ್ಯವಶ್ಯಕ'' ಎನ್ನುವುದು ಕ್ರೌಸ್‌ನ ಮತ್ತೊಂದು ಅಭಿಪ್ರಾಯ.

೧೨ನೇ ಶತಮಾನದವರೆಗೂ ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಭಾಷೆಗಿದ್ದ ಹೀನಾಯ ಸ್ಥಿತಿ ಈಗ ನಮ್ಮ ದೇಶದ ಪ್ರಾದೇಶಿಕ ಭಾಷೆಗಳಿಗೆ ಒದಗಿಬಂದಿದೆ. ಇಂಗ್ಲಿಷಿನಲ್ಲಿ ಶೇಕ್ಸ್‌ಪಿಯರ್ ಬರೆದಂತೆ ಕನ್ನಡದಲ್ಲಿ ಪಂಪನಿಂದ, ವಚನಸಾಹಿತ್ಯ ಮತ್ತು ಕುಮಾರವ್ಯಾಸ ಮೂಲಕ ಏಳು ಜ್ಞಾನಪೀಠಗಳ ಪ್ರಶಸ್ತಿ, ಎರಡು ಕಬೀರ ಸಮ್ಮಾನ್ ಪ್ರಶಸ್ತಿ ಪಡೆದ ಅರ್ಹತೆ ಕನ್ನಡಕ್ಕಿದೆ. ಶಿವರಾಮ ಕಾರಂತ, ಕುವೆಂಪು, ದ.ರಾ. ಬೇಂದ್ರೆ ಮತ್ತು ಗೋಪಾಲಕೃಷ್ಣ ಅಡಿಗರಂತಹ ಸಾಹಿತಿಗಳು ಕನ್ನಡದಲ್ಲಿ ಆಗಿದ್ದಾರೆ. ದೆಹಲಿ, ಕಲ್ಕತ್ತಾ ಮತ್ತು ಗೌಹಾಟಿಯಲ್ಲಿ ನನ್ನ ಹಿಂದಿ, ಬೆಂಗಾಲಿ, ಅಸ್ಸಾಮೀಸ್ ಸಾಹಿತ್ಯ ಸ್ನೇಹಿತರು ನಿಮ್ಮಲ್ಲಿ ಅದ್ಭುತ ಸಾಹಿತ್ಯವಿದೆ ಎಂದು ನೇರವಾಗೇ ಹೇಳುತ್ತಾರೆ. ಒರಿಯ ಜ್ಞಾನಪೀಠ ಪ್ರಶಸ್ತಿ ವಿಜೇತ ಗೋಪಿನಾಥ ಮಹಂತಿಯವರು ನಿಮ್ಮಲ್ಲಿ ಕುವೆಂಪು, ಕಾರಂತ, ಬೇಂದ್ರೆ ಅಂತಹ ಮಹಾನ್ ಬರಹಗಾರರಿದ್ದಾರೆ ಎಂದು ೧೯೭೮ ರಲ್ಲಿಯೆ ಭುವನೇಶ್ವರದಲ್ಲಿ ಒಂದು ಸಂಭಾಷಣೆಯಲ್ಲಿ ನನ್ನೊಡನೆ ಹೇಳಿದ್ದರು. ಇದರ ಜೊತೆಗೆ ಅನಂತ ಮೂರ್ತಿ, ಲಂಕೇಶ್, ಕಾರ್ನಾಡ್, ಕಂಬಾರ, ತೇಜಸ್ವಿ, ಚಂಪಾ, ಚಿತ್ತಾಲರು, ಮಹದೇವ ಹೀಗೆ ಹಲವಾರು ಉನ್ನತ ಮಟ್ಟದ ಸೃಜನಶೀಲ ಬರಹಗಾರರಿದ್ದಾರೆ. ಆದರೆ ಅಂತಹ ಸಾಹಿತ್ಯವನ್ನು ರಚಿಸಿದ ನಮ್ಮ ಭಾಷೆಗೆ ನಮ್ಮಲ್ಲಿ ಗೌರವವಿಲ್ಲದಂತಾಗಿದೆ. ನಮ್ಮನ್ನು ಒಟ್ಟುಗೂಡಿಸಲು ಸಾಧ್ಯವಾಗದಂತೆ ಈ ಬರಹಗಾರರಿಗೆಲ್ಲ ಒಂದೊಂದು ಜಾತಿಗಳಿವೆ. ಈ ಜಾತಿ ವಿಭಜನೆ ಸಾಂಸ್ಕೃತಿಕವಾಗಿ ರಾಮ ಜನ್ಮಭೂಮಿ ಅಥವಾ ವೀರಪ್ಪನಿಗಿಂತಲೂ ಹೆಚ್ಚು ಅಪಾಯಕಾರಿಯಾದ ಪರಿಸ್ಥಿತಿ.

ವಸಾಹತು ರಾಷ್ಟ್ರವಾಗಿದ್ದ ನಮ್ಮ ದೇಶ ಇಂಗ್ಲಿಷರ ಆಳ್ವಿಕೆಯಲ್ಲಿದ್ದುದರಿಂದ ಅವರ ಭಾಷೆ ನಮ್ಮಲ್ಲಿ ೨೦೦ ವರ್ಷಗಳಿಗಿಂತಲೂ ಹೆಚ್ಚು ಕಾಲ ಉಳಿದುಕೊಂಡಿದೆ. ಮಾಹಿತಿ ರವಾನಿಸಲು ತಂತ್ರಜ್ಞಾನದ ಒಡೆಯನಂತಿರುವ ಬಿಲ್ ಗೇಟ್ಸನ ಭಾಷೆ ಇಂಗ್ಲಿಷ್ ಆಗಿರುವುದರಿಂದ ಈ ಭಾಷೆ ಪುನರ್‌ಯೌವನ ಪಡೆದಂತೆ ದೇಶದಲ್ಲಿ ಅಧಿಕಾರ ಯುತವಾಗಿ ಆವರಿಸಿಕೊಂಡು ತನ್ನ ಬೇರುಗಳನ್ನು ಬಲಪಡಿಸಿಕೊಂಡಿದೆ. ಭಾರತದಲ್ಲಿ ಬೆಂಗಳೂರೇ ಇದರ ರಾಜಧಾನಿ ಎನ್ನುವುದನ್ನು ಮರೆಯುವಂತಿಲ್ಲ. ಅಲ್ಲದೆ ಭಾರತದಲ್ಲಿ ಈ ಭಾಷೆಯಲ್ಲಿ ಸೃಜನಶೀಲ ಸಾಹಿತ್ಯವೂ ಸೃಷ್ಟಿಯಾಗುತ್ತಿದೆ; ಸಂಸತ್ತಿನಲ್ಲಿ ಈ ಭಾಷೆಯಲ್ಲಿ ದೇಶದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಯುತ್ತದೆ; ಯಾವುದೇ ಬೃಹತ್ ಕೈಗಾರಿಕಾ ವ್ಯವಹಾರದಲ್ಲಿ ಹಣಕಾಸು ಹೂಡುವಲ್ಲಿ ಈ ಭಾಷೆ ಬಳಕೆ ಇದೆ. ದೇಶವಿದೇಶಗಳಿಂದ ಸುದ್ದಿ ಸಮಾಚಾರಗಳು ಅವುಗಳು ನಡೆಯುತ್ತಿರುವಂತೆ ನಮಗೆ ತಲುಪುವುದು ಈ ಭಾಷೆಯಲ್ಲಿ. ಸಮೂಹ ಮಾಧ್ಯಮಗಳು ಈ ಭಾಷೆಯನ್ನು ವ್ಯಾಪಕವಾಗಿ ಬಳಸುತ್ತವೆ. ಈ ರೀತಿ ರಾಜಕೀಯ ಶಕ್ತಿ, ಆರ್ಥಿಕ ಶಕ್ತಿ ಮತ್ತು ಜ್ಞಾನಬಲ ಪಡೆದುಕೊಂಡಿದೆ ಇಂಗ್ಲಿಷ್. ಇಷ್ಟು ಶಕ್ತಿಯನ್ನು ಪಡೆದು ಕೊಂಡು ೨೦೦ ವರ್ಷಕ್ಕೂ ಹೆಚ್ಚು ದೀರ್ಘಕಾಲ ಬೇರು ಬಿಟ್ಟಿರುವ ಈ ಭಾಷೆಯನ್ನು ನಾವು ಯಾವ ಸ್ಥಾನದಲ್ಲಿಟ್ಟು ಹೇಗೆ ಬಳಸಿಕೊಳ್ಳಬೇಕು ಎನ್ನುವುದೇ ಈ ಶತಮಾನದಲ್ಲಿ ನಮ್ಮ ಮುಂದಿರುವ ಅಗಾಧವಾದ ಪ್ರಶ್ನೆ. ಇಂಗ್ಲೆಂಡಿನಲ್ಲಿ ಇಂಗ್ಲಿಷ್ ೧೨ನೇ ಶತಮಾನದವರೆಗೂ ಲ್ಯಾಟಿನ್ ಮತ್ತು ಫ್ರೆಂಚ್ ಭಾಷೆಗಳನ್ನು ಹೇಗೆ ನಿಭಾಯಿಸಿತು ? ಆ ಸಮಯದಲ್ಲಿ ಈಗ ನಮ್ಮ ಪ್ರಾದೇಶಿಕ ಭಾಷೆಗಳು ದೇಶದಲ್ಲಿ ಬೆಳೆದಿರುವಷ್ಟು ಪ್ರಬುದ್ಧವಾಗಿ ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಬೆಳೆದಿರಲಿಲ್ಲ. ಛಾಸರ್ ಮತ್ತು ಸ್ಪೆನ್ಸರ್ ಬಿಟ್ಟರೆ ಅವರಲ್ಲಿ ಉತ್ತಮ ಸಾಹಿತಿಗಳು ಇರಲಿಲ್ಲ. ಅಲ್ಲದೆ ಇಂಗ್ಲಿಷ್ ಲ್ಯಾಟಿನ್ ಮತ್ತು ಫ್ರೆಂಚ್ ಭಾಷೆಗಳ ನಡುವೆ ಇರುವ ಸಂಬಂಧ ಹಿಂದಿ ಮತ್ತು ಸಂಸ್ಕೃತಗಳಿಗಿದ್ದಂತೆ. ಹಿಂದಿಯ ಲಿಪಿ ಸಂಸ್ಕೃತದ್ದಾದರೆ, ಇಂಗ್ಲಿಷ್‌ನ ಲಿಪಿ ಲ್ಯಾಟಿನ್ ಭಾಷೆಯದು. ಈ ಎರಡು ಭಾಷೆಗಳಿಗೂ ಮೂಲ ಭಾಷೆಯ ಸಾಂಸ್ಕೃತಿಕ, ಧಾರ್ಮಿಕ ಮತ್ತು ರಾಜಕೀಯ ಸಂಬಂಧಗಳಿವೆ. ಆದುದರಿಂದ ಇಂಗ್ಲಿಷ್ ಬೆಳೆಯಲು ಸಾಧ್ಯವಾಯಿತು. ಇಂಗ್ಲಿಷಿಗೂ ಮತ್ತು ಭಾರತೀಯ ಭಾಷೆಗಳಿಗೂ ಆ ರೀತಿಯ ಸಾಂಸ್ಕೃತಿಕ, ಧಾರ್ಮಿಕ ಮತ್ತು ಲಿಪಿಗಳ ಸ್ವರೂಪದಲ್ಲಿ ಸಂಬಂಧವಿಲ್ಲ. ಆದರೆ ರಾಜಕೀಯ, ಆರ್ಥಿಕ ಮತ್ತು ಜ್ಞಾನಪ್ರಪಂಚದಲ್ಲಿ ಬಲವಾದ ನಂಟು ಬೆಳೆದುನಿಂತಿದೆ. ಇಲ್ಲಿಯೆ ನಮ್ಮ ಸಮಸ್ಯೆ ಸಂಕೀರ್ಣವಾಗುವುದು. ಈ ಕಾರಣದಿಂದ ಈ ಭಾಷೆಯನ್ನು ಕಲಿಯದೆ ವಿಧಿ ಇಲ್ಲ. ಆದರೆ ಸಾಂಸ್ಕೃತಿಕವಾಗಿ ಇದನ್ನು ನಿಯಂತ್ರಿಸುವುದು ಹೇಗೆ ಎನ್ನುವುದೆ ನಮ್ಮ ಮುಂದಿರುವ ಮಹತ್ತರವಾದ ಪ್ರಶ್ನೆ. ಕಾರಣ, ನಿಯಂತ್ರಿಸದಿದ್ದರೆ ಇದು ನಮ್ಮ ಭಾಷೆಗಳನ್ನು ನುಂಗಿ ಅಳಿಸಿಬಿಡಬಹುದು. ಹಾಗೆ ಅಳಿಸಿಹೋದರೆ ನಮ್ಮ ಸಂಸ್ಕೃತಿ ನಾಶವಾಗುತ್ತದೆ.

ನಮಗೆ ಎಷ್ಟು ಇಂಗ್ಲಿಷ್ ಬೇಕು ? ಯಾವ ಮಟ್ಟದಲ್ಲಿ ಬೇಕು ? ಎನ್ನುವ ಪ್ರಶ್ನೆಗಳಿಗೆ ನಾವು ಸಮರ್ಪಕವಾಗಿ ಉತ್ತರ ಕಂಡುಕೊಳ್ಳಬೇಕಾಗುತ್ತದೆ. ಮೊದಲನೆಯ ಪ್ರಶ್ನೆಗೆ ಉತ್ತರ ಸುಲಭ. ದಿನನಿತ್ಯದ ಬದುಕಿನಲ್ಲಿ ನಮಗೆ ಅಷ್ಟಾಗಿ ಇಂಗ್ಲಿಷ್ ಬೇಕಾಗುವುದಿಲ್ಲ. ಪತ್ರಿಕೆಗಳನ್ನು ಓದುವುದಕ್ಕೆ, ವಾರ್ತೆಗಳನ್ನು ಕೇಳುವುದಕ್ಕೆ ಬೇಕು. ಮಾತನಾಡುವುದಕ್ಕೆ ಬಹುಶಃ ಒಟ್ಟು ನಾವು ಬಳಸುವ ಭಾಷೆಯಲ್ಲಿ ಶೇ. ೧೦-೧೫ರಷ್ಟು ಬೇಕಾಗಬಹುದು. ಆದರೆ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ, ಅಧ್ಯಾಪಕ ವರ್ಗಕ್ಕೆ ಪಾಠ ಹೇಳುವುದಕ್ಕೆ, ಕೇಳುವುದಕ್ಕೆ, ಓದಿ ಜ್ಞಾನಾರ್ಜನೆ ಮಾಡುವುದಕ್ಕೆ ಈಗಿನ ವ್ಯವಸ್ಥೆಯಲ್ಲಿ ಸುಮಾರು ಶೇ. ೬೦-೬೫ರಷ್ಟು ಬೇಕಾಗುತ್ತದೆ. ನ್ಯಾಯಾಲಯ ಗಳಲ್ಲೂ ಇದೇ ಸಂದರ್ಭವಿದೆ. ಆದಕಾರಣ ೨೫ ವರ್ಷಗಳ ಹಿಂದೆ ನಾವು ಇದನ್ನು ಬದಲಿಸುವ ಪ್ರಕ್ರಿಯೆ ಆರಂಭವಾಗಿದ್ದಿದ್ದರೆ ಈಗ ಈ ಸಂದರ್ಭ ಬರುತ್ತಿರಲಿಲ್ಲ. ಆದಕಾರಣ ಈ ಭಾಷೆಯನ್ನು ನಾವು ಮಕ್ಕಳಿಗೆ ಕಲಿಸಲೇಬೇಕಾಗುತ್ತದೆ.

**ಭಾಷೆಯನ್ನು ಕಲಿಸುವ ಶಾಲೆಗಳ ಸ್ಥಿತಿ**

ಇಂತಹ ಪರಿಸ್ಥಿತಿಯಲ್ಲಿ ಮಕ್ಕಳಿಗೆ ಇಂಗ್ಲಿಷ್ ಕಲಿಸುವ ನಮ್ಮ ಶಾಲೆಗಳ ಸ್ಥಿತಿಯನ್ನು ನಾವು ಗಮನಿಸಬೇಕು. ಹಳ್ಳಿಗಳ ಶಾಲೆಯ ಕಡೆ ಗಮನ ಹರಿಸಿದರೆ ನಮಗೆ ಕಾಣುವುದು ಅತ್ಯಂತ ಕರುಣಾಜನಕವಾದ ಸ್ಥಿತಿ. ಬಹಳ ಹಳ್ಳಿಗಳಲ್ಲಿ ಶಾಲೆಗಳು ನಡೆಯುವುದು ದನದ ಕೊಟ್ಟಿಗೆ ಯಲ್ಲಿ, ವಾಹನಗಳು ನಿಲ್ಲುವ ಶೆಡ್ಡುಗಳಲ್ಲಿ, ಗಾಳಿ ಆಡದ ಅಟ್ಟಗಳಲ್ಲಿ ಅಥವಾ ಬೆಳಕು ಬೀಳದ ಮಾಳಿಗೆಗಳಲ್ಲಿ. ಹಲವಾರು ಶಾಲೆಗಳಲ್ಲಿ ನಾಲ್ಕು ಐದು ತರಗತಿಗಳಿದ್ದರೂ ಒಬ್ಬರೆ ಶಿಕ್ಷಕರಿರುತ್ತಾರೆ. ಇನ್ನು ಕೆಲವು ಶಾಲೆಗಳಲ್ಲಿ ಉಪಾಧ್ಯಾಯರಿದ್ದರೂ ಅವರು ಈ ಹಳ್ಳಿಗಳಲ್ಲಿ ವಾಸಿಸು ವುದಿಲ್ಲ. ದೊಡ್ಡ ಪಟ್ಟಣದಲ್ಲಿ ವಾಸಿಸುತ್ತಾರೆ. ಪ್ರತಿದಿನ ಅವರು ಹಳ್ಳಿಗೆ ಬರುವ ವೇಳೆಗೆ ಪ್ರಯಾಣದಿಂದ ಆಯಾಸಗೊಂಡು ಪಾಠಮಾಡಲು ನಿರಾಸಕ್ತರಾಗಿರುತ್ತಾರೆ ಅಥವಾ ತಡವಾಗಿ ಬರುತ್ತಾರೆ. ಏನೇ ಆದರೂ ಮಕ್ಕಳಿಗೆ ಪಾಠ ಇರುವುದಿಲ್ಲ. ಮೂರು ನಾಲ್ಕು ಶಿಕ್ಷಕರಿರುವ ಕಡೆ ವಿಜ್ಞಾನದ ಶಿಕ್ಷಕರು ಅಥವಾ ದೈಹಿಕ ಶಿಕ್ಷಕರು ಇಂಗ್ಲಿಷ್ ಪಾಠ ಮಾಡುತ್ತಾರೆ. ಮಕ್ಕಳು ಇಂಗ್ಲಿಷ್ ಕಲಿಯಬೇಕು ಎಂದು ನಿರೀಕ್ಷೆ ಮಾಡುವುದೇ ಉತ್ಪ್ರೇಕ್ಷೆಯಾಗಬಹುದು. ಇಂಗ್ಲಿಷ್ ಶಿಕ್ಷಕರಿರುವ ಕಡೆ ಅವರಿಗೆ ಇಂಗ್ಲಿಷ್ ಭಾಷೆ ಹೇಳಿಕೊಡುವಲ್ಲಿ ತರಬೇತಿ ಇರುವುದಿಲ್ಲ. ಹೀಗಾಗಿ ಹಳ್ಳಿಯ ಮಕ್ಕಳಿಗೆ ಶಿಕ್ಷಣ ದೊರೆಯುವುದೇ ಇಲ್ಲ.

''ಹಳ್ಳಿಯ ಶಾಲೆಗಳಲ್ಲಿ ಮೆಟ್ರಿಕ್ಯುಲೇಷನ್‌ನಲ್ಲಿ ಇಂಗ್ಲಿಷ್ ಮತ್ತು ಗಣಿತದ ಪತ್ರಿಕೆಗಳಲ್ಲಿ ಶೇ. ೯೫ ವಿದ್ಯಾರ್ಥಿಗಳು ಫೇಲಾಗುತ್ತಾರೆ'' – ಎಂದು ಹಿಂದಿನ ಕಾಂಗ್ರೆಸ್ ಸರ್ಕಾರದಲ್ಲಿ ಪ್ರಾಥಮಿಕ ಶಾಲಾ ವಿದ್ಯಾಭ್ಯಾಸಕ್ಕೆ ಮಂತ್ರಿಗಳಾಗಿದ್ದ ಬಿ. ಕೆ. ಚಂದ್ರಶೇಖರ್ ಅವರು ಶಾಸನ ಸಭೆಯಲ್ಲಿ ಹೇಳಿದ್ದಾರೆ. ಶಾಲೆಯಲ್ಲಿ ಕೂರಲು ಅವಕಾಶವಿಲ್ಲದೆ, ಗಂಜಲ, ಸಗಣಿ ವಾಸನೆ ಸೇವಿಸುತ್ತ, ವಿದ್ಯೆ ಗಳಿಸುವ ಬದಲು ರೋಗರುಜಿನಗಳಿಗೆ ತುತ್ತಾಗುತ್ತ ನಮ್ಮ ಹಳ್ಳಿಗಳಲ್ಲಿ ಮಕ್ಕಳ ಸೃಜನಶೀಲತೆ ಸಂಪೂರ್ಣ ನಾಶವಾಗುತ್ತದೆ. ಇಂಗ್ಲಿಷ್ ಭಾಷೆ ಕಲಿಯದೆ ಇವರ ವಿದ್ಯಾಭ್ಯಾಸ ಮೊಟಕುಗೊಳ್ಳುತ್ತದೆ.

ಇಲ್ಲಿ ಒಂದು ವಾಸ್ತವಾಂಶವನ್ನು ಗಮನಿಸಬೇಕು. ಶೈಶವಾವಸ್ಥೆಯಲ್ಲಿ ಮಕ್ಕಳಿಗೆ ಒಂದು ನಿರ್ಣಾಯಕ ಅವಧಿ ಇರುತ್ತದೆ. ಈ ಅವಧಿಯಲ್ಲಿ ಅವರ ಮೆದುಳು ಭಾಷೆಯ ಕಡೆ ತಿರುಗುತ್ತದೆ. ಈ ಅವಧಿಯಲ್ಲಿ ಭಾಷೆಯನ್ನು ಪಡೆದುಕೊಳ್ಳದಿದ್ದರೆ ಅವರು ಭಾಷೆಯನ್ನು ಎಂದೂ ಸರಿಯಾಗಿ ಪಡೆದುಕೊಳ್ಳದೆ ಹೋಗಬಹುದು.

– ನೋಮ್ ಚೋಂಸ್ಕಿ

ಇಂತಹ ಸಂದರ್ಭದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮಕ್ಕಳಿಗೆ ಭಾಷೆಗಳನ್ನು ಸರಿಯಾಗಿ ಕಲಿಸುವ ವ್ಯವಸ್ಥೆ ಮಾಡಬೇಕಾದುದು ಅವರ ಜವಾಬ್ದಾರಿ. ಆದರೆ ಈಗ ನಾವು ಭಿನ್ನಾಭಿಪ್ರಾಯದಿಂದ ವಿವಾದದಲ್ಲಿ ಸಿಲುಕಿಕೊಂಡಿದ್ದೇವೆ. ಕೆಲವರು ಮಕ್ಕಳಿಗೆ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಮಾಧ್ಯಮದಲ್ಲಿ

# ಬ್ರದರ್ ಜಾನ್ ಮತ್ತು ಇತರರು

**ಮೂ**ವತ್ತು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ವಾಸಿಸುತ್ತಿದ್ದ ನನಗೆ ನಡುಬೇಸಿಗೆಯಲ್ಲಿ ಮದರಾಸಿನಲ್ಲಿ ಒಂದು ದಿನದ ತುರ್ತು ಕೆಲಸ ಮಾಡಬೇಕಾದ ಸಂದರ್ಭ ಒದಗಿಬಂದಿತು. ಮಧ್ಯಾಹ್ನ ಹೊರಡುವ ಬೃಂದಾವನ್ ಎಕ್ಸ್‌ಪ್ರೆಸ್ಸಿನಲ್ಲಿ ಮದರಾಸಿಗೆ ಹೊರಟೆ. ದುರದೃಷ್ಟವಶಾತ್ ಹೊರಡುವ ವೇಳೆಗಾಗಲೇ ಜ್ವರ ಕುದಿಯುತ್ತಿತ್ತು. ಬೇಸಿಗೆಯ ಧೂಳೆಬ್ಬಿಸುತ್ತಾ, ಮೈಯೆಲ್ಲ ಕುಲುಕುತ್ತಾ ದೌಡಾಯಿಸಿದ ಬೃಂದಾವನ್ ಎಕ್ಸ್‌ಪ್ರೆಸ್ಸಿನಲ್ಲಿ ಮದರಾಸು ತಲುಪುವ ವೇಳೆಗೆ ನನಗೆ ಅರೆಜೀವವಾಗಿತ್ತು. ಆಗ ಮದರಾಸಿನಲ್ಲಿ ಇದ್ದ ನನ್ನ ಪರಿಚಯದ ಏಕೈಕ ವ್ಯಕ್ತಿ, ನನ್ನ ದೊಡ್ಡಪ್ಪನವರ ಮಗ ಶಿವರಾಮ, ಐಐಟಿಯಲ್ಲಿ ಇಂಜಿನೀರಿಂಗ್ ಓದುತ್ತಿದ್ದ. ಮದರಾಸು ರೈಲು ನಿಲ್ದಾಣ ಬಿಟ್ಟು ಐದನೇ ನಂಬರ್ ಬಸ್ಸು ಹಿಡಿದು ಅಡಯಾರ್ ತಲುಪಿ ಬಸ್ಸು ಬದಲಿಸಿ ಐಐಟಿ ತಲುಪುವ ವೇಳೆಗೆ ನಡೆಯಲೂ ಆಗದಷ್ಟು ಸುಸ್ತಾಗಿತ್ತು. ನನ್ನ ತಮ್ಮ ಇದ್ದದ್ದು ಸರಸ್ವತಿ ಹಾಸ್ಟೆಲಿನಲ್ಲಿ. ಐಐಟಿ ಅಧಿಕಾರಿಗಳ ನಾಮಾಭಿರುಚಿ ವಿಚಿತ್ರವಾಗಿದೆ. ಅವರದೇ ಆದ ಬಸ್ಸುಗಳಿಗೆ ಅಚಲ ಹಿಮಾಚಲ ಪರ್ವತ ಶಿಖರಗಳ ಹೆಸರಿಟ್ಟಿದ್ದಾರೆ. ಭದ್ರ ಬುನಾದಿಯ ಮೇಲೆ ನಿಂತಿರುವ ಹಾಸ್ಟೆಲ್ಲುಗಳಿಗೆ ಹರಿವ ನದಿಗಳ ಹೆಸರಿಟ್ಟದ್ದಾರೆ. ಅಂತೂ ಕಾಲೆಳೆಯುತ್ತಾ ಸರಸ್ವತಿ ಹಾಸ್ಟೆಲ್ಲಿಗೆ ತಲುಪಿದೆ. ಅಲ್ಲಿ ನನಗೆ ಆಘಾತ ಕಾದಿತ್ತು. ಇಡೀ ಹಾಸ್ಟೆಲ್ ಕತ್ತಲಿನಲ್ಲಿ ಮುಳುಗಿ ಬಿಕೋ ಎನ್ನುತ್ತಿತ್ತು. ಶಿವನ ರೂಮಿಗೆ ಬೀಗ ಜಡಿದಿತ್ತು. ಏನು ಮಾಡಲಿ ಎಂದು ಚಿಂತಿಸುತ್ತಾ ನಿಂತವನಿಗೆ, ಸನಿಹದಲ್ಲೇ ಒಂದು ಕೋಣೆಯಲ್ಲಿ ಬೆಳಕಿರುವುದು ಗೋಚರವಾಯಿತು. ಬದುಕಿದೆಯಾ ಬಡಜೀವವೇ ಎಂದುಕೊಳ್ಳುತ್ತಾ ಆ ರೂಮಿನ ಬಾಗಿಲು ತಟ್ಟಿದೆ. ಪ್ಯಾಂಟು, ಷರಟು ಧರಿಸಿ, ಓದಿಕೊಳ್ಳುತ್ತಿದ್ದ ವಿದ್ಯಾರ್ಥಿ ಬಾಗಿಲು ತೆರೆದು, ನನ್ನೆಡೆ ಪ್ರಶ್ನಾತ್ಮಕ ಚಿಹ್ನೆ ಮಾಡಿದ.

''ನಿಮ್ಮ ನೆರೆಯ ಶಿವರಾಮ ಎಲ್ಲಿಗೆ ಹೋಗಿದ್ದಾರೆ ?''

''ಓ, ನಿಮಗೆ ತಿಳಿದಿಲ್ಲವೇ ? ಇಂದು ಶನಿವಾರ, ಇಲ್ಲಿ ಬಯಲು ಸಿನಿಮಾ ತೋರಿಸುತ್ತಾರೆ. ಎಲ್ಲ ವಿದ್ಯಾರ್ಥಿಗಳೂ ಸಿನಿಮಾ ನೋಡಲು ಹೋಗಿದ್ದಾರೆ.''

ನೆನಪಾಯಿತು ! ನಾನೂ ಕೆಲ ವರ್ಷಗಳ ಹಿಂದೆ ಐಐಟಿಯ ವಿದ್ಯಾರ್ಥಿಯಾಗಿದ್ದೆ. ಪ್ರತಿ ಶನಿವಾರ ಸಂಜೆ, ಕತ್ತಲಾದ ಬಳಿಕ, ಅಲ್ಲಿಯ 'ಓಪನ್ ಏರ್' ಥಿಯೇಟರಿನಲ್ಲಿ ಸಿನಿಮಾ ತೋರಿಸುತ್ತಾರೆ. ಮದರಾಸಿನ ಕಡುಸೆಖೆಯಲ್ಲಿ, ಬಯಲಿನಲ್ಲಿ ಸಿನಿಮಾ ನೋಡುವುದೇ ಹಿತ. ವಾರವಿಡೀ ಬಹಳ ಕಷ್ಟಪಟ್ಟು ಓದುವ ವಿದ್ಯಾರ್ಥಿಗಳು ಪ್ರತಿ ಶನಿವಾರ ಸಿನಿಮಾ ನೋಡುತ್ತಾರೆ. ಖುಷಿಯಾದಾಗ ಶಿಳ್ಳೆ ಹೊಡೆಯುತ್ತಾರೆ. ಒಟ್ಟಿನಲ್ಲಿ ದಾಂಧಲೆ ಮಾಡುತ್ತಾ, ಸಿನಿಮಾ ಚೆನ್ನಾಗಿರಲಿ, ಬಿಡಲಿ, ಮನಸಾರೆ ಸಂತೋಷ ಪಡುತ್ತಾರೆ. ವಾರದ ದುಗುಡ ಕಳೆದುಕೊಂಡು, ಮತ್ತೊಂದು ವಾರ ಮತ್ತೆ ಪುಷ್ಟ ಊರಿ ಕುಳಿತು ಓದಿಕೊಳ್ಳುವ ಹುಮ್ಮಸ್ಸು ಪಡೆಯುತ್ತಾರೆ. ಜಡಿ ಮಳೆ ಸುರಿಯುತ್ತಿದ್ದರೂ ಯಾರೂ ಸಿನಿಮಾ ಬಿಟ್ಟು ತಮ್ಮ ರೂಮುಗಳಿಗೆ ಹಿಂತಿರುಗುವುದಿಲ್ಲ! ಸಿನಿಮಾ ಮುಗಿದ ನಂತರ ಅನೇಕ ವಿದ್ಯಾರ್ಥಿಗಳು ಕಾಫಿ ಹೀರಲು, ಬಾಳೆಹಣ್ಣು, ಬಿಸ್ಕತ್ತು ಕಬಳಿಸಲು ಕೆಫೆಟೇರಿಯಾಗೆ ಭೇಟಿ ಕೊಡುತ್ತಾರೆ. ಮಧ್ಯರಾತ್ರಿಗಿಂತ ಮೊದಲು ತಮ್ಮ ಕೋಣೆ ಸೇರಲಾರರು. ಏನಪ್ಪಾ ಮಾಡುವುದು ಎಂದು ಅಲ್ಲಿಯ ಗೋಡೆಗೆ ಒರಗಿ ನಿಂತೆ. ವಿದ್ಯಾರ್ಥಿ ನನಗೆ ಬಹಳ ಆಯಾಸವಾಗಿರುವುದನ್ನು ಗಮನಿಸಿದ. ಒಳಗೆ ಬನ್ನಿ ಎಂದು ನನ್ನನ್ನು ಆಹ್ವಾನಿಸಿದ. ಅದಕ್ಕೇ ಕಾಯುತ್ತಿದ್ದ ನಾನು ಅವನ ಕೋಣೆಯಲ್ಲಿ ಉಸ್ಸಪ್ಪಾ ಎನ್ನುತ್ತಾ ಕುಳಿತುಕೊಂಡೆ. ನನಗೆ ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಹೇಳಬೇಕೆನ್ನುವ ತವಕದಲ್ಲಿ, ಆತನನ್ನು ಕೇಳಿದೆ,

''ಅದೇನು ಎಲ್ಲಾ ಸಿನಿಮಾಕ್ಕೆ ಹೋಗಿರುವಾಗ ನೀವು ಮಾತ್ರ ರೂಮಿನಲ್ಲೇ ಉಳಿದಿದ್ದೀರಿ, ಬಹಳ ಓದುವುದಿತ್ತೇ, ನನ್ನಿಂದ ತೊಂದರೆ ಆಗುತ್ತಿಲ್ಲವಷ್ಟೇ ?''

''ನಾನು ಒಬ್ಬ ಒಳ್ಳೆಯ ಕ್ರಿಶ್ಚಿಯನ್, ಅದಕ್ಕೇ ಸಿನಿಮಾಕ್ಕೆ ಹೋಗಲಾರೆ.''

''ಕ್ರಿಶ್ಚಿಯನ್ ಆದ ಮಾತ್ರಕ್ಕೇ ಸಿನಿಮಾಕ್ಕೆ ಹೋಗಬಾರದೆಂದಿದೆಯೇ ?''

''ಹೌದು, ಹೋಗಬಾರದು. ಸಿನಿಮಾಗಳಲ್ಲಿ ಬಹಳ ಕ್ರೌರ್ಯವನ್ನು ತೋರಿಸುತ್ತಾರೆ, ಅನೈತಿಕ ಲೈಂಗಿಕತೆಯ ಪ್ರದರ್ಶನ ಮಾಡುತ್ತಾರೆ. ಇವೆಲ್ಲಾ ನಮ್ಮ ಮನಸ್ಸನ್ನು ಪ್ರಚೋದಿಸುತ್ತವೆ. ನಮ್ಮ ಮನಸ್ಸಿನಲ್ಲಿ ಪಾಪಕಾರ್ಯಗಳ ಬೀಜ ಬಿತ್ತುತ್ತವೆ. ಮನಸ್ಸಿನಲ್ಲಿ ಪಾಪ ಭಾವನೆ ಮೂಡುವುದು ಪಾಪಕಾರ್ಯ ಮಾಡಿದಷ್ಟೇ ಅಪರಾಧ, ಅಂಥವರಿಗೆ ನರಕ ಕಟ್ಟಿಟ್ಟ ಬುತ್ತಿ.''

ಅವರ ಮಾತಿನಲ್ಲಿ ಕೆಲಮಟ್ಟಿನ ಸತ್ಯತೆ ಇದ್ದರೂ, ಕಷ್ಟಪಟ್ಟು ಓದುವ ವಿದ್ಯಾರ್ಥಿಗಳ ಸಣ್ಣ ಮನರಂಜನೆಯನ್ನು ಇಷ್ಟು ದೊಡ್ಡ ಅಪರಾಧಕ್ಕೆ ಹೋಲಿಸುವುದು ನನಗೆ ಸಮ್ಮತವಾಗಲಿಲ್ಲ. ಸೌಜನ್ಯತೆಯಿಂದ ಸುಮ್ಮನಿದ್ದೆ. ನನ್ನನ್ನೇ ಗಮನಿಸುತ್ತಿದ್ದ ಅವರಿಗೆ, ನನ್ನ ಬಳಲಿಕೆ ತಿಳಿಯಿತು.

''ಎಲ್ಲಿಂದ ಬಂದಿರಿ ?''

''ಬೆಂಗಳೂರಿಂದ ಇಗೋ ರೈಲಿಳಿದು ಬರುತ್ತಿದ್ದೇನೆ.''

''ರಾತ್ರೆ ಊಟ ಮಾಡಲಿಲ್ಲವೆ ?''

ಸಂಕೋಚಪಟ್ಟುಕೊಂಡೇ ಇಲ್ಲವೆಂದೆ.

''ನಮ್ಮಲ್ಲಿ ಊಟ ಮುಗಿದುಹೋಗಿದೆಯಲ್ಲಾ, ಏನು ಮಾಡುತ್ತೀರಿ ?''

''ಪರವಾಗಿಲ್ಲ, ಒಂದು ರಾತ್ರೆ ಹೊಟ್ಟೆಗೆ ಹಿಟ್ಟು ಹಾಕದಿದ್ದರೆ ತೊಂದರೆಯಾಗುವುದಿಲ್ಲ.''

''ಇರಿ, ನಮ್ಮ ಮೆಸ್ಸಿನಲ್ಲಿ ಏನಾದರೂ ಸಿಕ್ಕುತ್ತದೋ, ನೋಡಿ ಬರುತ್ತೇನೆ'' ಎಂದವರೇ, ನನ್ನ ಸಣ್ಣ ದನಿಯ ಪ್ರತಿಭಟನೆಯನ್ನು ನಿರ್ಲಕ್ಷಿಸಿ ಓಡಿದರು. ಕೆಲ ಹೊತ್ತಿನಲ್ಲೇ, ಒಂದು ತಂಪು ಪಾನೀಯ, ಬಿಸ್ಕೀಟು ಪಾಕೇಟುಗಳನ್ನು ತಂದು ನನ್ನ ಮುಂದಿರಿಸಿ, ''ತಿನ್ನಿರಿ'' ಎಂದರು.

ಸಂಕೋಚ ತೊರೆದು, ಬಿಸ್ಕೀಟು ತಿಂದು, ತಂಪು ಪಾನೀಯ ಗುಟುಕರಿಸಿದೆ. ಹಾಯೆನಿಸಿತು. ಅವರನ್ನು ಮನಸಾರೆ ವಂದಿಸಿ ಹೇಳಿದೆ,

''ನೀವೂ ಸಿನಿಮಾ ನೋಡಲು ಹೋಗಬಹುದಿತ್ತು, ಮನರಂಜನೆ ಅಷ್ಟು ದೊಡ್ಡ ಪಾಪ ಎಂದು ನನಗನ್ನಿಸುವುದಿಲ್ಲ.''

''ನೀವು ಒಳ್ಳೆಯ ಕ್ರಿಶ್ಚಿಯನ್ ಆಗಿದ್ದರೆ, ನಿಮಗೆ ಅನ್ನಿಸಿಯೇ ಅನ್ನಿಸುತ್ತದೆ. ಈ ಮನರಂಜನೆಗಳೆಲ್ಲ ಪ್ರಚೋದನೆಗಳು, ನಮ್ಮನ್ನು ತಪ್ಪು ದಾರಿಗೆ ಎಳೆಯುವ ಸೈತಾನನ ಪ್ರಯತ್ನಗಳು. ನಾನು ಇಂತಹ ಮನರಂಜನೆಯನ್ನು ಒಪ್ಪಲಾರೆ, ಹತ್ತಾರು ಪಿಶಾಚಿಗಳು ಬಂದು ನನ್ನ ಮೈಯೆಲ್ಲಾ ಪರಚಿದರೂ, ನಾನು ವಿಚಲಿತನಾಗದಷ್ಟು ನನ್ನ ಮನಸ್ಸಿನ ಹತೋಟಿ ಇಟ್ಟುಕೊಳ್ಳಬಯಸುವೆ.''

ನಾನು ಪುನಃ ಸೌಜನ್ಯತೆಯಿಂದ ಸುಮ್ಮನಿದ್ದೆ.

ಇನ್ನೂ ಹಲವಾರು ಲೋಕಾಭಿರಾಮದ ಮಾತುಗಳನ್ನಾಡುತ್ತಿದ್ದೆವು. ನನ್ನ ಆಯಾಸ ಜಾಸ್ತಿಯಾಗುತ್ತಲೇ ಇತ್ತು. ಅವರ ಕೋಣೆಯೆಲ್ಲಾ ತಿರುಗುವಂತೆ ಭಾಸವಾಗುತ್ತಿತ್ತು. ನನ್ನನ್ನು ಗಮನಿಸುತ್ತಿದ್ದ ಆತ ಕೇಳಿದರು,

''ಜ್ವರದಿಂದ ನರಳುತ್ತಿದ್ದೀರಾ ?''

''ಹೌದು, ಸ್ವಲ್ಪ ಜ್ವರ ಬಂದಿದೆ.''

''ನಿಮ್ಮ ಕಸಿನ್ ಇನ್ನೂ ಎರಡು ಗಂಟೆ ಬರಲಾರ, ಅಲ್ಲಿಯವರೆಗೆ ನೀವು ಸುಮ್ಮನೆ ಕಾಯುತ್ತಿರಲು ಸಾಧ್ಯವಿಲ್ಲ. ನನ್ನ ಹಾಸಿಗೆಯಲ್ಲಿ ಬೆಳಗಿನವರೆಗೆ ಮಲಗಿರಿ. ನಿಮ್ಮ ಜ್ವರ ಕಡಿಮೆಯಾದೀತು. ಬೆಳಗ್ಗೆ ನಿಮ್ಮ ಕಸಿನ್ನನ್ನು ಕಾಣಬಹುದು.''

ನಾನು ಪ್ರತಿಭಟಿಸುತ್ತಿದ್ದರೂ ಕೇಳದೇ, ಹಾಸಿಗೆ ಸರಿಮಾಡಿ ಮಲಗಿ ಎಂದರು.

''ನೀವು ಎಲ್ಲಿ ಮಲಗುತ್ತೀರಿ ?''

''ಚಾಪೆಯಿದೆ, ಇಲ್ಲೇ ನೆಲದ ಮೇಲೆ ಹಾಸಿಕೊಂಡು ಮಲಗುವೆ. ನಾನು ಇನ್ನೂ ಓದುವುದಿದೆ. ನೀವು ಮಲಗಿ, ನಂತರ ನಾನು ಮಲಗುತ್ತೇನೆ'' ಎಂದು ಹೇಳಿ ಎಷ್ಟು ಪ್ರತಿಭಟಿಸಿದರೂ ಕೇಳದೇ, ನನ್ನನ್ನು ಮಲಗಿಸಿಯೇ ಬಿಟ್ಟರು. ಬೆಳಗಿನವರೆಗೆ ಹಾಯಾಗಿ ನಿದ್ದೆಮಾಡಿದೆ. ಬೆಳಿಗ್ಗೆ ಏಳುವ ವೇಳೆಗೆ ಹೊಸ ಜೀವ ಬಂದಿತ್ತು. ಅವರಿಗೆ ಅನೇಕಾನೇಕ ಧನ್ಯವಾದಗಳನ್ನು ಅರ್ಪಿಸಿ, ಹೊರಡಲು ತಯಾರಾದೆ. ತಮ್ಮ ಕಪಾಟಿನಿಂದ ಹಲವಾರು ಸಣ್ಣ ಪುಸ್ತಕಗಳನ್ನು ತೆಗೆದು ನನ್ನ ಕೈಯಲ್ಲಿಟ್ಟು ಹೇಳಿದರು,

''ನೀವು ರೈಲಿನಲ್ಲಿ ಬೆಂಗಳೂರಿಗೆ ಹೋಗುತ್ತಿರುವಾಗ ಓದಿರಿ, ಮನಸ್ಸಿಗೆ ಹಿಡಿಸದಿದ್ದರೆ, ಕಿಟಕಿಯಿಂದ ಹೊರಗೆಸೆಯಿರಿ.''

ಶಿವನನ್ನು ಕಂಡಾಗ, ''ಯಾವಾಗ ಬಂದೆ, ರಾತ್ರೆ ರೈಲಿನಲ್ಲಿ ಬಂದೆಯಾ ?'' ಎಂದು ಕೇಳಿದ. ನನಗಾದ

ಪ್ರೊ॥ ಎಂ.ಆರ್.ಎಸ್. ಮೂರ್ತಿ

ಅನುಭವವನ್ನು ಹೇಳಿದೆ. ''ಓ, ಅವನಾ, ಅವನನ್ನು ಎಲ್ಲರೂ 'ಬ್ರದರ್ ಜಾನ್' ಎಂದೇ ಕರೆಯುತ್ತಾರೆ. ಕ್ರಿಶ್ಚಿಯಾನಿಟಿ ಬಗ್ಗೆ ನಿನ್ನ ತಲೆ ಕೊರೆದನಷ್ಟೇ ?'' ಎಂದು ಕೇಳಿದ. ಬ್ರದರ್ ಜಾನನ ಉಪಕಾರ ಸ್ಮರಣೆ ಮಾಡುತ್ತಾ, ಕ್ರಿಶ್ಚಿಯಾನಿಟಿ ಬಗ್ಗೆ ಹೇಳಿದರೇನು, ಅವನು ಮಾಡಿದ ಉಪಕಾರಕ್ಕೆ ನಾನು ಚಿರಋಣಿ ಎಂದೆ.

ಬೆಂಗಳೂರಿಗೆ ರೈಲಿನಲ್ಲಿ ಮರಳುವಾಗ, ಬ್ರದರ್ ಜಾನ್ ಕೊಟ್ಟ ಪುಸ್ತಕಗಳನ್ನು ಓದಿದೆ. ಒಂದು ಪುಸ್ತಕದಲ್ಲಿ, ಏಸುಕ್ರಿಸ್ತನಿಗೆ ಸೈತಾನ ಸತಾಯಿಸಿದ್ದು, ಅವನನ್ನು ಬೆಟ್ಟದಿಂದ ತಳ್ಳಿದ್ದು, ಆದರೂ ಯಾವುದೇ ಪಾಪ ಮಾಡಲು ನಿರಾಕರಿಸಿದ ಕ್ರಿಸ್ತನ ವರ್ಣನೆ ಇತ್ತು. ಇನ್ನೊಂದು ಪುಸ್ತಕದಲ್ಲಿ, ಒಳ್ಳೆಯ ಕ್ರಿಶ್ಚಿಯನ್ನರಿಗೆ ದೊರಕುವ ಮರಣಾನಂತರದ ಸ್ವರ್ಗ ಸುಖ, ಕ್ರಿಶ್ಚಿಯನ್ ಅಲ್ಲದವರು ಅನುಭವಿಸಬೇಕಾಗುವ ನರಕದ ಬೀಭತ್ಸ ವರ್ಣನೆಗಳಿದ್ದವು. ಬ್ರದರ್ ಜಾನ್ ಹೇಳಿದಂತೆ, ರೈಲಿನ ಕಿಟಕಿಯಿಂದ ಪುಸ್ತಕಗಳನ್ನು ಹೊರಗೆಸೆದೆ.

ಇದೆಲ್ಲಾ ಆಗಿ ಅನೇಕ ವರ್ಷಗಳ ತರುವಾಯ, ಅಮೆರಿಕಾದಲ್ಲಿ ಇಂಡಿಯಾನ ರಾಜ್ಯದ ಲಾಫ್ಲಯಟ್ ಎಂಬ ಉರಿನಲ್ಲಿ ಮೂರ್ನಾಲ್ಕು ವರ್ಷಗಳನ್ನು ಉನ್ನತ ವಿದ್ಯಾಭ್ಯಾಸಕ್ಕಾಗಿ ಕಳೆದೆ. ಒಂದು ದಿನ ರಸ್ತೆಯಲ್ಲಿ ನಡೆದು ಹೋಗುತ್ತಿರುವಾಗ, ಎದುರಿನಿಂದ ಬರುತ್ತಿದ್ದ ಭಾರತೀಯ ದಂಪತಿಗಳು ಕಾಣಿಸಿದರು. ಮಗು ಮಲಗಿದ್ದ ತಳ್ಳುಗಾಡಿಯ ಸಮೇತ ನಡೆದು ಬರುತ್ತಿದ್ದರು. ಅಂದಿನ ದಿನಗಳಲ್ಲಿ ಲಾಫ್ಲಯಟ್ಟಿನಲ್ಲಿ ಭಾರತೀಯರು ಬಹಳ ಅಪರೂಪ. ಆದ್ದರಿಂದ, ಯಾರಾದರೂ ಭಾರತೀಯರನ್ನು ಕಂಡರೆ, ಮಾತನಾಡಿಸಿ, ಪರಿಚಯ ಮಾಡಿಕೊಳ್ಳುವ ಆಸೆಯಾಗುತ್ತಿತ್ತು. ಅವರನ್ನು ಮಾತನಾಡಿಸಬೇಕೆಂದು ಮನಸ್ಸಿನಲ್ಲೇ ನಿರ್ಧರಿಸಿದೆ. ಹತ್ತಿರ ಬರುತ್ತಿದ್ದಂತೆ, ಆ ಗಂಡಸು ಬ್ರದರ್ ಜಾನ್ ಅಲ್ಲದೇ ಮತ್ತಾರೂ ಅಲ್ಲ ಎಂದು ತಿಳಿದು ಅತ್ಯಂತ ಸಂತೋಷವಾಯಿತು. ಮದರಾಸಿನಲ್ಲಿ ಅವರು ಮಾಡಿದ ಉಪಕಾರಕ್ಕೆ ಸಣ್ಣ ಪ್ರತ್ಯುಪಕಾರವನ್ನಾದರೂ ಮಾಡುವ ಅವಕಾಶ ದೊರೆಯುತ್ತದೆಂದು ಕನಸಿನಲ್ಲೂ ಅಂದು ಕೊಂಡಿರಲಿಲ್ಲ. ಬ್ರದರ್ ಜಾನರನ್ನು ಮಾತನಾಡಿಸಿದೆ. ಅವರಿಗೂ ನನ್ನ ಗುರುತು ತಕ್ಷಣವೇ ಸಿಕ್ಕಿತು. ನಮ್ಮ ಮನೆಗೆ ರಾತ್ರಿ ಭೋಜನಕ್ಕೆ ಆಹ್ವಾನಿಸಿದೆ. ಗಂಡ, ಹೆಂಡತಿ, ಮಗು ನಮ್ಮ ಮನೆಗೆ ಊಟಕ್ಕೆ ಬಂದರು. ಭೋಜನದ ನಂತರ ಕಾಡು ಹರಟೆ ಹೊಡೆಯುತ್ತಾ ಕುಳಿತೆವು. ವಿದ್ಯಾರ್ಥಿ ಜೀವನದಲ್ಲಿದ್ದ ಆಳ ನಂಬಿಕೆ ಗಳನ್ನು ಜಾನ್ ಇನ್ನೂ ಉಳಿಸಿಕೊಂಡಿದ್ದಾರೆಯೇ ? ಎಂದು ತಿಳಿದುಕೊಳ್ಳುವ ಕೆಟ್ಟ ಕುತೂಹಲವಾಯಿತು. ನೇರವಾಗಿ ಕೇಳುವ ಬದಲು ಪರೋಕ್ಷವಾಗಿ ಕೇಳಿದೆ,

''ಇಲ್ಲಿಯೂ ಪ್ರತಿ ಭಾನುವಾರ ಚರ್ಚಿಗೆ ಹೋಗುತ್ತೀರ ?''

''ಇಲ್ಲ, ನಾವು ಇಲ್ಲಿಯ ಚರ್ಚುಗಳಿಗೆ ಹೋಗು ವುದಿಲ್ಲ, ಇಲ್ಲಿ ಬಹಳ ಕಡಿಮೆ ಕ್ರಿಶ್ಚಿಯನ್ನರಿದ್ದಾರೆ, ಅವರ ಜೊತೆ ನಾವು ಬೆರೆಯುವುದಿಲ್ಲ.''

''ಹಾಗೆಂದರೇನು, ಇಲ್ಲಿಯ ಹೆಚ್ಚಿನವರು ಕ್ರಿಶ್ಚಿಯನ್ನರೇ ಅಲ್ಲವೇ ?''

## ಪುಸ್ತಕ ಪ್ರದರ್ಶನ ಉದ್ಘಾಟನೆ ಮತ್ತು ಪುಸ್ತಕ ಬಿಡುಗಡೆ ಸಮಾರಂಭ




ದಿನಾಂಕ ೩೦.೬.೨೦೦೫ರಂದು ಮೈಸೂರಿನಲ್ಲಿ ಪ್ರಾರಂಭವಾದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಡಾ|| ಅರವಿಂದ ಮಾಲಗತ್ತಿಯವರು ಉದ್ಘಾಟಿಸಿದರು. ಆ ಸಂದರ್ಭದಲ್ಲಿ ನವಕರ್ನಾಟಕ ಪ್ರಕಾಶನದ ನಾಲ್ಕು ಕೃತಿಗಳ – ಶ್ರೀ ಚಂಪಾ ಅವರ 'ಚಂಪಾದಕೀಯ', ಶ್ರೀ ನಾರಾಯಣ ಮಂಜೇಶ್ವರ ಅವರ 'ಕಾರಂತರೊಂದಿಗೆ ಕೆಲವು ವರ್ಷಗಳು', ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರ 'ಪ್ರಾಚೀನ ಭಾರತದಲ್ಲಿ ಚಿಕಿತ್ಸಾ ವಿಜ್ಞಾನ' ಮತ್ತು ಭಗವತ್ ಶರಣ ಉಪಾಧ್ಯಾಯರ 'ಭಾರತೀಯ ಬಹುಮುಖೀ ಸಂಸ್ಕೃತಿ' – ಅನಾವರಣವನ್ನು ಪತ್ರಕರ್ತ ಶ್ರೀ ರಾಜಶೇಖರ ಕೋಟಿ ನೆರವೇರಿಸಿದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀ ನಾರಾಯಣ ಮಂಜೇಶ್ವರ, ಡಾ|| ಅರವಿಂದ ಮಾಲಗತ್ತಿ, ಶ್ರೀ ರಾಜಶೇಖರ ಕೋಟಿ, ಪ್ರೊ|| ಚಂದ್ರಶೇಖರ ಪಾಟೀಲ ಮತ್ತು ಶ್ರೀ ಎನ್. ಕೆ. ಸತ್ಯನಾರಾಯಣ.

''ಅಲ್ಲ, ಇಲ್ಲಿಯ ಜನ ಮದುವೆಯಾಗದೇ ಒಟ್ಟಿಗೆ ವಾಸಿಸುತ್ತಾರೆ. ಇದು ಅತ್ಯಂತ ಹೇಯ ಕೃತ್ಯ. ಹೀಗೆ ಮಾಡುವವರು ಹೇಗೆ ತಾನೇ ಕ್ರಿಶ್ಚಿಯನ್ ಎನ್ನಿಸಿ ಕೊಳ್ಳುತ್ತಾರೆ. ಇಲ್ಲಿಯ ಧರ್ಮಾಧಿಕಾರಿಗಳು ಭಾನುವಾರ ಚರ್ಚಿನಲ್ಲಿ ಭಾಷಣ ಮಾಡುವಾಗ, ಇಂತಹ ಪಾಪ ಕೃತ್ಯಗಳ ಬಗ್ಗೆ ಚಕಾರ ಶಬ್ದ ಎತ್ತುವುದಿಲ್ಲ. ಅವರೆಲ್ಲಾ ಹೇಡಿಗಳು. ಕ್ರಿಶ್ಚಿಯಾನಿಟಿ ಒಂದು ಕ್ರಾಂತಿಕಾರಿ ಧರ್ಮ ಎಂಬುದು ಅವರಿಗೆ ತಿಳಿದೇ ಇಲ್ಲ, ಅಂತಹವರ ಪುರಾಣ ಕೇಳಲು ನಾವೇಕೆ ಹೋಗಬೇಕು ?''

''ಹಾಗಾದರೆ, ನೀವು ಸಾಮೂಹಿಕ ಪ್ರಾರ್ಥನೆಯನ್ನೇ ಮಾಡುವುದಿಲ್ಲವೇ ?''

''ಮಾಡುತ್ತೇವೆ, ನಮ್ಮ ಸಮಮನಸ್ಕರಾದ ಅನೇಕ ಯೂರೋಪಿಯನ್ನರು ಸುತ್ತಮುತ್ತ ಪಟ್ಟಣಗಳಲ್ಲಿದ್ದಾರೆ, ನಾವೆಲ್ಲಾ ತಿಂಗಳಿಗೊಮ್ಮೆ ಸೇರಿ ಪ್ರಾರ್ಥನೆ ಮಾಡುತ್ತೇವೆ.''

ಬ್ರದರ್ ಜಾನ್ ಸ್ವಲ್ಪವೂ ಬದಲಾಗಿರಲಿಲ್ಲ! ಇಷ್ಟು ಆಳ ನಂಬಿಕೆ ಇರುವವರಿಗೆ ಸಂಕಷ್ಟಗಳು ತಪ್ಪಿದ್ದಲ್ಲ ಎನಿಸಿತು. ನೈಜ ಕಳಕಳಿಯಿಂದ ಹೇಳಿದೆ,

''ಸಾಮಾಜಿಕ ಪದ್ಧತಿಗಳು ಶಾಶ್ವತವಲ್ಲ, ಕಾಲಕಾಲಕ್ಕೆ ಬದಲಾಗುತ್ತಾ ಹೋಗುವುದು ಸಹಜ. ನಾವು ಅದಕ್ಕೆ ಹೊಂದಿಕೊಳ್ಳಬೇಕೇ ಹೊರತು, ಸಮಾಜವೇ ನಮ್ಮ ನಂಬಿಕೆಯಂತೆ ನಡೆಯಬೇಕು ಎನ್ನುವುದು ಸಾಧುವಲ್ಲ. ಬದಲಾವಣೆಗಳನ್ನು ನಾವು ಒಪ್ಪಲಿ, ಬಿಡಲಿ, ಅವನ್ನು ತಪ್ಪಿಸಲು ಸಾಧ್ಯವಿಲ್ಲ. ಬದಲಾವಣೆಗಳಿಗೆ ಹೊಂದಿ ಕೊಳ್ಳುವುದೇ ನಮಗೆ ಕ್ಷೇಮ.''

''ಇಲ್ಲ ನಾವು ಇದನ್ನು ಒಪ್ಪಿಕೊಳ್ಳುವುದಿಲ್ಲ, ಈಗ ಪ್ರಪಂಚದಲ್ಲಿ ಆಗುತ್ತಿರುವುದೆಲ್ಲಾ ಬೈಬಲ್ಲಿನಲ್ಲಿ ಹೇಳಿರುವುದೇ ಆಗಿವೆ. ಅದರಂತೆ ಪ್ರಪಂಚ ವಿನಾಶದತ್ತ ಸಾಗುತ್ತಿದೆ. ಆದರೆ, ಇದಕ್ಕೆಲ್ಲಾ ಪರಿಹಾರ ದೊರೆಯುವ ದಿನಗಳು ಬರಲಿವೆ. ಈ ಆಶ್ವಾಸನೆಯನ್ನೂ ನಮಗೆ ಬೈಬಲ್ಲೇ ಕೊಡುತ್ತದೆ.''

ಮಡಿವಂತ ಮನೆಯಿಂದ ಬಂದಿರುವ ನನಗೂ ಅಮೆರಿಕಾ ಯುವ ಜನತೆಯ ಲೈಂಗಿಕ ಚಟುವಟಿಕೆಗಳು ಗೊಂದಲ ಉಂಟುಮಾಡಿದ್ದವು. ಆದರೆ, ಎಲ್ಲ ಸಮಾಜ ಗಳಿಗೆ ಅದರದೇ ಆದ ನೈತಿಕ ಮೌಲ್ಯಗಳೂ, ಜನ ತೆಗೆದುಕೊಳ್ಳಬಹುದಾದ ಸ್ವಾತಂತ್ರ್ಯದ ಇತಿಮಿತಿಗಳೂ ಇರುತ್ತವೆ. ನನ್ನ ಮನಸ್ಸಿಗೆ ಗೊಂದಲವಾಗುತ್ತದೆಂದ ಮಾತ್ರಕ್ಕೇ, ನಮ್ಮ ಪದ್ಧತಿಗಳೇ ಶ್ರೇಷ್ಠವೆಂದು ನಾನು ಭಾವಿಸಿರಲಿಲ್ಲ. ಅದನ್ನೇ ಅವರಿಗೆ ಹೇಳಿದೆ. ಬ್ರದರ್ ಜಾನ್ ಹೇಳಿದರು,

''ಭಗವಂತ ಲೈಂಗಿಕತೆಯನ್ನು ಸೃಷ್ಟಿಮಾಡಿದ್ದೇ ಸಂತಾನಕ್ಕಾಗಿ. ಆದ್ದರಿಂದ ಸಂತಾನಕ್ಕಲ್ಲದೇ ಬರಿಯ ದೇಹಸುಖಕ್ಕಾಗಿ ಸಂಭೋಗ ನಡೆಸುವುದು ದೊಡ್ಡ ಅಪರಾಧ. ನಾವು ಎಷ್ಟೇ ಮಕ್ಕಳು ಜನಿಸಿದರೂ ಸಂತಾನಹರಣ ಚಿಕಿತ್ಸೆ ಮಾಡಿಸಿಕೊಳ್ಳುವುದಿಲ್ಲ. ಈ

ದೇಶದಲ್ಲಿ ಭ್ರೂಣಹತ್ಯೆಯೂ ಪಾಪವೆನ್ನಿಸಿಕೊಳ್ಳುವುದಿಲ್ಲ.''

ಆತನ ಹೆಂಡತಿಯನ್ನು ಕಂಡು ಕನಿಕರವೆನ್ನಿಸಿತು. ನಮ್ಮಿಬ್ಬರದೂ ಸಂಬಂಧವಿಲ್ಲದ ತರಂಗಾಂತರಗಳು. ನಮ್ಮ ಯೋಚನೆಗಳಲ್ಲಿ ತಾಳಮೇಳಗಳಿರುವುದು ಅಸಾಧ್ಯವೆನಿಸಿತು. ಆದರೂ ವ್ಯರ್ಥ ಪ್ರಯತ್ನ ಮಾಡಿದೆ. ಸ್ವಲ್ಪ ಖಾರವಾಗಿಯೇ ಹೇಳಿದೆ,

''ನೀವು ಹೇಳುವ ಮಾತನ್ನು ಒಪ್ಪಲಾಗುವುದಿಲ್ಲ. ಮಿತ ಸಂತಾನ ಪ್ರಕೃತಿಗೆ ಹೊಂದಿಕೊಂಡಿಲ್ಲ ಎನ್ನುವುದನ್ನು ಒಪ್ಪಬಹುದು. ಪ್ರಕೃತಿಯಲ್ಲಿರುವ ಪ್ರಾಣಿಗಳು ಮಿತ ಸಂತಾನ ಅನುಸರಿಸುವುದಿಲ್ಲ, ನಿಜ. ಆದರೆ, ನಾವೂ ಅದೇ ತತ್ವವನ್ನು ಅನುಸರಿಸಿದರೆ, ಈಗಾಗಲೇ ಬರಿದಾಗಿರುವ ನಮ್ಮ ಪರಿಸರ ಪೂರ್ಣ ಬರಡಾಗುತ್ತದೆ. ಆಗ ನಮ್ಮೆಲ್ಲರ ಅಂತ್ಯ ಖಂಡಿತ. ಹಿಂದೆ, ಸಾಂಕ್ರಾಮಿಕ ರೋಗಗಳು ಜನಸಂಖ್ಯೆಯನ್ನು ಹತೋಟಿಯಲ್ಲಿಟ್ಟದ್ದವು. ವಿಜ್ಞಾನದ ಬೆಳವಣಿಗೆಯಿಂದಾಗಿ, ನಾವು ಈ ರೋಗಗಳನ್ನು ಯಶಸ್ವಿಯಾಗಿ ತಡೆಹಿಡಿದಿದ್ದೇವೆ. ಹೀಗೆ ನಾವು ರೋಗ ನಿವಾರಣೆ ಸಾಧಿಸಿರುವುದೂ ಪ್ರಕೃತಿಗೆ ವಿರೋಧವಾಗಿಯೇ ಇದೆ. ಒಂದು ವಿರೋಧಾಭಾಸ ಇನ್ನೊಂದು ವಿರೋಧಾಭಾಸವನ್ನು ಅಗತ್ಯವಾಗಿಸುತ್ತದೆ. ನಾವು ಮಿತ ಸಂತಾನ ಬೇಡವೆನ್ನಬೇಕಾದರೆ ವಿಜ್ಞಾನದ ಉಪಯೋಗವನ್ನು ಪಡೆಯಬಾರದು. ಜನ ಸಾಂಕ್ರಾಮಿಕ ರೋಗಗಳಿಂದ ಸಾಯಲು ಬಿಡಬೇಕು.'' ಆದರಿಂದ ಬ್ರದರ್ ಜಾನ್ ವಿಚಲಿತಗೊಳ್ಳಲಿಲ್ಲ. ಅವರು ಹೇಳಿದರು,

''ಹೌದು, ಕಾಯಿಲೆ ಬಂದಾಕ್ಷಣ ವೈದ್ಯರಲ್ಲಿಗೆ ಓಡುವುದು ಪ್ರಕೃತಿ ವಿರೋಧವಾಗಿದೆ, ಅದಕ್ಕಾಗಿಯೇ ನಾವು ಏನೇ ಕಾಯಿಲೆ ಬಂದರೂ ಡಾಕ್ಟರಲ್ಲಿಗೆ ಹೋಗುವುದಿಲ್ಲ.''

''ಅದು ಮೂರ್ಖತನವಾದೀತು, ಕಾಯಿಲೆ ಬಂದಾಗ ಏನು ಮಾಡುತ್ತೀರಿ ?''

''ನಾವು ದೇವರಲ್ಲಿ ಮೊರೆಯಿಡುತ್ತೇವೆ, ಆತ ಕರುಣಿಸುತ್ತಾನೆ.''

ನನಗೆ ಸುಸ್ತಾಯಿತು. ಮನೆಗೆ ಅತಿಥಿಗಳಾಗಿ ಬಂದವರ ಬಳಿ ಏನು ವಾದವೆಂದು ಬಾಯಿಗೆ ಬೀಗ ಜಡಿದೆ. ಅವರನ್ನು ಆದರದಿಂದ ಬೀಳ್ಕೊಟ್ಟೆ.

* * *

ನನ್ನ ಬಾಲ್ಯದ ಗೆಳೆಯನೊಬ್ಬನಿದ್ದಾನೆ. ಮೃದುಭಾಷಿ, ಹಸನ್ಮುಖಿ, ಜನಾನುರಾಗಿ, ಬಹುವೈದಿಕ, ಉಪನಿಷತ್ತುಗಳಲ್ಲಿ ಪಳಗಿದವನು, ಸಂಧ್ಯಾವಂದನೆ, ಜಪಗಳಲ್ಲಿ ವಿಶೇಷ ಆಸ್ಥೆ ಹೊಂದಿರುವವನು. ಇವನ ಮನೆಯಲ್ಲಿ ಸದಾ ಅತಿಥಿಗಳಿಗೆ ಆದರ, ಪುರಸ್ಕಾರ. ಹಬ್ಬದ ದಿನಗಳಲ್ಲಿ ಜನಜಂಗುಳಿಯೇ ನೆರೆದಿರುತ್ತದೆ. ಇದೆಲ್ಲಾ ಮೇಲ್ನೋಟಕ್ಕೆ ಮೆಚ್ಚಿಕೊಳ್ಳಬೇಕಾದ ಗುಣಗಳಂತೆ ಕಾಣಬಹುದು, ಆದರೆ ಅವರ ಮನೆಯ ಹೆಂಗಸರನ್ನು ನೋಡಿದರೆ ಅಯ್ಯೋ ಎನಿಸುತ್ತದೆ. ಸಣ್ಣ ಹಬ್ಬದ ದಿನವಾದರೂ, ಬಂದ ಅತಿಥಿಗಳಿಗೆಲ್ಲಾ ಊಟವಾಗುವ ತನಕ ಇವರಾರೂ ಊಟ ಮಾಡುವುದಿಲ್ಲ ಇವರ ದಿನದ ಮೊದಲ ಆಹಾರ ಸೇವನೆ ಸಂಜೆಯ ಬಳಿಕವೇ. ಇಂದಿನ ಕಾಲದಲ್ಲೂ ಅವರ ಮನೆಯ ಹರೆಯದ ಹೆಣ್ಣು ಮಕ್ಕಳು ಮೂರು ದಿನ ಹೊರಗೆ ಕೂರಬೇಕಾಗುತ್ತೆ. ನನ್ನ ಮಿತ್ರನನ್ನು ಏಕಿಷ್ಟು ಅತಿಥಿ ಸತ್ಕಾರ ಎಂದು ಕೇಳಿದರೆ, ನಮ್ಮ ಮನೆಯಲ್ಲಿ ವಾಸಿಸುವ ದೇವರಿಗೆ ತೃಪ್ತಿಯಾಗುತ್ತದೆ ಎನ್ನುತ್ತಾನೆ. ಅವನ ಸ್ವಭಾವಗಳು ''ಪರೋಪಕಾರಿ, ಮನೆಗೆ ಮಾತ್ರ ಮಾರಿ'' ಎನ್ನುವಂತೆ ನನಗೆ ಕಾಣಿಸುತ್ತವೆ.

# ಬೆತ್ತಲು



ಚಂದ್ರಗುತ್ತಿಯ ಬೋಳು ಗುಡ್ಡದ ಮೇಲೆ
ಬೆತ್ತಲಾದರು
ಹಿರಿ ಕಿರಿಯ ಹೆಣ್ಣುಗಳು
ದೇವರ ಹೆಸರಿನಲ್ಲಿ

ವಿಧಿಯಿಲ್ಲದೆ ಬೆತ್ತಲಾದರು
ಯೆಲ್ಲವ್ವ, ಶರಣವ್ವರು
ತಾವು ಮಾಡದ ತಪ್ಪಿಗೆ
ಪಾಪಿಗಳು ವಿಧಿಸಿದ ಶಿಕ್ಷೆಗೆ

ಬೆತ್ತಲಾದರು ವಿಶ್ವಸುಂದರಿಯರು
ನಟಿಯರು, ರೂಪದರ್ಶಿಗಳು
ಫ್ಯಾಷನ್, ಟಿ.ವಿ. ವನಿತೆಯರು
ಸೌಂದರ್ಯದ ಹೆಸರಿನಲ್ಲಿ

ಸಂಪ್ರದಾಯದ ಕೋಟೆಯಲಿ
ಪುರುಷಾಧಿಪತ್ಯದ ಕವಚದಲಿ
ಉಸಿರುಗಟ್ಟಿರುವ ಹೆಣ್ಣಿನಂತರಂಗವು
ಬೆತ್ತಲಾಗುವುದೆಂತು ?

'ಅತ್ಯಾಚಾರ ಪ್ರತಿಭಟಿಸಿ
ಮಣಿಪುರದ ಮಹಿಳೆಯರು ಬೆತ್ತಲಾದರು'
ಹೀಗೊಂದು ಸುದ್ದಿ
ದಿನಪತ್ರಿಕೆಯಲ್ಲಿ

ಬೆತ್ತಲಾಗುವ ಕ್ರಿಯೆ
ಇಂದು ನಿನ್ನೆಯದಲ್ಲ
ಬೆತ್ತಲಾಗಿದ್ದಳು ಅಕ್ಕ
ಶತಮಾನಗಳ ಹಿಂದೆ, ಪತಿಯ ಧಿಕ್ಕರಿಸಿ

ಬಿ. ಮೈತ್ರಿ
ಸ್ಕೂಲ್ ಆಫ್ ಗ್ರಾಜುಯೇಟ್ ಸ್ಟಡೀಸ್
ಶ್ರೀ ಭಗವಾನ್ ಮಹಾವೀರ ಜೈನ್ ಕಾಲೇಜು, ಬೆಂಗಳೂರು - ೫೬೦ ೦೦೨

ನನ್ನ ಮಿತ್ರನಿಗೆ ಹಿಂದೂ ಧರ್ಮದಲ್ಲಿ ಅಚಲ ಶ್ರದ್ಧೆ. ಇದರಿಂದಾಗಿ ಆಗಾಗ್ಗೆ ನಮ್ಮಿಬ್ಬರ ನಡುವೆ ವಾಗ್ಯುದ್ಧಗಳು ನಡೆಯುತ್ತಿರುತ್ತವೆ. ಒಮ್ಮೆ ಮನುವಿನ ಮಾತು ಬಂದಿತು. ನಾನು ಮನುವನ್ನು ಟೀಕಿಸುತ್ತಾ ಹೇಳಿದೆ,

''ನಿಮ್ಮ ಮನು ಹೆಂಗಸರಿಗೆ ಸ್ವಾತಂತ್ರ್ಯವನ್ನೇ ಕೊಟ್ಟಿಲ್ಲ.''

ನನ್ನ ಮಿತ್ರ ಹೇಳಿದ,

''ನೀನು ಮನು ಮಹರ್ಷಿಗಳನ್ನು ಅರ್ಥಮಾಡಿಕೊಂಡಿಲ್ಲ. ಆತ ಹೆಂಗಸರು ಸ್ವಾತಂತ್ರ್ಯಕ್ಕೆ ಅನರ್ಹರು ಎಂದಿಲ್ಲ. ಈಗ ನಿನ್ನನ್ನೇ ಕೇಳುತ್ತೇನೆ, ನಿನ್ನ ಮಗ ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗ ನಡುರಾತ್ರಿಯವರೆಗೆ ಗೆಳೆಯರೊಡನೆ ಓದಿ ಮನೆಸೇರುತ್ತಿದ್ದದ್ದು ನೆನಪಿದೆಯೇ ?''

''ಇದೆ.''

''ನೀನು ಅದನ್ನು ವಿರೋಧಿಸಿದ್ದೆಯಾ ?''

''ಇಲ್ಲ.''

''ನಿಮ್ಮ ಮಗಳೂ ಹೀಗೆಯೇ ಮಾಡಿದಳೇ ?''

''ಇಲ್ಲ.''

''ಮಾಡಿದ್ದರೆ ನಿನಗೇನನ್ನಿಸುತ್ತಿತ್ತು ?''

''ಆತಂಕವಾಗುತ್ತಿತ್ತು. ನಮ್ಮ ಸಮಾಜದಲ್ಲಿ ಹೆಣ್ಣು ಮಕ್ಕಳು ಒಂಟಿಯಾಗಿ ನಡುರಾತ್ರೆ ಅಡ್ಡಾಡಬಾರದು. ಯಾರಾದರೂ ಕೆಟ್ಟ ಜನ ಕಾಡಬಹುದು. ಅಂತಹ ಪರಿಸ್ಥಿತಿ ಇಲ್ಲದಿದ್ದರೆ, ನನ್ನ ಮಗಳಿಗೂ ಸ್ವಾತಂತ್ರ್ಯ ಕೊಡಲು ಹಿಂಜರಿಯುತ್ತಿರಲಿಲ್ಲ.''

''ನಾನು ಏಕೆ ಸ್ವಾತಂತ್ರ್ಯ ಕೊಡಲಿಲ್ಲವೆಂದು ಕೇಳಲಿಲ್ಲ, ಸ್ವಾತಂತ್ರ್ಯ ಅನುಭವಿಸಿದಳೇ ಎಂದು ಮಾತ್ರ ಕೇಳಿದೆ.''

''ಹಾಗೆ ಕೇಳಿದರೆ, ಸ್ವಾತಂತ್ರ್ಯ ಅನುಭವಿಸಲಿಲ್ಲ ಎಂದೇ ಹೇಳಬೇಕಾಗುತ್ತದೆ.''

''ಕೆಲವು ಸಲ ನೀನು ಊರಿನಿಂದ ಬರುವಾಗ ರೈಲು ತಡವಾಗಿ ಮಧ್ಯರಾತ್ರಿ ಬೆಂಗಳೂರು ತಲುಪಿದ್ದುಂಟೋ ?''

''ಉಂಟು.''

''ಆಗ ಯಾರಾದರೂ ನಿನ್ನನ್ನು ಮನೆಗೆ ಕರೆದೊಯ್ಯಲು ರೈಲ್ವೇ ಸ್ಟೇಷನ್ನಿಗೆ ಬಂದಿರುತ್ತಾರ ?''

''ಇಲ್ಲ.''

''ನಿನ್ನ ಹೆಂಡತಿ ಒಂಟಿಯಾಗಿ ಬರುತ್ತಿದ್ದರೆ, ಅವಳನ್ನು ಕರೆತರಲು ನೀನು ಸ್ಟೇಷನ್ನಿಗೆ ಹೋಗುತ್ತೀಯಾ ?''

''ಹೋಗುತ್ತೇನೆ, ಏಕೆಂದರೆ, ಅವಳು ಒಂಟಿಯಾಗಿ ಬರುವುದೂ ಕ್ಷೇಮಕರವಲ್ಲ.''

''ನಾನು ಪುನಃ ಕಾರಣ ಕೇಳಲಿಲ್ಲ, ಪರಿಸ್ಥಿತಿ ಹೇಗೆಂದು ಮಾತ್ರ ಕೇಳಿದೆ. ನಿನ್ನ ತಾಯಿ ಬಂದರೆ ಏನು ಮಾಡುವೆ ?''

''ಅವರನ್ನೂ ಕರೆತರುತ್ತೇನೆ.''

''ಇದನ್ನೇ ಮನು ಹೇಳಿರುವುದು. ಹೆಣ್ಣಿಗೆ ಬಾಲ್ಯದಲ್ಲಿ ತಂದೆಯ, ಯೌವನದಲ್ಲಿ ಗಂಡನ, ವೃದ್ಧಾಪ್ಯದಲ್ಲಿ ಮಗನ ಸಹಾಯದ ಅಗತ್ಯವಿದೆ, ಅವಳಿಗೆ ಸ್ವತಂತ್ರಳಾಗಿ ನಿಭಾಯಿಸುವುದು ಕಷ್ಟಕರ ಎಂದಷ್ಟೇ ಹೇಳಿದ್ದಾನೆ.''

''ಇದು ನಮ್ಮ ಸಮಾಜದಲ್ಲಿ ಕಳ್ಳರು, ಅಸಭ್ಯರು ಇರುವುದರ ಪರಿಣಾಮವಷ್ಟೆ, ಹೆಂಗಸರಿಗೆ ಸ್ವಾತಂತ್ರ್ಯವಿಲ್ಲ ಎನ್ನುವುದನ್ನು ಹೀಗೆ ಸಮರ್ಥಿಸಬಹುದು.''

''ನೀನು ಮತ್ತೆ ಅದೇ ತಪ್ಪು ಮಾಡುತ್ತಿರುವೆ. ಮನುವಿನ ಕಾಲದಲ್ಲಿ ಇಂದಿನ ಪರಿಸ್ಥಿತಿಯೇ ಇದ್ದಿತು. ಸಹಸ್ರಾರು ವರ್ಷಗಳ ನಂತರವೂ ಇದೇ ಪರಿಸ್ಥಿತಿ ಇರುತ್ತದೆ. ಆದ್ದರಿಂದ ಸರ್ವಕಾಲದಲ್ಲೂ ಹೆಣ್ಣು ಗಂಡಿನ ರಕ್ಷಣೆಯಲ್ಲೇ ಇರಬೇಕಾಗುತ್ತದೆ. ಇದನ್ನೇ ಮನು ಹೇಳಿರುವುದು. ಅದರಲ್ಲಿ ಯಾವ ತಪ್ಪೂ ಇಲ್ಲ.''

ನನ್ನ ಮಿತ್ರ ಜಾಣ ಎನ್ನುವುದರಲ್ಲಿ ಸಂದೇಹವಿಲ್ಲ. ಆದರೂ ಮನು ಹೆಂಗಸರನ್ನು ಕೀಳಾಗಿ ಕಂಡಿದ್ದಾನೆಂದೇ ನನ್ನ ಅಭಿಪ್ರಾಯ. ''ನ ಸ್ತ್ರೀ ಸ್ವಾತಂತ್ರ್ಯಮ್ ಅರ್ಹತಿ'' ಮಾತ್ರವಲ್ಲದೇ ಬೇರೆಡೆಯೂ ಆತ ಹೆಂಗಸರನ್ನು ಅತ್ಯಂತ ತುಚ್ಛವಾಗಿ ಕಂಡಿದ್ದಾನೆ. ಈ ಸಂದರ್ಭಗಳನ್ನೆಲ್ಲಾ ಹುಡುಕಿ ನನ್ನ ಮಿತ್ರನನ್ನು ಮತ್ತೆ ವಾದಕ್ಕಿಳಿಸಬೇಕು. ಅವನನ್ನು ಹೇಗಾದರೂ ಬಗ್ಗಿಸಲೇಬೇಕೆಂದು ಹೇಳಿದೆ,

''ನಿಮ್ಮ ಮನು ಅದೇ ತಪ್ಪು ಮಾಡಿದ್ದರೂ ಬೇರೆ ಬೇರೆ ವರ್ಣದವರಿಗೆ ಬೇರೆ ಬೇರೆ ಶಿಕ್ಷೆ ವಿಧಿಸಿದ್ದಾನಲ್ಲಾ, ಅದು ನ್ಯಾಯವೇ ?''

ನನ್ನ ಮಿತ್ರ ಏನಾದರೂ ಮನುವನ್ನು ಬಿಟ್ಟುಕೊಡುವುದಿಲ್ಲ ಅವನೂ ಹೇಳಿದ,

''ಚಿಕ್ಕ ಮಕ್ಕಳು ತಪ್ಪು ಮಾಡಿದರೆ ಅವರನ್ನು ಗದರಿಸುತ್ತೇವೆ, ಅದೇ ಹರೆಯದ ಮಕ್ಕಳು ತಪ್ಪು ಮಾಡಿದರೆ, ಅವರ ತಪ್ಪನ್ನು ತೋರಿಸಿ ಬುದ್ಧಿ ಹೇಳುತ್ತೇವೆಯೇ ಹೊರತು ಅವರನ್ನು ಗಟ್ಟಿಯಾಗಿ ಬಯ್ಯುವುದಿಲ್ಲ. ಮಕ್ಕಳಿಗೆ ಬುದ್ಧಿ ಬರಬೇಕಾದರೆ ಕೆಲಮಟ್ಟಿಗೆ ಅವರನ್ನು ಶಿಸ್ತಿಗೆ ಒಳಪಡಿಸುವುದು ಅನಿವಾರ್ಯ. ಇಂತಹ ಶಿಸ್ತಿನಿಂದ ಬೆಳೆದಾದ ಮೇಲೆ ಅವರನ್ನು ಪುನಃ ಗದರಿಸಬೇಕಾಗುವುದಿಲ್ಲ. ಶಿಸ್ತಿನಿಂದ ಬೆಳೆದ ಅವರ ಮನಸ್ಸು ಸಹಜವಾಗಿಯೇ ನಯನಾಜೂಕುಗಳನ್ನು ಪಡೆದು, ಅಪ್ಪಿತಪ್ಪಿ ತಪ್ಪು ಮಾಡಿದರೂ, ಸುಲಭದಲ್ಲಿ ತಪ್ಪನ್ನು ಅರ್ಥ ಮಾಡಿಕೊಳ್ಳಲು ಹಾಗೂ ತಿದ್ದಿಕೊಳ್ಳಲು ಕಲಿತಿರುತ್ತವೆ. ಇದೇ ರೀತಿ ಬೇರೆ ಬೇರೆ ವರ್ಣಗಳಿಗೆ ಸೇರಿದವರಲ್ಲಿ ಸಾಂಸ್ಕೃತಿಕ ಬೆಳವಣಿಗೆಯ ಮಟ್ಟ ಒಂದೇ ಆಗಿಲ್ಲದಿರುವುದರಿಂದ, ಅವರಿಗೆ ಕೊಡಬೇಕಾದ ಶಿಕ್ಷೆಯು ಒಂದೇ ಆಗಿರುವುದಿಲ್ಲ. ಮನುವಿನ ಕಾಲಕ್ಕೆ ಮನು ನಿರ್ದೇಶಿಸಿದ ನಿಯಮಗಳು ಸಮಾಜ ಸುಧಾರಕ ಎನ್ನುವುದರಲ್ಲಿ ಸಂದೇಹವಿಲ್ಲ.''

''ಆದರೂ ಮನು ವರ್ಣಾಶ್ರಮ ಧರ್ಮವನ್ನು ಪ್ರತಿಪಾದಿಸಿದ. ಇದು ನಮ್ಮ ದೇಶಕ್ಕೇ ತಗುಲಿದ ಶಾಪ. ಇನ್ನೂ ಹೇಳಬೇಕೆಂದರೆ, ವರ್ಣ ನೀತಿ ಪ್ರಪಂಚಕ್ಕೇ ತಗುಲಿರುವ ಕಾಯಿಲೆ. ಜ್ಯೂಗಳೆಂದೋ, ಕರಿಯರೆಂದೋ ದಬ್ಬಾಳಿಕೆ ನಡೆಸುವುದು ಅವ್ಯಾಹತವಾಗಿ ನಡೆದುಬಂದಿದೆ. ಕರಿಯರಾದರೆ, ನಿಜವಾಗಿಯೂ ಬೇರೆ ವರ್ಣದವರು. ಅಂದಮಾತ್ರಕ್ಕೆ ಅವರು ತುಚ್ಛರಾಗಬೇಕಿಲ್ಲ. ಆದರೂ ವರ್ಣ ಬೇರೆಯಾಗಿ ಒಡೆದು ಕಾಣಿಸುತ್ತದೆ. ನಮ್ಮ ದೇಶದಲ್ಲಿಯಾದರೋ, ವರ್ಣವೂ ಬೇರೆಯಲ್ಲ. ಆದರೂ ನಾವು ಜಾತಿ ಪದ್ಧತಿಯನ್ನು ಅನೂಚಾನವಾಗಿ ಪಾಲಿಸಿಕೊಂಡು ಬಂದಿದ್ದೇವೆ. ಇದರಿಂದ ನಮಗೆಲ್ಲ ಬಹಳ ಖೇದವಾಗಬೇಕು, ನಾಚಿಕೆಯಿಂದ ತಲೆ ತಗ್ಗಿಸಬೇಕು.''

''ನೀನು ಹೇಳುವುದರಲ್ಲಿ ಸತ್ಯಾಂಶವಿದೆಯೆಂದು ಒಪ್ಪಿಕೊಳ್ಳುತ್ತೇನೆ. ಆದರೆ, ಅದನ್ನು ಮನುವಿನ ಮೇಲೋ, ಹಿಂದುಗಳ ಮೇಲೋ ವಕ್ರಿಸುವುದು ಸಮವಲ್ಲ.''

''ಅದು ಹೇಗೆ ಅಲ್ಲ ?''

''ಹೇಗೆಂದರೆ ಹೀಗೆ. ಎಲ್ಲ ಕಾಲದಲ್ಲೂ, ಜನಗಳಲ್ಲಿ ಜಾಣರು, ದಡ್ಡರು ಇರುತ್ತಾರೆ. ನೀತಿವಂತರೂ, ನೀತಿ ಹೀನರೂ ಇರುತ್ತಾರೆ. ಬಲವುಳ್ಳವರೂ, ಅಶಕ್ತರೂ ಇರುತ್ತಾರೆ. ಇಂತಹ ಮೂಲ ಸ್ವಭಾವಗಳಲ್ಲಿ ಭಿನ್ನವಾದ ಸಹಜ ಗುಂಪುಗಳಿಗೆ ನಮ್ಮ ಹಿಂದಿನವರು ಹೆಸರುಗಳನ್ನು ಕೊಟ್ಟರು. ಯಾರು ವಿದ್ಯೆಯಿಂದಲೇ ಬದುಕುತ್ತಾರೋ ಅವರು ಬ್ರಾಹ್ಮಣರು. ಯಾರು ತೋಳ ಬಲದಿಂದ ಬದುಕುತ್ತಾರೋ ಅವರು ಕ್ಷತ್ರಿಯರು. ಯಾರು ವ್ಯಾಪಾರ, ವ್ಯವಸಾಯದಿಂದ ಬದುಕುತ್ತಾರೋ ಅವರು ವೈಶ್ಯರು, ಯಾರು ದೇಹ ಪರಿಶ್ರಮದಿಂದ ಬದುಕುತ್ತಾರೋ ಅವರು ಶೂದ್ರರು.''

''ಆದರೆ ಇವೆಲ್ಲ ಗುಣಗಳನ್ನೂ ನಾವು ಹುಟ್ಟಿನಿಂದಲೇ ಆರೋಪಿಸುತ್ತೇವಲ್ಲಾ ?''

''ಅದು ಇಂದಿನವರು ಮಾಡಿರುವ ತಪ್ಪು. ಅದಕ್ಕಾಗಿ ಹಿಂದೂ ಧರ್ಮವನ್ನೇ ಏಕೆ ದೂಷಿಸಬೇಕು ? ಜಾತಿ ಜನ್ಮದಿಂದ ಬರುವುದಿಲ್ಲ, ಅದು ಕರ್ಮದಿಂದ ಬರುವುದು.''

''ಇದೆಲ್ಲಾ ಬರಿಯ ಒಣ ಸಿದ್ಧಾಂತ. ರೂಢಿಯಲ್ಲಿರುವ ಜಾತಿ ಪದ್ಧತಿಗೆ ಹುಟ್ಟೇ ಆಧಾರವಾಗಿದೆ. ಆದ್ದರಿಂದ ನಾವು ಪಾಲಿಸುತ್ತಿರುವ ಪದ್ಧತಿ ಅನಿಷ್ಟವೆಂದೇ ಹೇಳಬೇಕು.''

''ಈಗ ಯಾರೋ ಮಾಡುವ ತಪ್ಪನ್ನು ನಮ್ಮ ಋಷಿ, ಮುನಿಗಳ ಮೇಲೆ ಆರೋಪಿಸಬೇಡ.''

ಇವನ ಜೊತೆ ವಾದಿಸಿ ಪ್ರಯೋಜನವಿಲ್ಲ ಎಂದು ಬಾಯ್ಮುಚ್ಚಿಕೊಂಡೆ.

* * *

ಕೆಲ ವರ್ಷಗಳ ಹಿಂದೆ ಸಮ್ಮೇಳನವೊಂದರಲ್ಲಿ ವೈಜ್ಞಾನಿಕ ಸಂಶೋಧನೆಯಲ್ಲಿ ತೊಡಗಿದ್ದ ಉತ್ತರ ಇಂಡಿಯಾದ ಮುಸ್ಲಿಮ್ ಯುವತಿಯೋರ್ವಳ ಭೇಟಿಯಾಯಿತು. ಐದಡಿ ಎರಡಂಗುಲ ಎತ್ತರ, ಗೌರವರ್ಣ, ದುಂಡು ಮುಖದ ಹರೆಯದ ಯುವತಿ ತಲೆ ಹೊದಿಕೆ ಧರಿಸುತ್ತಿದ್ದಳು. ವಿಜ್ಞಾನಿಗಳಾದ ಇತರ ಕೆಲವು ಮುಸ್ಲಿಮ್ ಮಹಿಳೆಯರ ಪರಿಚಯ ನನಗಿದೆ. ಈ ಮಹಿಳೆಯರಲ್ಲಿ ಮುಸ್ಲಿಮರ ಯಾವ ಗುರುತೂ ಕಾಣುವುದಿಲ್ಲ. ಅವರಿಗೆ ಇಸ್ಲಾಂ ಧರ್ಮದಲ್ಲಿ ಆಳ ನಂಬಿಕೆಯಿರುವುದೂ ನನ್ನ ಗಮನಕ್ಕೆ ಬಂದಿಲ್ಲ. ಆದ್ದರಿಂದಲೇ, ತಲೆ ಪೋಷಾಕನ್ನು ಧರಿಸಿ, ಗಂಭೀರವಾಗಿರುತ್ತಿದ್ದ ಯುವತಿಯನ್ನು ಮಾತನಾಡಿಸಿ ಪರಿಚಯ ಮಾಡಿಕೊಳ್ಳಬೇಕೆನ್ನಿಸಿತು. ನನ್ನ ಪರಿಚಯ ಹೇಳಿಕೊಂಡು ಹಲವಾರು ಘಂಟೆಗಳು ಅವರೊಡನೆ ಹರಟುತ್ತಾ ಕಾಲ ಕಳೆದೆ. ಮಾತಿನ ಭರಾಟೆಯಲ್ಲಿ ''ಮುಸ್ಲಿಮ್ ಯುವತಿಯಾಗಿ ಬಾಳುವುದು ನಿಮಗೆ

ಕಷ್ಟವೇ ?'' ಎಂದು ಕೇಳಿದೆ. ನನ್ನ ಪ್ರಶ್ನೆ ಅವರಿಗೆ ವಿಚಿತ್ರವೆನಿಸಿತು.

''ಮಹಿಳೆಯರಿಗೆ ಇಸ್ಲಾಮ್ ಅತಿ ಹೆಚ್ಚಿನ ಸ್ಥಾನ ಕೊಟ್ಟಿದೆ. ಮುಸ್ಲಿಮ್ ಮಹಿಳೆಯಾಗಿ ಬಾಳುವುದು ಕಷ್ಟವಿರಬಹುದೆಂಬ ಭಾವನೆ ನಿಮಗೆ ಹೇಗೆ ಬಂದಿತು ?''

''ನಿಮ್ಮ ಪೋಷಾಕು ನಿಮಗೆ ಹಿಂಸೆ ಕೊಡುವುದಿಲ್ಲವೇ ? ಇದು ನಿಮ್ಮ ಸ್ವಾತಂತ್ರ್ಯದ ಕಡಿತ ಎನ್ನಿಸುವುದಿಲ್ಲವೇ ?''

''ಇಲ್ಲ ಸಮಾಜದಲ್ಲಿ ಮರ್ಯಾದೆಯಾಗಿ ಬಾಳುವುದು ಸ್ವಾತಂತ್ರ್ಯದ ಹರಣ ಹೇಗಾಗುತ್ತದೆ ? ಮೈಮುಚ್ಚದಂತೆ ಬಟ್ಟೆ ಧರಿಸುವ ಹಕ್ಕೇ ಸ್ವಾತಂತ್ರ್ಯದ ಅಭಿವ್ಯಕ್ತಿಯೇ ?''

''ಅಲ್ಲ ಎಂದು ನಾನು ಒಪ್ಪಿಕೊಳ್ಳುತ್ತೇನೆ, ಆದರೂ ಮುಸ್ಲಿಮರ ಪೋಷಾಕು ನನಗೆ ಹಿಂಸೆಯೇನೋ ಅನ್ನಿಸುತ್ತದೆ.''

''ಹಿಂಸೆಯೇನೂ ಇಲ್ಲ, ಇದೆಲ್ಲಾ ನಾವು ಮಾಡಿಕೊಂಡಿರುವ ರೂಢಿಯಷ್ಟೆ. ನಮ್ಮಲ್ಲಿ ಬಾಲ್ಯದಿಂದಲೇ ಮೈಮುಚ್ಚುವಂತೆ ಬಟ್ಟೆ ಧರಿಸುವುದನ್ನೂ, ಗೌರವದಿಂದ ನಡೆದುಕೊಳ್ಳುವುದನ್ನೂ ಕಲಿಸಿರುತ್ತಾರೆ. ಇದಕ್ಕೂ ವೈಯಕ್ತಿಕ ಸ್ವಾತಂತ್ರ್ಯಕ್ಕೂ ಸಂಬಂಧವಿಲ್ಲ.''

ಹೀಗೆಯೇ ಮಾತನಾಡುತ್ತಾ ಮತ್ತೊಮ್ಮೆ ಮುಸ್ಲಿಮ್ ಯುವತಿಯರ ಸ್ವಾತಂತ್ರ್ಯದ ಕಡೆಗೇ ಮಾತು ತಿರುಗಿತು. ಸಂದರ್ಭ ಸೌದಿ ಅರೇಬಿಯಾದಲ್ಲಿ ಮಹಿಳೆಯರಿಗೆ ಕಾರು ನಡೆಸುವ ಹಕ್ಕಿಲ್ಲ ಎನ್ನುವ ವಿಷಯ.

''ಇದು ಮಹಿಳೆಯರಿಗೆ ಸ್ವಾತಂತ್ರ್ಯ ಕೊಡದಿರುವ ಪುರುಷರ ಕರಾಮತ್ತು ಎಂದಾದರೂ ಒಪ್ಪುತ್ತೀರಲ್ಲ, ಮಹಿಳೆಯರಿಗೂ ಕಾರು ನಡೆಸುವ ಹಂಬಲ ಬಹಳ ಇರಬಹುದು. ಅವರ ಇಂತಹ ಹಂಬಲಗಳಿಗೆ ಅಡ್ಡಿಯೇಕೆ ?'' ಎಂದು ವಾದಿಸಿದೆ.

''ನೀವು ಹೇಳುವ ಮಾತು ಹಾಸ್ಯಾಸ್ಪದವಾಗಿದೆ. ಪಶ್ಚಿಮದ ಜನರ ಮಾತಿಗೆ ನೀವು ಮರುಳಾಗಿದ್ದೀರಿ. ಅವರೂ ಹೀಗೆಯೇ ಹೇಳುತ್ತಾರೆ. ಯಾವುದು ಸ್ವಾತಂತ್ರ್ಯ ಎನ್ನುವುದನ್ನು ನಿರ್ಧರಿಸುವುದು ಪಾಶ್ಚಿಮಾತ್ಯರ ಹಕ್ಕಲ್ಲ, ನಿಮ್ಮ ಹಕ್ಕೂ ಅಲ್ಲ. ಪಾಶ್ಚಿಮಾತ್ಯರ ಪ್ರಕಾರ, ಬಾರಿನಲ್ಲಿ ಪರಪುರುಷರಿಗೆ ಹೆಂಡ ಹಂಚುವ ಹೆಂಗಸರು ಸ್ವಾತಂತ್ರ್ಯ ಹೊಂದಿದ್ದಾರೆ. ಅದೇ ಮಕ್ಕಳಿಗೂ, ಗಂಡನಿಗೂ ಅಡುಗೆ ಮಾಡಿ ಬಡಿಸುವ ಹೆಂಗಸು ಸ್ವಾತಂತ್ರ್ಯ ಕಳೆದುಕೊಂಡಿದ್ದಾಳೆ. ಇದು ಯಾವ ಬಗೆಯ ತರ್ಕ ?''

''ಈ ಮಾತನ್ನೇನೋ ಒಪ್ಪಬಹುದು. ಆದರೂ, ಸಣ್ಣ ಸಣ್ಣ ವಿಷಯಗಳಲ್ಲೂ ಹೆಂಗಸು ಏನನ್ನು ಮಾಡಬಹುದು, ಏನನ್ನು ಮಾಡಬಾರದು ಎಂಬ ತಾಕೀತನ್ನು ಗಂಡಸರು ಮಾಡುತ್ತಿದ್ದರೆ, ಹೆಂಗಸರು ರೇಗದಿದ್ದರೆ ಹೇಗೆ ?'' ಎಂದು ನನ್ನನ್ನು ನಾನು ಸಮರ್ಥಿಸಿಕೊಳ್ಳುವ ಪ್ರಯತ್ನ ಮಾಡಿದೆ. ಅವರು ಮುಂದುವರೆದು ಹೇಳಿದರು,

''ಹೆಂಗಸರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಕೊರಾನಿನಲ್ಲೇ ಹೇಳಿದೆ. ಅದರಂತೆ ನಿಜವಾದ ಮುಸ್ಲಿಮನು ನಡೆದುಕೊಳ್ಳಬೇಕು.

25 ಸಾವಿರ ತೆಗೆದರೆ 25 ರೂ. ತೆರಿಗೆ

ಸ್ವಾಮಿ... ನಿಂ ಬ್ಯಾಂಕ್ ಅಕೌಂಟ್ ನಿಂದ ಇಪ್ಪತ್ತೈದು ಸಾವಿರ ರೂ. ತೆಗೆದಿದ್ದೀನೆ... ಇಪ್ಪತ್ತೈದು ರೂ. ತೆರಿಗೆ ತಗೊಳ್ಳಿ...!!

ಹಾಗಾದರೆ, ಹೆಂಗಸರ ಸ್ವಾತಂತ್ರ್ಯಕ್ಕೆ, ಹಕ್ಕಿಗೆ ಯಾವ ಚ್ಯುತಿಯೂ ಬರುವುದಿಲ್ಲ. ಕೆಲವು ಗಂಡಸರು, ಇಸ್ಲಾಮೀಯರಿರಬಹುದು, ಹಿಂದೂಗಳಿರಬಹುದು, ಸ್ವಾರ್ಥಿಗಳಾಗಿರುತ್ತಾರೆ. ಈ ದುಷ್ಟ ಗಂಡಸರು ಮಾಡುವ ತಪ್ಪನ್ನು ಇಸ್ಲಾಮಿನ ಮೇಲೆ ಹೊರಿಸಬಾರದು.''

ಅದನ್ನು ಒಪ್ಪಿಕೊಳ್ಳಬಹುದು ಎಂದು ಭಾವಿಸಿ, ''ಅದಲ್ಲದೇ, ನನ್ನ ಮಟ್ಟಿಗೆ ಹೇಳುವುದಾದರೆ ಮಹಿಳೆಯರಿಗೆ ಯಾವ ಧರ್ಮದಲ್ಲೂ ಸ್ವಾತಂತ್ರ್ಯವಿರದಿದ್ದಾಗ, ಪ್ರವಾದಿ ಮಹಮ್ಮದರು ಅವರಿಗೆ ಉನ್ನತ ಸ್ಥಾನ ಕಲ್ಪಿಸಿಕೊಟ್ಟು, ಅವರಿಗೂ ಆಸ್ತಿಯಲ್ಲಿ ಪಾಲು ದೊರೆಯುವಂತೆ ಮಾಡಿದರು ಎಂದು ನಾನು ತಿಳಿದಿದ್ದೇನೆ. ಆದರೂ, ಪ್ರವಾದಿಗಳು ಹೇಳಿದ್ದೇ ಕಡೆಯ ಮಾತು, ಅದನ್ನು ಎಂದೂ ಮೀರಬಾರದು ಎನ್ನುವುದನ್ನು ನನ್ನ ಮನಸ್ಸು ಒಪ್ಪಿಕೊಳ್ಳುವುದಿಲ್ಲ''

''ಅದಕ್ಕೆ ನಿಮಗೆ ಕೊರಾನಿನ ಪೂರ್ಣ ಪರಿಚಯ ಇಲ್ಲದಿರುವುದೇ ಕಾರಣ. ಹಾಗೆ ಜನರ ಮನಸ್ಸಿಗೆ ಬಂದ ಹಾಗೆ ನಿಯಮಗಳನ್ನು ಬದಲಿಸುತ್ತಾ ಹೋಗಲು ಅವಕಾಶ ಕೊಟ್ಟರೆ, ಪಾಶ್ಚಿಮಾತ್ಯ ಸಮಾಜದಂತೆ, ನಮ್ಮ ಎಲ್ಲ ನೈತಿಕ ಮೌಲ್ಯಗಳೂ ಕುಸಿದುಬೀಳುತ್ತವೆ. ಯಾರ ವಿಚಾರ ಸರಿಯೆಂದು ಯಾರು ಹೇಳಬೇಕು ? ಪ್ರವಾದಿಗಳು ದೇವರಿಂದಲೇ ನೇರ ಅನುಜ್ಞೆ ಪಡೆದು ನಮಗೆಲ್ಲಾ ನಡೆದುಕೊಳ್ಳಬೇಕಾದ ದಾರಿ ತೋರಿಸಿದ್ದಾರೆ. ಅದರಲ್ಲಿ ಬದಲಾವಣೆ ಸಾಧ್ಯವೇ ಇಲ್ಲ. ಹಾಗೆ ಬದಲಾವಣೆ ಮಾಡಿದರೆ, ಅದರಿಂದ ಹಾನಿಯಾಗುವುದು ಖಚಿತ.''

ಈ ವಾದವನ್ನು ಮುಂದುವರೆಸಿ ಪ್ರಯೋಜನವಿಲ್ಲವೆಂದು, ಮಾತಿನ ಧಾಟಿಯನ್ನು ಬದಲಿಸಿದೆ. ಮಧ್ಯ ಏಷ್ಯಾ ದೇಶಗಳ ಪರಿಸ್ಥಿತಿಯ ಬಗ್ಗೆ ಚರ್ಚಿಸಲು ಪ್ರಾರಂಭಿಸಿದೆವು. ಆಫ್ಘಾನಿಸ್ಥಾನದಲ್ಲಿ ಬುದ್ಧನ ಪ್ರತಿಮೆಯನ್ನು ಹಾಳುಗೆಡವಿದ ವಿಷಯ ಬಂದಿತು. ನಾನು ಹೇಳಿದೆ,

''ಅಷ್ಟು ದೊಡ್ಡ ಪ್ರತಿಮೆ ಅಲ್ಲಿದ್ದದ್ದು ಗಮನಿಸಿದರೆ, ಇಲ್ಲಿಯ ಬೌದ್ಧರು ಅಲ್ಲಿ ಹೋಗಿ ಪ್ರತಿಮೆ ನಿರ್ಮಿಸಿದರು ಎನ್ನಿಸುವುದಿಲ್ಲ. ಬಹುಶಃ ಆಫ್ಘನ್ನರಲ್ಲಿ ಅನೇಕರು ಬೌದ್ಧರಾಗಿದ್ದರು. ಅವರು ಶ್ರದ್ಧೆಯಿಂದ ಪ್ರತಿಮೆ ನಿರ್ಮಿಸಿಕೊಂಡಿದ್ದಂತೆ ತೋರುತ್ತದೆ. ಆದ್ದರಿಂದ ಅಲ್ಲಿದ್ದ ಪ್ರತಿಮೆ ಅವರ ಪೂರ್ವಜರ ಬದುಕಿನ, ಆದರ್ಶಗಳ ದ್ಯೋತಕ, ಸಂಸ್ಕೃತಿಯ ಕುರುಹು ಎಂದೇ ತಿಳಿಯಬೇಕು. ಅದನ್ನು ನಾಶಪಡಿಸಿದ್ದು ಅನ್ಯಾಯವಲ್ಲವೇ ?'' ಎಂದು ಕೇಳಿದೆ.

''ಇಲ್ಲ, ಖಂಡಿತ ಅಲ್ಲ, ಬುದ್ಧ ಬದುಕಿದ್ದಿದ್ದರೆ ಸಂತೋಷಪಡುತ್ತಿದ್ದ. ಇಸ್ಲಾಂ ಧರ್ಮ ಪ್ರವಾದಿ ಮೊಹಮ್ಮದರಿಗಿಂತ ಹಿಂದೆ ಆಗಿಹೋದ ಪ್ರವಾದಿಗಳನ್ನೂ ಗೌರವಿಸುತ್ತದೆ. ಬುದ್ಧನ ಹೆಸರು ಕೊರಾನಿನಲ್ಲಿ ಇಲ್ಲದಿರಬಹುದು, ಆದರೆ, ಮೋಸೆಸ್, ಜೀಸಸ್ ಮುಂತಾದವರನ್ನು ಕೊರಾನು ಗೌರವಿಸಿದೆ. ಕೊರಾನಿನಲ್ಲಿ ಹಿಂದೆ ಅನೇಕ ಜನ ಪ್ರವಾದಿಗಳು ಬಂದುಹೋಗಿದ್ದಾರೆ, ಅವರನ್ನೆಲ್ಲಾ ನಾವು ಗೌರವಿಸಬೇಕು ಎಂದೇ ಹೇಳಿದೆ. ಇವರಲ್ಲಿ ಬುದ್ಧನೂ ಸೇರುತ್ತಾನೆ. ಬುದ್ಧ ಎಂದೂ ತನ್ನನ್ನೇ ದೇವರೆಂದು ಕರೆದುಕೊಳ್ಳಲಿಲ್ಲ. ನಂತರ ಬಂದ ಬೌದ್ಧರು ಈ ಹಿರಿಯ ಧರ್ಮವನ್ನು ಬದಿಗೊತ್ತಿ ಬುದ್ಧನನ್ನೇ ಪೂಜಿಸಲು ಪ್ರಾರಂಭಿಸಿದರು. ಇದು ಬುದ್ಧನಿಗೆ ಖಂಡಿತಾ ಒಪ್ಪಿಗೆಯಾಗುತ್ತಿರಲಿಲ್ಲ. ಆದ್ದರಿಂದ ತಾಲಿಬಾನ್ ಬುದ್ಧನ ವಿಗ್ರಹ ನಾಶಪಡಿಸಿದ್ದು, ಬುದ್ಧನಿಗೆ ಎಸಗಿದ ದ್ರೋಹವಲ್ಲ. ಮೂರ್ತಿ ಪೂಜೆಯನ್ನು ಖಂಡಿಸುವ ಇಸ್ಲಾಮಿಗೆ ಸಂದ ಗೌರವ. ಇದು ಬುದ್ಧನಿಗೂ ಮೆಚ್ಚುಗೆಯಾಗುವ ಕೆಲಸವೇ ಆಗಿದೆ. ಕೊರಾನ್ ಮೂರ್ತಿ ಪೂಜೆಯನ್ನು ವಿರೋಧಿಸುತ್ತದೆ. ಅಲ್ಲಾನ ವಿನಾ ಇನ್ನಾವುದೇ ದೇವರನ್ನು ಪೂಜಿಸುವುದನ್ನೂ ವಿರೋಧಿಸುತ್ತದೆ. ನಮ್ಮ ದೇಶದಲ್ಲಿ ಹಿಂದುಗಳು ಕಂಡ ಕಂಡ ಕಲ್ಲುಗಳನ್ನೆಲ್ಲಾ ಪೂಜಿಸುತ್ತಾರೆ. ಇದರಲ್ಲಿ ನನಗೆ ಯಾವ ಅರ್ಥವೂ ಕಾಣುವುದಿಲ್ಲ'' ನನಗೆ ಆತಂಕ, ಕಳವಳಗಳು ಪ್ರಾರಂಭವಾದುವು. ಅವರಿಗೆ ಆದಷ್ಟು ಸಹನೆಯಿಂದ ಹೇಳಿದೆ,

''ನಾವು ಇನ್ನೊಂದು ಸಂಸ್ಕೃತಿಯನ್ನು ತಿಳಿಯಬೇಕಾದರೆ ನಮ್ಮ ಸಂಸ್ಕೃತಿಯನ್ನು ಬದಿಗಿಟ್ಟು ಅವರ ಸಂಸ್ಕೃತಿಯನ್ನು ತಿಳಿಯಲು ಪ್ರಯತ್ನ ಮಾಡಬೇಕಾದುದು ಅವಶ್ಯಕ. ನೀವು ಮುಸ್ಲಿಮರಾಗಿದ್ದೇ ಹಿಂದೂಗಳನ್ನು ಅರ್ಥಮಾಡಿಕೊಳ್ಳಲಾರಿರಿ. ಇಸ್ಲಾಂ ಸರಳ ಧರ್ಮ. ಇದಕ್ಕೆ ಮುಖ್ಯ ಕಾರಣ, ಇಸ್ಲಾಮಿಗೆ ನಿರ್ದಿಷ್ಟ ಚರಿತ್ರೆಯಿರುವುದೇ ಆಗಿದೆ. ಮುಸ್ಲಿಮ್ ಎನಿಸಿಕೊಳ್ಳಬೇಕಾದರೆ ಅಲ್ಲಾ. ಹಾಗೂ ಪ್ರವಾದಿಯಲ್ಲಿ ನಂಬಿಕೆ, ಕ್ಲುಪ್ತ ಕಾಲಗಳಲ್ಲಿ ಪ್ರಾರ್ಥನೆ, ಉಪವಾಸ, ತಾನು ನ್ಯಾಯದಿಂದ ದುಡಿದಿದ್ದರಲ್ಲಿ ಸ್ವಲ್ಪ ಭಾಗವನ್ನು ಬಡವರಿಗೆ ದಾನಮಾಡುವುದು, ವಿಶ್ವ ಭ್ರಾತೃತ್ವ ಭಾವನೆ ಹೊಂದಿರುವುದು, ಜೂಜಾಡದಿರುವುದು, ಬಡ್ಡಿಗೆ

ಹಣ ತೊಡಗಿಸದಿರುವುದು, ಪರಸ್ತ್ರೀಯರನ್ನು ಭಗಿನಿಯರಂತೆ ನಡೆಸಿಕೊಳ್ಳುವುದು – ಇವಿಷ್ಟನ್ನು ಪಾಲಿಸಿದರಾಯಿತು. ಪ್ರಪಂಚದ ಇತರ ಧರ್ಮಗಳು ಬೇರೆಯೇ ಮೂಲದಿಂದ ಬೆಳೆದಿವೆ. ಅವುಗಳ ತಾತ್ವಿಕ, ನೈತಿಕ ನೆಲೆ ಬೇರೆಯಿರಬಹುದು. ಇಸ್ಲಾಮಿನ ಗುಂಗಿನಲ್ಲೇ ಅವುಗಳನ್ನು ಅಳೆದು ನೋಡಿದರೆ ಅನ್ಯಾಯ ಮಾಡಿದಂತಾಗುತ್ತದೆ. ಅದರಲ್ಲೂ ಹಿಂದೂಗಳನ್ನು ತಿಳಿಯುವುದು ಕಷ್ಟದ ಕೆಲಸ. ಏಕೆಂದರೆ, ಎಲ್ಲ ಹಿಂದೂಗಳೂ ಒಂದೇ ಚರಿತ್ರೆ ಉಳ್ಳವರಲ್ಲ. ಹಿಂದೂಗಳೆಂದೇ ಕರೆಸಿಕೊಳ್ಳುವ ಜನಗಳಲ್ಲಿ ಬಹಳಷ್ಟು ಪ್ರಭೇದಗಳಿವೆ. ದಕ್ಷಿಣದ ತಮಿಳರಿಗೂ, ಉತ್ತರದ ಕಾಶ್ಮೀರಿಗಳಿಗೂ ಅತ್ಯಂತ ದೊಡ್ಡ ಸಾಂಸ್ಕೃತಿಕ ಕಂದರವಿದೆ. ಕೆಲ ಹಿಂದೂಗಳು ಸತ್ತವರನ್ನು, ಮುಸ್ಲಿಮರಂತೆ ಹುಗಿಯುತ್ತಾರೆ, ಮಿಕ್ಕವರು ಸುಡುತ್ತಾರೆ. ಆದ್ದರಿಂದ ಹಿಂದುಗಳನ್ನು ಟೀಕಿಸ ಹೊರಟರೆ, ಯಾವ ಮಾದರಿಯ ಹಿಂದೂಗಳನ್ನು ಟೀಕಿಸುತ್ತಿದ್ದೀರಿ ಎಂಬುದನ್ನು ಸ್ಪಷ್ಟಪಡಿಸಬೇಕಾಗುತ್ತದೆ. ಹಿಂದೂಗಳು ಮೂರ್ತಿಪೂಜೆ ಮಾಡುತ್ತಾರೆಂದು ನಿಮ್ಮ ಆಕ್ಷೇಪವಿದೆ. ಆದರೂ ಹಿಂದೂಗಳ ಪರವಾಗಿ ಇಷ್ಟು ಹೇಳಬಲ್ಲೆ: ಹಿಂದೂಗಳು ಜಡ ವಸ್ತುಗಳಲ್ಲೂ, ಎಲ್ಲ ಜೀವಿಗಳಲ್ಲೂ ಭಗವಂತನ ಅಂಶವಿದೆಯೆಂದು ನಂಬುತ್ತಾರೆ. ಆದ್ದರಿಂದ ಅವರು ಅನೇಕ ದೇವರನ್ನು ಪೂಜಿಸಿದರೂ ಆ ಎಲ್ಲ ಪೂಜೆಗಳೂ ಒಬ್ಬನೇ ದೇವರಿಗೆ ಸಲ್ಲುತ್ತದೆಂಬ ಸಾಮಾನ್ಯ ಭಾವನೆ ಹೊಂದಿರುತ್ತಾರೆ. ದೇವನೊಬ್ಬ ನಾಮ ಹಲವು ಎಂದು ಇದಕ್ಕಾಗಿಯೇ ಹೇಳುವುದು. ಯಾವುದೇ ವಸ್ತುವಿನಲ್ಲೂ ಭಗವಂತನನ್ನು ಕಾಣಬಹುದು ಎಂದು ಭಾವಿಸುತ್ತಾರೆ. ಪೂಜೆಯೊಂದರಲ್ಲಿ ಸಗಣಿ ಮುದ್ದೆಯಲ್ಲೇ ಗಣಪತಿಯನ್ನು ಆವಾಹನೆ ಮಾಡಿ ಭಕ್ತಿಯಿಂದ ಪೂಜಿಸುತ್ತಾರೆ. ಪೂಜೆಯ ಕೊನೆಯಲ್ಲಿ ತಾವು ಆವಾಹನೆ ಮಾಡಿರುವ ದೇವರನ್ನು ಬೀಳ್ಕೊಟ್ಟು ಸಗಣಿ ಮುದ್ದೆಯನ್ನು ಎಸೆಯುತ್ತಾರೆ. ಆಗ ಸಗಣಿ ಮುದ್ದೆಗೆ ದೇವರ ಪಟ್ಟ ಸಲ್ಲದು. ಇದೇ ರೀತಿ ಮರವನ್ನೋ, ಕಲ್ಲನ್ನೋ ಪೂಜಿಸುತ್ತಾರೆ. ಇವುಗಳಲ್ಲೆಲ್ಲಾ ಭಗವಂತನ ಅಂಶ ಇದೆಯೆಂಬ ಹಿಂದೂ ನಂಬಿಕೆಯಿಂದಲೇ ಅವು ಪೂಜೆಗೆ ಅರ್ಹ ಎನಿಸಿಕೊಳ್ಳುತ್ತವೆ. ಈ ಪದ್ಧತಿಯನ್ನೂ, ಇನ್ನೂ ಬಗೆ ಬಗೆಯ ಇತರ ಹಿಂದೂ ಪದ್ಧತಿಗಳನ್ನೂ ನಾವು ಗೌರವದಿಂದ ಕಾಣಬೇಕು. ಅದು ನಮ್ಮ ಕರ್ತವ್ಯವೇ ಆಗುತ್ತದೆ.''

''ಅದು ಹೇಗೆ ಕಲ್ಲು ದೇವರನ್ನು ಅಲ್ಲಾಗೆ ಹೋಲಿಸುತ್ತೀರಿ ? ಅಲ್ಲಾ ಪ್ರಪಂಚವನ್ನು ಸೃಷ್ಟಿ ಮಾಡಿದ್ದಾನೆ. ನಮ್ಮನ್ನೂ ಸೃಷ್ಟಿಸಿದ್ದಾನೆ. ಆದರೆ ಪ್ರಪಂಚವೂ, ನಾವೂ ಅಲ್ಲಾ ಆಗಲು ಎಂದಿಗೂ ಸಾಧ್ಯವಿಲ್ಲ. ನಮ್ಮಿಂದ ಅಲ್ಲಾ ಯಾವತ್ತೂ ಬಹು ದೊಡ್ಡವನು. ಇನ್ನಾವುದೇ ದೇವರನ್ನು ಅಲ್ಲಾ ಎಂದು ಕರೆಯಲಾಗದು, ಪೂಜಿಸಬಾರದು.''

ಸಾಕಪ್ಪಾ ಸಾಕು ಎನ್ನಿಸಿತು. ಬ್ರದರ್ ಜಾನರ ನೆನಪು ಕಾಡಲು ಪ್ರಾರಂಭಿಸಿತು. ಮಾತು ಮುಗಿಸಿ ಅವರಿಗೆ ಶುಭ ಹಾರೈಸುತ್ತಾ ವಿದಾಯ ಹೇಳಿದೆ.

ಬ್ರದರ್ ಜಾನರನ್ನು ಕಂಡದ್ದು ಎರಡು ದಶಕಗಳಿಗೂ ಹಿಂದೆ. ನಂತರ ಅವರ ಸಂಪರ್ಕ ಸಂಪೂರ್ಣ ಕಳೆದುಕೊಂಡಿದ್ದೇನೆ. ಹಠ ಬಿಡದ ತ್ರಿವಿಕ್ರಮನಂತೆ ಕಡೆಯ ಎರಡು ಜನರ ಜೊತೆ ನೇರ ಸಂಪರ್ಕ, ಈ-ಮೈಲ್ ಮೂಲಕ ಪರೋಕ್ಷ ಸಂಬಂಧ ಇರಿಸಿಕೊಂಡಿದ್ದೇನೆ. ಸಂವಾದ ನಡೆಸುತ್ತಿದ್ದೇನೆ. ತಾವು ಧರಿಸಿರುವ ಬಣ್ಣದ ಕನ್ನಡಕ ತೆಗೆದು ಹೊರ ಪ್ರಪಂಚವನ್ನು ಅದು ಇರುವಂತೆಯೇ ನೋಡಲು ಅವರು ಎಂದಾದರೂ ಕಲಿತಾರು ಎನ್ನುವ ಆಸೆ ನನ್ನದು. ಬೇತಾಳ ಒಲಿದಾನೇ ?

**ಪ್ರೊ|| ಎಂ. ಆರ್. ಎನ್. ಮೂರ್ತಿ**
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು - ೧೨

## ಸಾದರ ಸ್ವೀಕಾರ

**ಭಾರತೀಯರಿಗೆ ಭಗವಂತರೆಷ್ಟು?** (ವೈಚಾರಿಕ)
*ಸದಾಶಿವಯೋಗಿ*
*ಪುಟ : ೨೦೦* *ಬೆಲೆ : ರೂ. ೯೦*

**ಬದುಕು ಬದಲಿಸಬಹುದು** (ಅಂಕಣ ಬರಹ) ನೇಮಿಚಂದ್ರ
*ಪುಟ : ೧೭೬* *ಬೆಲೆ : ರೂ. ೯೦*

**ಲೈಂಗಿಕ ಚಿಕಿತ್ಸೆ ನೈಜ ಪ್ರಕರಣಗಳು** (ಲೈಂಗಿಕ ಅರಿವು)
*ಡಾ|| ವಿನೋದ್ ಛೆಬ್ಬಿ*
*ಪುಟ : ೨೭೨* *ಬೆಲೆ : ರೂ. ೯೫*

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್ ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಆಗ್ನೇಯದಂಗಳದಲ್ಲಿ** (ಪ್ರವಾಸ ಕಥನ)
*ವೆಂಕಟೇಶ ಮಾಚಕನೂರ*
*ಪುಟ : ೧೬೦* *ಬೆಲೆ : ರೂ. ೬೦*
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

**ವಿಜ್ಞಾನ ವಿಸ್ಮಯ** (ಸಾಮಾಜಿಕ ನಾಟಕ)
ಮಣೂರು ನರಸಿಂಹ ಮಧ್ಯಸ್ಥ
*ಪುಟ : ೩೬* *ಬೆಲೆ : ರೂ. ೧೨*
**ಎಂ. ಎನ್. ಅಶ್ವಿನಿ ಮಧ್ಯಸ್ಥ ಸ್ಮಾರಕ ಶೈಕ್ಷಣಿಕ-ಸಾಂಸ್ಕೃತಿಕ ಕೇಂದ್ರ**, ಮಣೂರು - ೫೭೬ ೨೨೧

**ಪ್ರೀತಿ ಮತ್ತೆ ಬರಲೇ ಇಲ್ಲ** (ಕಥಾ ಸಂಕಲನ)
ಮಧುಕರ್ ಕ್ಯೂ.
*ಪುಟ : ೪೮* *ಬೆಲೆ : ರೂ. ೩೦*

**ಕಲಾಕೇಂದ್ರ ಪ್ರಕಾಶನ**, ಮಹಾಲಸಾ ಕಾಂಪ್ಲೆಕ್ಸ್ ಮಾರ್ಕೆಟ್ ರಸ್ತೆ, ಮಂಗಳೂರು - ೫೭೫ ೦೦೧

**ಕೆಂಪು ಕಂಗಳ ಹಕ್ಕಿ ಮತ್ತದರ ಹಾಡು** (ಕವನ ಸಂಕಲನ)
*ಚಂ. ಸು. ಪಾಟೀಲ*
*ಪುಟ : ೭೨* *ಬೆಲೆ : ರೂ. ೪೦*
**ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್**, ಕೃಷ್ಣಾಪುರ ದೊಡ್ಡಿ ನಂ.೧೧೯, ೩ನೇ ತಿರುವು, ೮ನೇ ಮುಖ್ಯರಸ್ತೆ, ಆರ್‌ಪಿಸಿ ಲೇಔಟ್, ಹಂಪಿನಗರ, ಬೆಂಗಳೂರು - ೫೬೦ ೦೪೦

**ವಸಂತ** (ಹಾಸ್ಯ ಹನಿಗವನ ಸಂಕಲನ)
*ಸಂ : ಕೋ. ಲ. ರಂಗನಾಥರಾವ್*
*ಪುಟ : ೮೦* *ಬೆಲೆ : ರೂ. ೩೦*
**ಗುರುರಾಜ ಪ್ರಕಾಶನ**, ೨೩೬, ೧೧ನೆಯ ಮುಖ್ಯರಸ್ತೆ, ಏಜಿಸ್ ಲೇಔಟ್, ಅರೇಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧

**ತುಂಡು ಭೂಮಿಯ ಬಿಡುಗಡೆ ವಿಶ್ವದ ಬಿಡುಗಡೆ** (ವೈಚಾರಿಕ)
*ಡಾ|| ಖಾದರ್*
*ನಿರೂಪಣೆ : ಪ್ರೊ|| ವಿ. ಎನ್. ಲಕ್ಷ್ಮೀನಾರಾಯಣ*
*ಆಲೂರು ಮೂರ್ತಿ*
*ಪುಟ : ೨೪* *ಉಚಿತ*
**ಜಯಲಕ್ಷ್ಮೀ ವೇದಿಕ್ ಫಾರಮ್**, ಯರಗಂಬಳ್ಳಿ ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ

**ಒಡಲ ಉರಿಯ ಹೊತ್ತು** (ಕಥಾಸಂಕಲನ)
*ಡಿ. ಎಸ್. ಚೌಗಲೆ*
*ಪುಟ : ೧೧೬* *ಬೆಲೆ : ರೂ. ೯೦*
**ಸಿ.ವಿ.ಜಿ. ಪಬ್ಲಿಕೇಷನ್ಸ್**, ನಂ. ೭೦, ೨ನೇ ಮುಖ್ಯರಸ್ತೆ ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೩

**ಬೋನ್ಸಾಯ್** (ಹವ್ಯಾಸಿ ಕಲೆ)
*ಶ್ರೀಮತಿ ಎಮ್. ಇ. ಬೀರನೂರ*
*ಪುಟ : ೧೦೪* *ಬೆಲೆ : ರೂ. ೧೫೦*
**ಅಭಿರುಚಿ ಪ್ರಕಾಶನ**, ೩೮೬, ೧೪ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಸರಸ್ವತಿಪುರ, ಮೈಸೂರು - ೯

**ಎಚ್.ಐ.ವಿ. ಸೋಂಕು ಇದ್ದರೇನು ಬದುಕಿಯೇ ಸಿದ್ಧ ನಾನು**
*ಮುನಿಯಾಲ್ ಗಣೇಶ್ ಶೆಣೈ*
*ಪುಟ : ೫೬* *ಬೆಲೆ : ರೂ. ೧೫*
**ಪುಸ್ತಕ ನಿಧಿ**, ಗಾವಳಿ ಶಾಲೆ ಹತ್ತಿರ, ಅಂಚೆ ಹಳ್ನಾಡಿ-ಹರ್ಕಾಡಿ, ಕುಂದಾಪುರ - ೫೭೬ ೨೧೦

**ಸಕಾಲ ಸ್ಪಂದನ** (ಲೇಖನಗಳ ಸಂಕಲನ)
*ಡಾ|| ಅರ್ಜುನಪುರಿ ಅಪ್ಪಾಜಿಗೌಡ*
*ಪುಟ : ೨೩೨* *ಬೆಲೆ : ರೂ. ೨೦೦*
**ಸಿದ್ಧಾರೂಢ ಪ್ರಕಾಶನ**, ಕೆಂಗಲ್ ಹನುಮಂತಯ್ಯ ಬಡಾವಣೆ, ಮದ್ದೂರು, ಮಂಡ್ಯಜಿಲ್ಲೆ - ೫೭೧ ೪೨೮

**ಮಂಡಿನೋವು** (ಸ್ವಸಹಾಯ ಮಾರ್ಗದರ್ಶಿ)
ಎನ್. ವಿಶ್ವರೂಪಾಚಾರ್
*ಪುಟ : ೬೪* *ಬೆಲೆ : ರೂ. ೧೫*
**ಕರ್ನಾಟಕ ಆರ್ಥ್ರೈಟಿಸ್ ಫೌಂಡೇಶನ್**, ಬಿಲ್ಡಿಂಗ್ ನಂಬರ್ ೧೬೮, ಕೆ. ಎಚ್. ಬಿ. ಕಾಲೋನಿ, ಕೆಂಗೇರಿ ಉಪನಗರ, ಬೆಂಗಳೂರು - ೫೬೦ ೦೬೦

**ಯಾವ ಕಾಯಿಲೆಗೆ ಯಾವ ಮನೆ ಔಷಧಿ**
ಎನ್. ವಿಶ್ವರೂಪಾಚಾರ್
*ಪುಟ : ೫೬* *ಬೆಲೆ : ರೂ. ೧೫*
ಪದ್ಮಶ್ರೀ ಪ್ರಕಾಶನ, ನಂ. ೭೭, ೬ನೇ ಮುಖ್ಯರಸ್ತೆ, ಹೆಚ್.ಎ.ಆರ್. ಲೇಔಟ್, ಗಣಪತಿ ದೇವಸ್ಥಾನದ ಹತ್ತಿರ, ಬೆಂಗಳೂರು - ೫೬೦ ೦೭೯

# ವಾಣಿಜ್ಯ ತೆರಿಗೆ ಇಲಾಖೆಯ ಸ್ವಾರಸ್ಯಗಳು

ಪ್ರತಿಯೊಂದು ಸರ್ಕಾರಿ ಕಛೇರಿಯಲ್ಲೂ ಹೆಣ್ಣು, ಹೆಂಡ, ಬಡ್ತಿ, ವರ್ಗಾವಣೆ, ಸೇವಾಜೇಷ್ಠತೆಗಾಗಿ ಅಧಿಕಾರಿಗಳು, ನೌಕರರಲ್ಲಿ ಜಗಳ ಭಿನ್ನಾಭಿಪ್ರಾಯಗಳು ಬಂದು ಒಬ್ಬರ ಮೇಲೊಬ್ಬರು ಮೂಗರ್ಜಿ ಬರೆಯುವುದು ಸರ್ವೇಸಾಮಾನ್ಯ. ಅದರಲ್ಲಿ ನಗು ಉಕ್ಕಿಸುವ ಪ್ರಕರಣಗಳು ಇರುತ್ತವೆ. ಅವು ದಾಖಲೆಗಳಾಗುವುದೇ ಇಲ್ಲ. ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಮೂವತ್ತಮೂರು ವರ್ಷ ಕೆಲಸ ಮಾಡಿದ ನನಗೆ ಇಂತಹ ಪ್ರಕರಣಗಳು ಗಮನಕ್ಕೆ ಬಂದಿವೆ. ಆ ಸ್ವಾರಸ್ಯಗಳನ್ನು ನಾನು ಒಬ್ಬನೆ ನೆನಸಿಕೊಂಡು ನಗುವ ಬದಲಿಗೆ ಓದುಗರೂ ಹಂಚಿಕೊಂಡು ನಕ್ಕರೆ ನನ್ನ ಶ್ರಮ ಸಾರ್ಥಕವಾದಂತೆ ಎಂದು ತಿಳಿಯುತ್ತೇನೆ.

**ಸಾಹೇಬರಿಗೆ ಬಂದ ಪ್ರೇಮಪತ್ರ**

ಡಿ. ಸಿ. ಮುನಿಸ್ವಾಮಿ ಸಾಹೇಬರಿಗೆ ಹೆಣ್ಣಿನ ಖಯಾಲಿ ಇತ್ತು. ಕಛೇರಿಯಲ್ಲಿ ಕೆಲಸ ಮಾಡುವ ರಾಗಿಣಿ ಎಂಬ ಹುಡುಗಿಯನ್ನು ಬಲೆಗೆ ಹಾಕಿಕೊಂಡಿದ್ದರು. ಗಾಯತ್ರಿ ಎಂಬ ಷೋಡಶಿಗೆ ಬಹಳ ಪ್ರಯತ್ನಪಡುತ್ತಿದ್ದರು. ಅವಳು ಬಲೆಗೆ ಬೀಳದೆ ಸತಾಯಿಸುತ್ತಿದ್ದಳು. ಇದನ್ನರಿತ ನಾನು, ಕಛೇರಿ ಶೀಘ್ರಲಿಪಿಕಾರ ನಾರಾಯಣ ಆಕೆಯ ಹೆಸರಿನಲ್ಲಿ ಸಾಹೇಬರಿಗೆ ಹೀಗೆ ಒಂದು ಪತ್ರ ಬರೆದೆವು. ''ನೀವು ಕಛೇರಿ ವೇಳೆಯಲ್ಲಿ ಪದೇ ಪದೇ ನನ್ನನ್ನು ಕರೆದು ಪೀಡಿಸುವುದು ಸರಿಯಲ್ಲ, ಈ ಕಾಗದ ತಲುಪಿದ ದಿನ ಸಂಜೆ ೬.೨೦ಕ್ಕೆ ಕೆ. ಆರ್. ಮಾರ್ಕೆಟ್‌ನಲ್ಲಿ ನನ್ನನ್ನು ಭೇಟಿಯಾಗಿ. ಹೆಚ್ಚಿನ ವಿಚಾರ ಅಲ್ಲಿ ಮಾತನಾಡೋಣ.'' ಮರುದಿನ ಸಾಹೇಬರಿಗೆ ಕಾಗದ ತಲುಪಿತು. ನಾನು, ನಾರಾಯಣ ಸಾಹೇಬರ ಚೇಂಬರಿಗೂ, ಸಿಬ್ಬಂದಿ ಕೊಠಡಿಗೂ ಮಧ್ಯೆ ಇರುವ ಬಾಗಿಲ ಕಿಂಡಿಯಲ್ಲಿ ನೋಡುತ್ತಿದ್ದೆವು. ಕಾಗದ ಓದಿದ ಸಾಹೇಬರು ಬಹಳ ಖುಷಿಯಾದರು. ಮತ್ತೆ ಮತ್ತೆ ಓದಿ ಕಾಗದವನ್ನು ಕೋಟಿನ ಜೇಬಿಗೆ ಇಳಿಬಿಟ್ಟರು. ಸಂಜೆ ಏಳು ಘಂಟೆಗೆ ಕಛೇರಿ ಬಿಡುವುದು ಸಾಹೇಬರ ಹವ್ಯಾಸ. ಆ ದಿನ ೪.೨೦ಕ್ಕೆ ಕಛೇರಿ ಬಿಟ್ಟು ಸಾಹೇಬರು ಹೋಗುವಾಗ ಗಾಯತ್ರಿಯನ್ನು ನೋಡುತ್ತಾ ಮಹಡಿ ಇಳಿದುಹೋದರು. ನಾನು, ನಾರಾಯಣ ಕೆ. ಆರ್. ಮಾರ್ಕೆಟ್ಟಿಗೆ ಹೋಗಿ ಸಾಹೇಬರಿಗೆ ಕಾಣದಂತೆ ಮರೆಯಲ್ಲಿ ನಿಂತು ನೋಡುತ್ತಿದ್ದೆವು. ಸಾಹೇಬರು ಆರು ಘಂಟೆಗೆ ಹೊಸ ಸೂಟು ಹಾಕಿಕೊಂಡು ತಮ್ಮ ಕರಿಯ ಮುಖಕ್ಕೆ ಪೌಡರ್ ಲೇಪಿಸಿಕೊಂಡು ಮಾರ್ಕೆಟ್ಟಿನಲ್ಲಿ ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ಠಳಾಯಿಸಿದರು. ಎಷ್ಟು ತಿರುಗಾಡಿದರೂ ಗಾಯತ್ರಿ ಬರಲೇ ಇಲ್ಲ. ಸಾಹೇಬರು ಸಿಡಿಮಿಡಿಗೊಂಡರು. ಮಾರ್ಕೆಟ್ಟಿನೊಳಗೆ ಬರುವ ದಾರಿಯಲ್ಲೆಲ್ಲ ಹುಡುಕಾಡಿದರು. ಎಂಟು ಘಂಟೆ ತನಕ ಕಾದು ಉರಿ ಮುಖದೊಂದಿಗೆ ವಾಪಸಾದರು.

ಸಾಹೇಬರು ಕಛೇರಿಗೆ ಬರುವುದು ಸಾಮಾನ್ಯವಾಗಿ ಬೆಳಿಗ್ಗೆ ಹನ್ನೊಂದು ಘಂಟೆಗೆ. ಆದರೆ ಮರುದಿನ ಹತ್ತು ಘಂಟೆಗೇ ಬಂದರು. ಬಂದವರೇ ಗಾಯತ್ರಿಯನ್ನು ಕರೆಸಿಕೊಂಡು ''ಏನು ನೀನು ಬರೆದಿರೋದು. ನಾನು ಎಷ್ಟೊತ್ತು ಕಾದೆ ಗೊತ್ತಾ?'' ಎಂದು ಕಾಗದವನ್ನು ಅವಳ ಮುಂದೆ ಹಿಡಿದರು. ಕಂಗಾಲಾದ ಗಾಯತ್ರಿ ಕಾಗದ ಓದಿ ''ಇದು ನಾನು ಬರೆದಿದ್ದಲ್ಲ'' ಎಂದು ಕಣ್ಣೀರು ಹಾಕಿದಳು. ''ನೀನು ಬರೆದಿದ್ದಲ್ಲವಾ'' ಎಂದು ಆಶ್ಚರ್ಯ ವ್ಯಕ್ತಪಡಿಸಿ, ಕಾಗದ ಬರೆದವರು ಯಾರು ಎಂದು ಕಛೇರಿ ನೌಕರರ ಹಸ್ತಾಕ್ಷರವನ್ನೆಲ್ಲಾ ಜಾಲಾಡಿದರು. ಯಾರೂ ಸಿಕ್ಕಿಬೀಳಲಿಲ್ಲ. ನಾರಾಯಣನ ಹಸ್ತಾಕ್ಷರ ನೋಡಲಾಗಲಿಲ್ಲ. ಏಕೆಂದರೆ ಅವನು ಇಂಗ್ಲಿಷ್ ಶೀಘ್ರಲಿಪಿಕಾರ. ಅವನ ಷಾರ್ಟ್‌ಹ್ಯಾಂಡ್ ಪುಸ್ತಕ ನೋಡಿದರೆ ಏನು ಸಿಗುತ್ತದೆ ? ಕೊನೆಗೆ ಸಾಹೇಬರು ಅಧೀನ ಕಛೇರಿ ನೌಕರರು ಯಾರೋ ಬರೆದಿರಬೇಕೆಂದುಕೊಂಡು ಸುಮ್ಮನಾದರು. ಸಾಹೇಬರಿಗೆ ನಾನು ಪತ್ರ ಬರೆಯದೆ ನಾರಾಯಣನ ಹಸ್ತಾಕ್ಷರದಲ್ಲಿ ಪತ್ರ ಬರೆಸಿದ್ದೆ.

**ದುಷ್ಟ ಚತುಷ್ಟಯಗಳ ಕೈವಾಡ**

ಮೈಸೂರಿನಲ್ಲಿ ದೇಶಿಕಾಚಾರ್ ಎಂಬ ವ್ಯವಸಾಯ ವರಮಾನ ತೆರಿಗೆ ಅಧಿಕಾರಿ ಇದ್ದರು. ತುಂಬಾ ಪ್ರಾಮಾಣಿಕ ಅಧಿಕಾರಿ. ಮನೆ ಬಿಟ್ಟರೆ ಕಛೇರಿ, ಕಛೇರಿ ಬಿಟ್ಟರೆ ಮನೆ. ಅಷ್ಟೇ ಅವರ ಸಾಮ್ರಾಜ್ಯ. ಅಕ್ಕಪಕ್ಕದ ಕಛೇರಿಯಲ್ಲಿ ಯಾವ ಅಧಿಕಾರಿ ನೌಕರರು ಇದ್ದಾರೆ ಎಂದು ಅವರಿಗೆ ತಿಳಿಯದು. ಯಾವ ಅಧಿಕಾರಿಗಳ ಚೇಂಬರಿಗೂ ಅವರು ಹೋಗುತ್ತಿರಲಿಲ್ಲ. ಯಾವುದೇ ಪಾರ್ಟಿ ಸಮಾರಂಭಗಳಿಗೂ ಅವರು ಬರುತ್ತಿರಲಿಲ್ಲ. ಹಣ ರಾಜಕೀಯ ಪ್ರಭಾವ ಇಲ್ಲದ ಅವರು ಎಲ್ಲಿ ವರ್ಗಾವಣೆಗೊಂಡರೂ ಹೊಸ ಅಧಿಕಾರಿ ಬರುವವರೆಗೆ ಕಾಯದೇ ಹೊಸ ಹುದ್ದೆಗೆ ಕರ್ತವ್ಯದ ಮೇಲೆ ಹಾಜರಾಗಿಬಿಡುತ್ತಿದ್ದರು. ಅವರು ಡಿ.ಸಿ. ರಾಮಪ್ಪನವರಿಗೆ ಮೇಲೆ ಕುಡಿಸಲಿಲ್ಲ ತಿನ್ನಿಸಲಿಲ್ಲ ಮಾಮೂಲಿ ಕೊಡಲಿಲ್ಲ ಎಂದು ಮುನಿಸಿತ್ತು. ಆಚಾರ್ಯರು ಮಾಮೂಲಿ ವಸೂಲಿ ಮಾಡಿಕೊಂಡರೆ ತಾನೇ ಕೊಡುವುದು ? ಡಿ.ಸಿ. ಸಾಹೇಬರನ್ನು ಪದೇ ಪದೇ ನೋಡಿ ಡೊಗ್ಗು ಸಲಾಮ್ ಹೊಡೆಯುವ ಪದ್ಧತಿಯು ಅವರದಾಗಿರಲಿಲ್ಲ.

ಅವರನ್ನು ಬಲಿಹಾಕಲು ರಾಮಪ್ಪ ಸಾಹೇಬರು ಸಮಯ ಕಾಯುತ್ತಿದ್ದರು. ಕೊನೆಗೂ ಆ ಸಮಯ ಬಂದೇಬಿಟ್ಟಿತು. ದೇಶಿಕಾಚಾರ್ ಸಾಹೇಬರು ಪ್ರತಿ ತಿಂಗಳು ರೈತರ ಲೆಕ್ಕ ನೋಡಿದ ಸಂಖ್ಯೆ ಬಹಳ ಕಡಿಮೆ ಇದ್ದಿತು. ಪ್ರತಿ ತಿಂಗಳು ಇಲಾಖೆಯ ಅಧಿಕಾರಿಗಳಿಗೆ ಮೂವತ್ತು ರೈತರ ಲೆಕ್ಕ ನೋಡಿ ಆದೇಶ ಹೊರಡಿಸಬೇಕೆಂಬ ಕಮೀಷನರ್ ಸುತ್ತೋಲೆ ಇತ್ತು. ಆಚಾರ್ಯರು ಪ್ರತಿ ತಿಂಗಳು ಹತ್ತು ಹನ್ನೊಂದು ಕೇಸುಗಳನ್ನು ಮಾತ್ರ ವಿಲೇವಾರಿ ಮಾಡುತ್ತಿದ್ದರು. ಒಟ್ಟು ವರ್ಷದಲ್ಲಿ ಮುನ್ನೂರ ಅರವತ್ತು ಕೇಸು ವಿಲೇವಾರಿ ಮಾಡುವಲ್ಲಿ ಕೇವಲ ನೂರಿಪ್ಪತ್ತು ಕೇಸು ವಿಲೇವಾರಿ ಮಾಡಿದ್ದರು. ಈ ತಪ್ಪನ್ನು ಬಹಳ ಮಂದಿ ಅಧಿಕಾರಿಗಳು ಮಾಡುತ್ತಾರೆ. ಆದರೆ ಡಿ.ಸಿ. ರಾಮಪ್ಪ ಸಾಹೇಬರು ಕಮೀಷನವರಿಗೆ ಇವರಿಂದ ರಾಜ್ಯದ ಬೊಕ್ಕಸಕ್ಕೆ ನಷ್ಟವಾಗಿದೆಯೆಂದು, ಇವರ ಕೈಯಲ್ಲಿ ಹಣಕಾಸು ಭದ್ರವಾಗಿಲ್ಲವೆಂದು, ಇವರ ಕಾರ್ಯವೈಖರಿ ಬಗ್ಗೆ ತನಿಖೆಯಾಗಬೇಕೆಂದು ವರದಿ ಮಾಡಿದರು. ಇದರಿಂದ ಕುಪಿತರಾದ ಕಮೀಷನರ್ ಟಿ. ವಿ. ರೆಡ್ಡಿಯವರು ಮೈಸೂರಿನ ಅಫೀಲು ಡಿ.ಸಿ. ರಾಮಶೆಟ್ಟಿಯವರನ್ನು ತನಿಖಾಧಿಕಾರಿಯಾಗಿ ಮಾಡಿ, ಆದೇಶ ಹೊರಡಿಸಿದರು. ಕಮೀಷನರ್ ಆಚಾರ್ಯರಿಗೆ, ನೀವು ಕೇಸುಗಳ ವಿಲೇವಾರಿ ಕಡಿಮೆ ಮಾಡಿದ್ದೀರಿ ಎಂದು ಸಮಜಾಯಿಷಿ ಕೇಳಬಹುದಿತ್ತು. ಇರುವ ಪದ್ಧತಿಯೆ ಹಾಗೆ. ಕಮೀಷನರ ಕಛೇರಿಯ ಅಧಿಕಾರಿಗಳು ಕಮೀಷನರಿಗೆ ಆಚಾರರು ಮಾಡಿದ ದೋಷವನ್ನು ಇಲಾಖೆಯ ಬಹಳ ಮಂದಿ ಅಧಿಕಾರಿಗಳು ಮಾಡುತ್ತಾರೆಂದು ಅವರು ಕೇಸು ವಿಲೇವಾರಿ ಮಾಡಿದ್ದು ಕಡಿಮೆಯಾದರೆ ಕಮೀಷನರಿಗೆ ಮಾರಾಟ ತೆರಿಗೆ ಕಾಯಿದೆಯಲ್ಲಿ ಕೊಟ್ಟಿರುವ ಅಧಿಕಾರದ ಮೇರೆಗೆ ಬೇರೊಬ್ಬ ಅಧಿಕಾರಿಗೆ ಒಂದಷ್ಟು ಕೇಸುಗಳನ್ನು ಹಂಚಿಕೆ ಮಾಡಬಹುದೆಂದು ಸಲಹೆ ಕೊಡಬಹುದಿತ್ತು ಅಥವಾ ಮತ್ತೊಬ್ಬ ಅಪರ ಅಧಿಕಾರಿಯನ್ನು ನೇಮಿಸಬಹುದಿತ್ತು. ಕಮೀಷನರ್ ಕಛೇರಿ ಅಧಿಕಾರಿಗಳಿಗೆ ಬೇರೊಬ್ಬರಿಗೆ ತೊಂದರೆ ಕೊಡುವುದೆಂದರೆ ಬಹಳ ಖುಷಿಯ ವಿಷಯವಾದ್ದರಿಂದ ಅವರು ದೊಡ್ಡ ಸಾಹೇಬರಿಗೆ ಸಲಹೆ ಕೊಡಲು ಹೋಗಲಿಲ್ಲ. ಮೈಸೂರಿನ ಅಫೀಲು ಡಿ.ಸಿ. ರಾಮಶೆಟ್ಟಿಯವರಾದರೂ ಈ ರೀತಿ ಸಲಹೆ ಕಮೀಷನರಿಗೆ ಕೊಡಬಹುದಿತ್ತು. ಅವರಿಗೆ ತನ್ನನ್ನು ತನಿಖಾಧಿಕಾರಿ ಮಾಡಿದ್ದೇ ದೊಡ್ಡ ಹುದ್ದೆ ಸಿಕ್ಕಂತಾಗಿ ತನಿಖೆಗೆ ಆರಂಭಿಸಿಯೇ ಬಿಟ್ಟರು. ಆಚಾರ್, ಕಮೀಷನರಿಗೆ ತಾನು ಮಾಡಿದ್ದ ತಪ್ಪನ್ನು ಬಹಳ ಮಂದಿ ಅಧಿಕಾರಿಗಳು ಮಾಡಿದ್ದಾರೆಂದು, ಅವರುಗಳ ಮೇಲೂ ಕ್ರಮ ತೆಗೆದುಕೊಳ್ಳಿ ಎಂದು ಬರೆಯುವ ಧೈರ್ಯ ತೋರಲಿಲ್ಲ. ಆಗೆಲ್ಲ ಹಿರಿಯ ಅಧಿಕಾರಿಗಳ ವಿರುದ್ಧ ಬರೆಯುವುದು ಅಶಿಸ್ತು ಎಂದು ಇಲಾಖೆಯ ಕಿರಿಯ ಅಧಿಕಾರಿಗಳು ತಿಳಿಯುತ್ತಿದ್ದರು ಮತ್ತು ಹಾಗೆ ಬರೆದವರನ್ನು ಹಿರಿಯ ಅಧಿಕಾರಿಗಳು ಕೆಂಗಣ್ಣಿನಿಂದ ನೋಡುತ್ತಿದ್ದರು. ಆಚಾರ್ ಅವರು ಸುಮ್ಮನಾದ್ದರಿಂದ ವಿಚಾರಣೆಯಾಗಿ ಅವರು ಕೇಸುಗಳ ವಿಲೇವಾರಿಯಲ್ಲಿ ಕೊಟ್ಟಿರುವ ಟಾರ್ಗೆಟ್ ರೀಚಾಗಿಲ್ಲವೆಂದು ರಾಮಶೆಟ್ಟಿಯವರು ತೀರ್ಪುಕೊಟ್ಟರು. ಅದರ ಅನ್ವಯ ಕಮೀಷನರು ಶಿಕ್ಷೆ ವಿಧಿಸಿ ಆಚಾರರಿಗೆ ನಾಲ್ಕು ವೇತನ ಬಡ್ತಿಯನ್ನು ಕಡಿತಗೊಳಿಸುವ ಆದೇಶ ಹೊರಡಿಸಿದರು. ನಾಲ್ಕಾರು ಸಿಂಹಗಳು ಸೇರಿ ಒಂದು ಮುಗ್ಧ ಪ್ರಾಣಿಯನ್ನು ಕೊಲ್ಲುವಂತೆ ಆಚಾರರನ್ನು ನಾಲ್ಕಾರು ದುಷ್ಟ ಚತುಷ್ಟಯಗಳು ಸೇರಿ ಬಲಿಹಾಕಿದವು. ಆಚಾರರು ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿದ್ದರೆ ಅಫೀಲು ಡಿ.ಸಿ. ರಾಮಶೆಟ್ಟಿ ಆಡಳಿತದ ಡಿ.ಸಿ. ರಾಮಪ್ಪನವರಿಗೆ ಛೀಮಾರಿ ಹಾಕುವಂತಹ ಆದೇಶ ಹೊರಬೀಳುತ್ತಿತ್ತು. ಆಚಾರರು ಮೌನಕ್ಕೆ ಶರಣಾಗಿ ಶಿಕ್ಷೆ ಅನುಭವಿಸಿದರು., ಕಪ್ಪು ಕನ್ನಡಕ ಹಾಕಿಕೊಂಡು ಅಮಲಿನಲ್ಲಿ ಕಮೀಷನರು 'ಎಸ್', 'ನೊ' ಎಂದು ಬರೆದರೆ ಹೀಗೇ ಆಗುವುದು.

ಬಿಳಿಮನೆ ರಾಮದಾಸ್

**ಸಿಕ್ಕಿಬಿದ್ದ ಭಾರೀ ಸರಕು**

ನನ್ನ ವಿಶ್ವಾಸಿ ಅಧಿಕಾರಿಯೊಬ್ಬರಿಗೆ ಹಣದ ಬಲ, ರಾಜಕೀಯ ಬಲ ಇಲ್ಲದ್ದರಿಂದ ಮಂಗಳೂರು ಸಮೀಪದ ಬಜ್ಪೆ ಚೆಕ್‌ಪೋಸ್ಟಿಗೆ

ಸಹಾಯಕ ವಾಣಿಜ್ಯ ತೆರಿಗೆ ಅಧಿಕಾರಿಯಾಗಿ ವರ್ಗಾವಣೆಯಾಗಿತ್ತು. ಒಂದು ಕಾಲದಲ್ಲಿ ಮಂಗಳೂರು ವಿಭಾಗಕ್ಕೆ ವರ್ಗಾವಣೆಯಾಗುವುದೆಂದರೆ ಶಿಕ್ಷೆ ಎಂದು ಇಲಾಖೆಯ ಅಧಿಕಾರಿಗಳು, ನೌಕರರು ತಿಳಿಯುತ್ತಿದ್ದರು. ಏಕೆಂದರೆ ಮಂಗಳೂರು ವಿಭಾಗದ ವ್ಯಾಪಾರಿಗಳು ಇಲಾಖೆಯ ಅಧಿಕಾರಿ ನೌಕರರುಗಳಿಗೆ ಲಂಚ ಕೊಡುತ್ತಿರಲಿಲ್ಲ. ಒಂದು ಪೈಸೆ ತೆರಿಗೆ ಜಾಸ್ತಿ ಹಾಕಿರುವುದು ಕಂಡುಬಂದರೆ ಸುಪ್ರೀಂ ಕೋರ್ಟ್‌ತನಕ ಕೇಸನ್ನು ಒಯ್ಯುತ್ತಿದ್ದರು (ಈಗ ಕಾಲ ಬದಲಾಗಿದೆ ಎನ್ನಿ). ಬಜ್ಪೆ ಚೆಕ್‌ಪೋಸ್ಟ್ ಅಂದು ಬೆಂಗಾಡಿನಲ್ಲಿ ಇದ್ದಿತು. ಚೆಕ್‌ಪೋಸ್ಟಿನ ಹತ್ತಿರ ಮನೆಗಳಾಗಲೀ ಹೋಟೆಲ್‌ಗಳಾಗಲೀ, ಅಂಗಡಿಗಳಾಗಲೀ ಇರಲಿಲ್ಲ. ಚೆಕ್‌ಪೋಸ್ಟ್ ಡ್ಯೂಟಿಗೆ ಬರಬೇಕಾದರೆ ಯಾವುದಾದರೂ ಲಾರಿ ಹಿಡಿದು ಬರಬೇಕಿದ್ದಿತು. ಸಾರಿಗೆ ವ್ಯವಸ್ಥೆ ಕೂಡ ಇರಲಿಲ್ಲ. ಚೆಕ್‌ಪೋಸ್ಟ್ ಶೆಡ್ಡಿನಲ್ಲಿ ಕೆಲಸ ಮಾಡುವಾಗ ಸೂರು ನೆಲ ನೋಡುತ್ತಾ ಕೆಲಸ ಮಾಡಬೇಕಾಗಿತ್ತು. ಹಾವುಗಳು ಎಲ್ಲೆಂದರಲ್ಲಿ ಹರಿದಾಡುತ್ತಿದ್ದವು. ನನ್ನ ವಿಶ್ವಾಸಿ ಅಧಿಕಾರಿ ಒಂದು ದಿನ ರಾತ್ರಿ ಪಾಳಿಯಲ್ಲಿ ಕೆಲಸ ಮಾಡುವಾಗ ದೂರದಲ್ಲಿ ಲಾರಿಯೊಂದು ಉಬ್ಬು ಹತ್ತಲಾರದೆ ವಂಯ್ಯೋ ವಂಯ್ಯೋ ಎಂದು ಸದ್ದು ಮಾಡುತ್ತ ನಿಧಾನವಾಗಿ ಬರುತ್ತಿತ್ತು. ಅಷ್ಟು ನಿಧಾನವಾಗಿ ಲಾರಿ ಬರಬೇಕಾದರೆ ಲಾರಿಯಲ್ಲಿ ಭಾರೀ ಸರಕು ಇರಬೇಕೆಂದು ಊಹಿಸಿ, ಲಾರಿಯ ಟಾರ್ಪಲ್ ಬಿಚ್ಚಿಸಿ ಸರಕು ಏನಿದೆ ಎಂದು ತಪಾಸಣೆ ಮಾಡಬೇಕೆಂದು ಸಿಬ್ಬಂದಿ ವರ್ಗ ನಿರ್ಧರಿಸಿತು. ತೆರಿಗೆ ತಪ್ಪಿಸಲು ಸರಕಿಗೆ ಸರಿಯಾದ ಬಿಲ್ಲು ಇಲ್ಲದಿರುವ ಅಥವಾ ಬಿಲ್ಲು ಇದ್ದರೂ ಬಿಲ್ಲಿನಲ್ಲಿ ಹೇಳಲಾದ ಸರಕುಗಳನ್ನು ಮೇಲೆ ತುಂಬಿ ಕೆಳಗೆ ಬೇರೇನೋ ಪದಾರ್ಥ ಬಚ್ಚಿಡುವುದು ವ್ಯಾಪಾರಿಗಳ ಹವ್ಯಾಸ. ಲಾರಿ ಹತ್ತಿರ ಬರುತ್ತಿದ್ದಂತೆ ಅಧಿಕಾರಿ ಲಾರಿ ನಿಲ್ಲಿಸಲು ಕೈತೋರಿದರು. ವಾಹನ ಚಾಲಕ ಲಾರಿ ನಿಲ್ಲಿಸಿದ. ಲಾರಿಯ ಹಿಂಬದಿಯಲ್ಲಿ ಏನೋ ಬಾರಿ ಸರಕು ತುಂಬಿದಂತೆ ಕಪ್ಪಗೆ ಎತ್ತರವಾಗಿ ಕಂಡುಬಂದಿತು. ಚೆಕ್ ಪೋಸ್ಟ್ ಸಮೀಪ ವಿದ್ಯುತ್ ದೀಪದ ವ್ಯವಸ್ಥೆ ಇರಲಿಲ್ಲ. ಹಾಗಾಗಿ ಲಾರಿಯಲ್ಲಿ ತುಂಬಿದ ಸರಕು ಏನೆಂದು ಕಾಣಲಿಲ್ಲ. ''ಟಪ್ಪಾಲು ತೆಗೆದುಕೊಂಡು ಬಾ'' ಅಧಿಕಾರಿ ಚಾಲಕನಿಗೆ ಹೇಳಿದರು. ಸರಕಿನ ಬಿಲ್ಲು ಅಥವಾ ರಹದಾರಿ ಪತ್ರವೊಂದನ್ನು ಚೆಕ್ ಪೋಸ್ಟ್‌ಗೆ ಕೊಟ್ಟು ತನ್ನ ಪ್ರತಿಗೆ ಮೊಹರು ಒತ್ತಿಸಿಕೊಂಡು ಚಾಲಕ ಹೋಗಬೇಕು. ಆದರೆ ಚಾಲಕ ಲಾರಿಯಿಂದ ಇಳಿಯದೇ ಕೂತಲ್ಲೇ ಗತ್ತಿನಿಂದ ''ಟಪ್ಪಾಲು ಇಲ್ಲ ಸೊಮಿ'' ಎಂದ. ಅಧಿಕಾರಿಗೆ ದಿಗ್ಭ್ರಮೆಯಾಗಿ ''ಏನು ಟಪ್ಪಾಲು ಇಲ್ಲಾಂದ್ರೆ, ಗೂಡ್ಸ್ ಏನಿದೆ ಲಾರಿಯಲ್ಲಿ'' ಕೇಳಿದರು. ಲಾರಿಯಲ್ಲಿ ತುಂಬಿದ ಸರಕಿಗೆ ದಾಖಲೆ ಪತ್ರ ಇಲ್ಲದಿದ್ದರೆ ಸರಿಯಾದ ದಂಡ ಹಾಕಲು ಅಧಿಕಾರಿ ಸಿದ್ಧರಾದರು. ಚಾಲಕ ಕೂತಲ್ಲಿಯೆ ''ಗೂಡ್ಸ್ ಏನಿದೆ ನೋಡಿಕೊಳ್ಳಿ'' ಎಂದ ಧಿಮಾಕಿನಿಂದ. ಅಲ್ಲಿಯತನಕ ಅಧಿಕಾರಿ ಬ್ಯಾಟರಿ ಬೆಳಕು ಬಿಟ್ಟು ಲಾರಿಯಲ್ಲಿ ಏನು ಸರಕು ತುಂಬಿದೆ ಎಂದು ನೋಡಿರಲೇ ಇಲ್ಲ. ಸಾಹೇಬರ ಚಾಲಕನ ಮಾತುಕತೆ ನಡೆಯುವಾಗ ಜವಾನನು ಸರಕಿಗೆ ಚುರುಕಿ ಹಾಕಿ ತಿವಿದು ನೋಡಲು ಚುರುಕಿ ಹಿಡಿದು ಲಾರಿ ಮೇಲೆ ಹತ್ತಲು ಪ್ರಯತ್ನಿಸಿದ. ಅಷ್ಟರಲ್ಲಿ ಮೆತ್ತನೆಯ ದಪ್ಪ ಕೊಳವೆಯಲ್ಲಿ ಅವನ ಮುಖಕ್ಕೆ ಯಾರೋ ಬಡಿದರು. ಸರಕಿಗೆ ರಹದಾರಿ ಪತ್ರವಿಲ್ಲದಿದ್ದಾಗ ದಂಡ ತಪ್ಪಿಸಲು ಚೆಕ್ ಪೋಸ್ಟ್ ಅಧಿಕಾರಿಗಳಿಗೆ ಬಡಿದು ಬೆದರಿಸಿ ಚಾಲಕ ಲಾರಿ ಓಡಿಸಿಕೊಂಡು ಹೋಗುವುದು ಇದೆ. ಏಟು ತಿಂದ ಜವಾನ ಕೆಳಕ್ಕೆ ಅನಾಮತ್ತಾಗಿ ಬಿದ್ದು ಕೂಗಿದ, ''ಸಾಹೇಬರೆ ಯಾರೋ ಹೊಡಿತಿದ್ದಾರೆ. ಬಿಲ್ಲು ಇಲ್ಲಾಂತ ಕಾಣುತ್ತೆ. ಇತ್ಲಾಕಡೆ ಟಾರ್ಚ್ ಹಾಕಿ''. ಅಧಿಕಾರಿ, ಜವಾನ ಕೆಳಕ್ಕೆ ಬಿದ್ದುದನ್ನು ಲಾರಿಯಲ್ಲಿ ಹಿಂದೆ ಕಪ್ಪಗೆ ಎತ್ತರಕ್ಕೆ ಕೂಡಿದ ಸರಕನ್ನು ಅಲ್ಲಿ ಅಡಗಿ ಕೂತವರನ್ನು ನೋಡಲು ಬ್ಯಾಟರಿ ಬೆಳಕನ್ನು ಅತ್ತಕಡೆಗೆ ಚೆಲ್ಲಿದರು. ಬೆಳಕಿನಲ್ಲಿ ಕಪ್ಪಗೆ ಎತ್ತರಕ್ಕೆ ಕೂಡಿದ್ದ ಸರಕನ್ನು ನೋಡಿ ಭಯದಿಂದ ಅಧಿಕಾರಿ, ಜವಾನ, ಹಮಾಲಿ ''ಅಯ್ಯಯ್ಯೊ'' ಎಂದು ಕೂಗಿಕೊಂಡು ದಿಕ್ಕಾಪಾಲಾಗಿ ಓಡಿದರು. ಲಾರಿಯಲ್ಲಿ ಕಪ್ಪಗೆ ಎತ್ತರಕ್ಕೆ ಕೂಡಿದ್ದುದ್ದು ಯಾವುದೇ ಸರಕಾಗಿರಲಿಲ್ಲ. ಕಪ್ಪಗೆ ಎತ್ತರಕ್ಕೆ ನಿಂತದ್ದು ಬೃಹದಾಕಾರದ ಆನೆ. ಆನೆಯನ್ನು ಲಾರಿಯಲ್ಲಿ ಮಂಗಳೂರಿನಿಂದ ಧರ್ಮಸ್ಥಳಕ್ಕೆ ಕೊಂಡೊಯ್ಯಲಾಗುತ್ತಿತ್ತು. ಲಾರಿ ಚಾಲಕ ಕಾಗದ ಪತ್ರ ಇಲ್ಲ ಎಂದು ಧಿಮಾಕಿನಿಂದ ಹೇಳಿದ್ದುದು ಆ ಕಾರಣಕ್ಕಾಗಿಯೇ.

**ಪೀರ್ ಸಾಹೇಬರಿಗೆ ಚಳ್ಳೆಹಣ್ಣು ತಿನ್ನಿಸಿದ ಮುನಿಸ್ವಾಮಿ**

ಮೈಸೂರು ಡಿ.ಸಿ. ಮುನಿಸ್ವಾಮಿಯವರಿಗೆ ನಿವೃತ್ತಿಯಾಗಲಿಕ್ಕೆ ಕೇವಲ ಆರು ತಿಂಗಳು ಉಳಿದಿತ್ತು. ಆ ಸಮಯಕ್ಕೆ ಅವರ ಅಧೀನ ಅಧಿಕಾರಿಯಾದ ಸಹಾಯಕ ವಾಣಿಜ್ಯ ತೆರಿಗೆ ಕಮೀಷನರಾದ ಪೀರ್ ಸಾಹೇಬರಿಗೆ ಡಿ.ಸಿ.ಯಾಗಿ ಬಡ್ತಿಯಾಗುವುದಿತ್ತು. ಪೀರ್ ಸಾಹೇಬರು ಹಣಕಾಸು ಮಂತ್ರಿ ಯಾಹ್ಯಾ ಅವರಿಗೆ ಆಪ್ತರಾಗಿದ್ದರು. ಹಾಗಾಗಿ ಪೀರ್ ಸಾಹೇಬರಿಗೆ ಡಿ.ಸಿ.ಯಾಗಿ ಬಡ್ತಿಕೊಟ್ಟು ಮುನಿಸ್ವಾಮಿಯವರ ಜಾಗದಲ್ಲಿ ಕೂರಿಸುವ ಇರಾದೆ ಇತ್ತು – ಅವರಿಗೆ. ಇದು ಮುನಿಸ್ವಾಮಿಯವರಿಗೆ ತಿಳಿದುಬಿಟ್ಟಿತು. ಮುನಿಸ್ವಾಮಿಯವರು ಪೀರ್ ಸಾಹೇಬರ ಮನವೊಲಿಸಿ, ತಾನು ಮೈಸೂರಿನಲ್ಲಿಯೆ ನಿವೃತ್ತಿಯಾಗುವೆನೆಂದು ಆರು ತಿಂಗಳಮಟ್ಟಿಗೆ ತಾವು ಬೇರೆ ಯಾವುದಾದರೂ ಜಾಗ ನೋಡಿಕೊಳ್ಳಬೇಕೆಂದು ಕೇಳಿಕೊಂಡರು. ಪೀರ್ ಸಾಹೇಬರು ಒಪ್ಪಿಕೊಂಡು – ಬೆಳಗಾಂ ವಿಭಾಗದ ಆಡಳಿತದ ಡಿ.ಸಿ. ಆಗಿ ಹೋದರು. ಹಣಕಾಸು ಮಂತ್ರಿ ತನಗೆ ಆಪ್ತರಾದ್ದರಿಂದ ಇಂದಲ್ಲ ನಾಳೆ ತಾನು ಮೈಸೂರು ಡಿ.ಸಿ.ಯಾಗೇ ತೀರುತ್ತೇನೆಂಬ ಅಚಲ ವಿಶ್ವಾಸ ಪೀರ್ ಸಾಹೇಬರಿಗೆ ಇದ್ದಿತು. ಐದು ತಿಂಗಳಾದ ಕೂಡಲೇ ಪೀರ್ ಸಾಹೇಬರಿಗೆ ತಿಳಿಯದಂತೆ ಮುನಿಸ್ವಾಮಿಯವರು ಮುಖ್ಯಮಂತ್ರಿ ಅರಸು ಅವರನ್ನು ಕಂಡು ತಮ್ಮ ಕಾಲದಲ್ಲಿ ಹರಿಜನ ಗಿರಿಜನರು ಉದ್ಧಾರ ಆಗಿದ್ದಾರೆಂದು, ತಲೆಯ ಮೇಲೆ ಮಲ ಹೊರುವ ಪದ್ಧತಿ ತಮ್ಮ ಕಾಲದಲ್ಲಿ ನಿಲ್ಲಿಸಲಾಯಿತೆಂದು, ತಾವು ಹರಿಜನ ಗಿರಿಜನರ ನೇತಾರರೆಂದು, ತನಗೆ ಒಂದು ವರ್ಷ ಸೇವೆಯನ್ನು ವಿಸ್ತರಿಸಬೇಕೆಂದು ದೈನೇಸಿಯಾಗಿ ವಿನಯದಿಂದ ಬೇಡಿಕೊಂಡರು. ಮುನಿಸ್ವಾಮಿಯವರ ಹಿನ್ನೆಲೆ ಸರಿಯಾಗಿಲ್ಲದಿದ್ದನ್ನು ತಿಳಿದುಕೊಂಡ ಅರಸು ಸುಮ್ಮನೆ ಅವರ ಸೇವೆಯನ್ನು ವಿಸ್ತರಿಸಲಾಗದೆ ಕಾಂಗ್ರೆಸ್ ಫಂಡಿಗೆ ಏನಾದರೂ ಕೊಡಿ ಎಂದು ಕೇಳಿದರು. ವಾಣಿಜ್ಯ ತೆರಿಗೆ ಡಿ.ಸಿ.ಯವರಿಗೆ ಒಳ್ಳೆಯ ಆದಾಯ ಇರುವುದರಿಂದ ಪುಕ್ಕಟ್ಟಾಗಿ ಅವರ ಸೇವೆಯನ್ನು ವಿಸ್ತರಿಸಲಾಗುವುದೆ? ಮುನಿಸ್ವಾಮಿ ಅವರು ಒಪ್ಪಿಕೊಂಡು ಮುಖ್ಯಮಂತ್ರಿಯವರು ಕಾಂಗ್ರೆಸ್ ಫಂಡಿಗೆ ಹಣ ಕೇಳಿದ್ದಾರೆಂದು ಇಡೀ ಮೈಸೂರು ವಿಭಾಗವನ್ನು ತಿರುಗಿ ಐವತ್ತು ಮಂದಿ ಅಧಿಕಾರಿಗಳಿಂದ ತಲಾ ಒಂದೊಂದು ಸಾವಿರ ವಸೂಲಿ ಮಾಡಿ ಇಪ್ಪತ್ತೈದು ಸಾವಿರ ಇಟ್ಟುಕೊಂಡು ಉಳಿದ ಇಪ್ಪತ್ತೈದು ಸಾವಿರವನ್ನು ಮುಖ್ಯಮಂತ್ರಿಗೆ ತಲುಪಿಸಿದರು. ಬೆಳಗಾಂನಲ್ಲಿ ಪೀರ್ ಸಾಹೇಬರಿಗೆ ಈ ಷಡ್ಯಂತ್ರ ತಿಳಿಯದೆ ಮೈಸೂರಿಗೆ ಬರಲು ಸರ್ವಸಿದ್ಧತೆ ಮಾಡಿಕೊಂಡು ವರ್ಗಾವಣೆ ಆದೇಶಕ್ಕೆ ಕಾಯುತ್ತ ಕೂತಿದ್ದರು. ಅವರಿಗೆ ವರ್ಗಾವಣೆ ಸಿಗದೆ ಮುನಿಸ್ವಾಮಿಯವರಿಗೆ ಮೂರು ತಿಂಗಳು ಮಾತ್ರ ಸೇವೆಯನ್ನು ವಿಸ್ತರಣೆ ಮಾಡಲಾಯಿತು. ಇಪ್ಪತ್ತೈದು ಸಾವಿರಕ್ಕೆ ಇನ್ನೆಷ್ಟು ದಿನ ಸೇವೆಯನ್ನು ವಿಸ್ತರಣೆ ಮಾಡಲಾಗುತ್ತದೆ?

**ನಷ್ಟವಾದದ್ದು ಯಾರಿಗೆ?**

ಮುನಿಸ್ವಾಮಿಯವರಿಗೆ ಮೂರು ತಿಂಗಳು ಮುಗಿಸುತ್ತಿದ್ದಂತೆ ಪೀರ್ ಸಾಹೇಬರು ಡಿ.ಸಿ.ಯಾಗಿ ಮೈಸೂರಿಗೆ ವರ್ಗಾವಣೆಯಾಗಿ ಬಂದರು. ಸಂಜೆ ಪೀರ್ ಸಾಹೇಬರು ಅಧಿಕಾರ ಸ್ವೀಕರಿಸಿ ಮನೆಗೆ ಹೋದಮೇಲೆ ಮುನಿಸ್ವಾಮಿಯವರು ಮೈಸೂರು ನಗರದ ಕೆಲವು ಇನ್ಸ್‌ಪೆಕ್ಟರನ್ನು ಕರೆಸಿಕೊಂಡು ನಾಲ್ಕು-ಐದು ಸಾವಿರ ಹಣ ಇಸಿದುಕೊಂಡು ಮೈಸೂರು ನಗರದಲ್ಲಿ ಇನ್ಸ್‌ಪೆಕ್ಟರುಗಳ ವರ್ಗಾವಣೆ ಮಾಡಿದರು. ಇದು ಆಯಕಟ್ಟಿನ ಜಾಗದಲ್ಲಿದ್ದವರಿಗೆ ತೊಂದರೆಯಾಗಿ ಪರಿಣಮಿಸಿತು. ಐದಾರು ತಿಂಗಳ ಹಿಂದೆ ಸಾರ್ವತ್ರಿಕ ವರ್ಗಾವಣೆಯಲ್ಲಿ ಮುನಿಸ್ವಾಮಿ ಸಾಹೇಬರಿಗೆ ಹಣಕೊಟ್ಟು ಫಲವತ್ತಾದ ಜಾಗ ಪಡೆದಿದ್ದರು. ಆ ನಷ್ಟವನ್ನು ತುಂಬಿಕೊಳ್ಳುವ ಸಮಯದಲ್ಲೇ ತಮ್ಮನ್ನು ಒಕ್ಕಲೆಬ್ಬಿಸಿದ್ದರಿಂದ ಅವರು ರೊಚ್ಚಿಗೆದ್ದರು. ಇತ್ತ ಸಾಹೇಬರು ವರ್ಗಾವಣೆ ಆದೇಶ ಹೊರಡಿಸುತ್ತಿದ್ದಂತೆ ಅತ್ತ ಕಮೀಷನರ್ ಆದಿರಾಜಯ್ಯ ಅವರಿಗೆ ನೊಂದವರು ಅನಾಮಿಕ ಕರೆ ಮಾಡಿ ಸುದ್ದಿ ಮುಟ್ಟಿಸಿದ್ದರು. ಆದಿರಾಜಯ್ಯ ಅವರು ಮೊದಲೇ ಸಿಟ್ಟಿನ ಮನುಷ್ಯ. ಮುನಿಸ್ವಾಮಿಯವರು ಮಾಡಿದ ಅಕ್ರಮದಿಂದ ಅವರು ತಕತಕ ಕುಣಿದಾಡಿದರು. ದೂರ್ವಾಸನಾಗಿ ಅವರು ಮರುದಿನ ಬೆಳಿಗ್ಗೆ ಮೈಸೂರಿಗೆ ಬಂದು ಡಿ.ಸಿ. ಕಛೇರಿ ಮೇನೇಜರ್ ಅವರನ್ನು ತರಾಟೆಗೆ ತೆಗೆದುಕೊಂಡರು. ''ಪೀರ್ ಸಾಬಿ ಚಾರ್ಜ್ ತೆಗೆದುಕೊಂಡ ಮೇಲೆ ಮುನಿಸ್ವಾಮಿಗೆ ಟ್ರಾನ್ಸ್‌ಫರ್ ಮಾಡಲಿಕ್ಕೆ ಫೈಲ್ ಯಾಕೆ ಕೊಟ್ಟೆ? ನೀನೇನು ದನ ಕಾಯಲಿಕ್ಕೆ ಮೇನೇಜರ್ ಆಗಿದ್ದಿಯನೊ'' ಎಂದು ಅಬ್ಬರಿಸಿ ಕೂಗಿ ಮುನಿಸ್ವಾಮಿಯವರು ಹೊರಡಿಸಿದ ಆದೇಶವನ್ನು ಸ್ಥಳದಲ್ಲಿ ರದ್ದುಗೊಳಿಸಿದರು. ಅದರಿಂದ ಮುನಿಸ್ವಾಮಿಯವರಿಗೆ ನಷ್ಟವಾಗಲಿಲ್ಲ. ಹಣ ಕೊಟ್ಟು ವರ್ಗಾವಣೆ ಮಾಡಿಸಿಕೊಂಡವರಿಗೆ ನಷ್ಟವಾಯಿತಷ್ಟೆ.

**ಕುಡಿದವರ ಮಾತು**

ಮೈಸೂರು ಡಿ.ಸಿ. ಆಫೀಸಿನಲ್ಲಿ ರಾಮಚಂದ್ರಯ್ಯ ಎಂಬ ಇನ್ಸ್‌ಪೆಕ್ಟರ್ ಇದ್ದ. ಇಲಾಖೆ ಕಾಯಿದೆಗಳಲ್ಲಿ ಆತ ಬಹಳ ಪರಿಣತ. ಮುನಿಸ್ವಾಮಿ ಸಾಹೇಬರಿಗೆ ಇಲಾಖೆ ಕಾಯಿದೆಗಳಲ್ಲಿ ಏನೇನೂ ಜ್ಞಾನವಿರಲಿಲ್ಲ. ರಾಮಚಂದ್ರಯ್ಯ ಅವರೇ ಎಲ್ಲವನ್ನು ಬರೆದಿಡಬೇಕು. ಸಾಹೇಬರು ಸಹಿ ಮಾಡಬೇಕು. ಅಂತಹ ಪರಿಸ್ಥಿತಿ ಇತ್ತು. ಹಿಂದಿನ ಡಿ.ಸಿ. ಸಾಹೇಬರ ಕಾಲದಲ್ಲಿ ರಾಮಚಂದ್ರಯ್ಯನನ್ನು ಮೂಲೆಗೆ ತಳ್ಳಲಾಗಿತ್ತು. ಅಂತಹ ರಾಮಚಂದ್ರಯ್ಯನಿಗೆ ಸಹಾಯಕ ವಾಣಿಜ್ಯ ತೆರಿಗೆ ಅಧಿಕಾರಿಯಾಗಿ ಬಡ್ತಿ ಕೊಟ್ಟು ಮೈಸೂರಿನ ಸಮೀಪದ

ಬಿಳಿಕೆರೆ ಚೆಕ್‌ಪೋಸ್ಟ್‌ಗೆ ವರ್ಗಾವಣೆಯಾಯಿತು. ಚೆಕ್‌ಪೋಸ್ಟ್ ಕಛೇರಿಯಲ್ಲಿ ಒಂದು ದಿನ ಬೆಳಿಗ್ಗೆ ಎಂಟರಿಂದ ಮಧ್ಯಾಹ್ನ ಎರಡು ಘಂಟೆ ತನಕ ಕೆಲಸ. ಅದೇ ಅಧಿಕಾರಿಗೆ ಮರುದಿನ ಮಧ್ಯಾಹ್ನ ಎರಡರಿಂದ ರಾತ್ರಿ ಎಂಟು ಘಂಟೆತನಕ ಕೆಲಸ. ಮೂರನೇ ದಿನ ಹಗಲು ವಿಶ್ರಾಂತಿ. ರಾತ್ರಿ ಎಂಟರಿಂದ ಮರುದಿನ ಬೆಳಿಗ್ಗೆ ಎಂಟು ಘಂಟೆತನಕ ಕೆಲಸ. ರಾತ್ರಿ ಪಾಳಿ ಎಂದರೆ ರಾಮಚಂದ್ರಯ್ಯನಿಗೆ ಖುಷಿ. ಕಂಠಪೂರ್ತಿ ಕುಡಿದು ಸ್ವಲ್ಪ ಹೊತ್ತು ಕರ್ತವ್ಯ ನಿರ್ವಹಿಸಿದಂತೆ ಮಾಡಿ ಹಾಯಾಗಿ ನಿದ್ರಿಸಬಹುದು. ಹೇಗೂ ಇನ್ಸ್‌ಪೆಕ್ಟರು ಜವಾನ ಹಮಾಲಿ ರಾತ್ರಿ ಎಲ್ಲ ನಿದ್ದೆಗೆಟ್ಟು ಕರ್ತವ್ಯ ನಿರ್ವಹಿಸುತ್ತಾರೆ. ಒಂದು ರಾತ್ರಿ ಲಾರಿಯೊಂದು ನಿಲ್ಲಿಸದೆ ವೇಗವಾಗಿ ಹೋಯಿತು. ತೆರಿಗೆ ಕದಿಯುವ ಸಲುವಾಗಿಯೋ ಅಥವಾ ಬಿಲ್ಲಿನಲ್ಲಿ ಹೇಳಲಾದ ಸರಕು ಇಲ್ಲದೆ ಬೇರೇನಾದರೂ ಸರಕು ಇದ್ದರೆ ಲಾರಿಗಳು ಚೆಕ್ ಪೋಸ್ಟಿನಲ್ಲಿ ನಿಲ್ಲಿಸದೆ ಹೋಗುವುದಿದೆ. ರಾಮಚಂದ್ರಯ್ಯ ಲಾರಿ ಹೆಸರು, ಸಂಖ್ಯೆಯನ್ನು ಬರೆದುಕೊಂಡು ಬೆಂಗಳೂರಿನ ಹೊರವಲಯದಲ್ಲಿರುವ ಮೈಸೂರು ರಸ್ತೆಯಲ್ಲಿರುವ ಮೈಸೂರು ರಸ್ತೆ ಚೆಕ್‌ಪೋಸ್ಟ್‌ಗೆ ದೂರವಾಣಿಯಲ್ಲಿ ಮಾತನಾಡಿ ಇಂತಹ ಲಾರಿಯೊಂದು ಬರುತ್ತಿದೆಯೆಂದು ದಾಖಲೆ ಪತ್ರ ಕೊಟ್ಟಿಲ್ಲವೆಂದು ನೀವು ಲಾರಿಯನ್ನು ಹಿಡಿಯಿರಿ ಎಂದ. ಮೈಸೂರು ರಸ್ತೆಯ ಚೆಕ್ ಪೋಸ್ಟಿನ ಅಧಿಕಾರಿ ''ನೀವು ಯಾಕೆ ಲಾರಿ ನಿಲ್ಲಿಸಿ ದಾಖಲೆ ಪತ್ರ ತೆಗೆದುಕೊಳ್ಳಲಿಲ್ಲ'' ಎಂದು ಕೇಳಿದ. ಅದಕ್ಕೆ ರಾಮಚಂದ್ರಯ್ಯ ''ಡ್ರೈವರ್ ಕುಡಿದಿದ್ದ'' ಎಂದ. ಮೈಸೂರು ರಸ್ತೆಯ ಅಧಿಕಾರಿ ''ಅವನು ಕುಡಿದಿದ್ದರೇನು ? ನೀವು ಲಾರಿ ನಿಲ್ಲಿಸಬಹುದಿತ್ತಲ್ಲ'' ಎಂದು ಕೇಳಿದ. ರಾಮಚಂದ್ರಯ್ಯ ''ನಾನೂ ಕುಡಿದಿದ್ದೀನಿ'' ಎಂದು ಫೋನ್ ಕುಕ್ಕಿದ.



### ಹೇಳದಿರು
(ಶಿಶುಗೀತೆ)

ಅಜ್ಜ ಅಜ್ಜೀ ನನ್ನನು ನಿನ್ನ
ಸೆರಗಲಿ ಮುಚ್ಚಿಬಿಡು
ಅಪ್ಪ ಅವ್ವಗೆ ಕಾಣಿಸದಂತೆ
ನನ್ನನು ಅಡಗಿಸಿಬಿಡು

ಪುಟ್ಟಿ ಪುಟ್ಟಿ ಎನ್ನುತ ನನ್ನ
ಹುಡುಕುತಲಿರುವರು
ಒಟ್ಟಿಗೆ ಬಂದೂ ಕೇಳಿದರೂ
ಗುಟ್ಟನು ಹೇಳದಿರು

ಓದು ಬರಹ ಟ್ಯೂಷನ್ ಎಂದು
ನಿತ್ಯವೂ ಕಾಡುವರೆನ್ನ
ಶಾಲೆಗೆ ರಜೆಯು ಇದ್ದರೂ ಕೂಡ
ಆಟಕೆ ಕಳಿಸರು ನನ್ನ

ಚಿಕ್ಕವರಿದ್ದಾಗ ಅವರು ಕೂಡ
ಆಟವಾಡಿಲ್ಲವೆ ? ಕೇಳು
ಆಡುವ ಸಮಯದಿ ಆಡಲಿ ಎಂದು
ಬುದ್ಧಿಯ ನೀ ಹೇಳು

ಶ್ರೀಮತಿ ಅರುಣಾ ನರೇಂದ್ರ
ಶಿಕ್ಷಕಿ, ಮಿಲ್ ಹತ್ತಿರ, ನಂದಿನಗರ
ಕೊಪ್ಪಳ - ೫೮೩ ೨೩೧

**ನಾಳೆ ಬರಲಿಕ್ಕೆ ಹೇಳು**

ಮೈಸೂರು ಸರಹದ್ದಿನ ವಾಣಿಜ್ಯ ತೆರಿಗೆ ಇಲಾಖೆಯ ಚೆಕ್‌ಪೋಸ್ಟ್‌ಗಳು ಮೈಸೂರು ನಗರದ ಗುಪ್ತವಾರ್ತೆ (ಇಂಟಲಿಜೆನ್ಸ್)ಯ ವಾಣಿಜ್ಯ ತೆರಿಗೆ ಅಧಿಕಾರಿಯ ನಿಯಂತ್ರಣಕ್ಕೆ ಒಳಪಟ್ಟಿದೆ. ರಾಮಚಂದ್ರಯ್ಯ ಬಿಳಿಕೆರೆ ಚೆಕ್‌ಪೋಸ್ಟಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಮಯದಲ್ಲಿ ಮೈಸೂರು ಗುಪ್ತವಾರ್ತೆಯಲ್ಲಿ ವೆಂಕಟಸ್ವಾಮಿ ಎಂಬ ವಾಣಿಜ್ಯ ತೆರಿಗೆ ಅಧಿಕಾರಿ ಕರ್ತವ್ಯ ನಿರ್ವಹಿಸುತ್ತಿದ್ದರು. ವೆಂಕಟಸ್ವಾಮಿ ಇಲಾಖೆಯಲ್ಲಿ ಪ್ರಾಮಾಣಿಕತೆಗೆ ದಕ್ಷತೆಗೆ ಬಹಳ ಹೆಸರುವಾಸಿಯಾಗಿದ್ದರು. ಅವರೊಮ್ಮೆ ರಾತ್ರಿ ಹೊತ್ತಿನಲ್ಲಿ ಬಿಳಿಕೆರೆ ಚೆಕ್ ಪೋಸ್ಟಿಗೆ ಭೇಟಿಕೊಟ್ಟಾಗ ರಾಮಚಂದ್ರಯ್ಯ ಕಂಠಪೂರ್ತಿ ಕುಡಿದು ಮಲಗಿದ್ದ. ವೆಂಕಟಸ್ವಾಮಿಯವರನ್ನು ನೋಡಿ ಚೆಕ್‌ಪೋಸ್ಟ್ ಸಿಬ್ಬಂದಿ ಭಯಭೀತರಾಗಿ ಸಾಹೇಬರನ್ನು ಎಬ್ಬಿಸಲು ನೋಡಿದರು. ರಾಮಚಂದ್ರಯ್ಯ ಅಮಲಿನಲ್ಲಿ ''ನಾಳೆ ಬರಲಿಕ್ಕೆ ಹೇಳು'' ಎಂದ. ಮೇಲಧಿಕಾರಿ ವೆಂಕಟಸ್ವಾಮಿಯವರು ಆ ದಿನ ಸುಮ್ಮನಿದ್ದು ಮರುದಿನ ರಾಮಚಂದ್ರಯ್ಯನನ್ನು ಕಛೇರಿಗೆ ಕರೆಸಿ ಉಗಿದು ಕಳುಹಿಸಿದರು. ವೆಂಕಟಸ್ವಾಮಿಯವರಲ್ಲದೆ ಬೇರೊಬ್ಬ ಅಧಿಕಾರಿಯಾಗಿದ್ದರೆ ರಾಮಚಂದ್ರಯ್ಯನನ್ನು ಅಮಾನತ್ತಿನಲ್ಲಿಡಲು ಕಮೀಷನರಿಗೆ ಬರೆದುಬಿಡುತ್ತಿದ್ದರು.

**ಸುಖನಿದ್ದೆ ತಂದ ಅಮಾನತ್ತು ಆದೇಶ**

ಮುತ್ತಣ್ಣನವರು ಇಲಾಖೆಯಲ್ಲಿ ಕಮೀಷನರಾಗಿದ್ದಾಗ ಒಂದು ಸಾರಿ ಕೇರಳಕ್ಕೆ ಸಿಬ್ಬಂದಿಯೊಂದಿಗೆ ಕೇರಳದ ವಾಣಿಜ್ಯ ತೆರಿಗೆ ಕಮೀಷನರೊಂದಿಗೆ ಚರ್ಚಿಸಲು ಹೋಗಿದ್ದರು. ಹಿಂದಿರುಗಿ ಬರುವಾಗ ರಾತ್ರಿಯಾಗಿತ್ತು. ಬೆಂಗಳೂರಿನ ದೊಮ್ಮಲೂರು ಚೆಕ್‌ಪೋಸ್ಟಿನ ಸಿಬ್ಬಂದಿ ನಿದ್ದೆ ಹೋಗಿದ್ದಾರೋ ಕರ್ತವ್ಯ ನಿರ್ವಹಿಸುತ್ತಿದ್ದಾರೋ ನೋಡಲು ಅವರು ಚೆಕ್‌ಪೋಸ್ಟಿಗೆ ನುಗ್ಗಿದರು. ಚೆಕ್ ಪೋಸ್ಟಿನ ಅಧಿಕಾರಿ ಎಲೆಯಡಿಕೆ ವಾಸುದೇವ ಮೂರ್ತಿ (ಅದು ಆತನ ಅಡ್ಡಹೆಸರು) ಶಾಲು ಹೊದ್ದುಕೊಂಡು ಸುಖನಿದ್ದೆಯಲ್ಲಿದ್ದ. ಕಮೀಷನರು ತಮ್ಮ ಕಾರಿನಲ್ಲಿ ಹೋಗದೆ ಮಾರುತಿ ವ್ಯಾನಿನಲ್ಲಿ ಪ್ರವಾಸಹೋಗಿದ್ದರು. ಹಾಗಾಗಿ ಸಿಬ್ಬಂದಿಗೆ ಕಮೀಷನರು ಬಂದದ್ದು ತಿಳಿಯಲಿಲ್ಲ. ಸುಖನಿದ್ದೆಯಲ್ಲಿದ್ದ ಸಾಹೇಬರನ್ನು ಅವರು ಎಬ್ಬಿಸಲಾಗಲಿಲ್ಲ. ಕಮೀಷನರನ್ನು ನೋಡಿದ ಸಿಬ್ಬಂದಿ ದಿಗಿಲಾದರು. ಸಾಮಾನ್ಯವಾಗಿ ಇಲಾಖೆಯ ಕಮೀಷನರು ರಾತ್ರಿ ವೇಳೆಯಲ್ಲಿ ಚೆಕ್‌ಪೋಸ್ಟಿಗೆ ಭೇಟಿ ಕೊಡುವುದಿಲ್ಲ. ಕಮೀಷನರುಗಳು ಏನಿದ್ದರೂ ಹಗಲು ಹೊತ್ತಿನಲ್ಲಿ ಅಪರೂಪಕ್ಕೆ ಭೇಟಿ ಕೊಡುವುದಿದೆ. ಮಲಗಿದ್ದ ಸಾಹೇಬರನ್ನು ಎಬ್ಬಿಸಲಾಗದೆ ಸಿಬ್ಬಂದಿವರ್ಗ ಚಡಪಡಿಸಿದರು. ''ಯಾರು ನಿಮ್ಮಲ್ಲಿ ಅಧಿಕಾರಿ'' ಎಂದು ಕಮೀಷನರು ಕೇಳಲು ಸಿಬ್ಬಂದಿವರ್ಗ ಸಾಹೇಬರು ಮಲಗಿದ್ದಾರೆಂದು ನಿರ್ವಾಹವಿಲ್ಲದೆ ಹೇಳಿದರು. ಕಮೀಷನರು ನಕ್ಕು ''ಮಲಗಿದ್ದಾರೋ; ಮಲಗಲಿ ಬಿಡಿ, ಪಾಪ ಡ್ಯೂಟಿ ಮಾಡಿ ಆಯಾಸ ಆಗಿರಬಹುದು. ಅವರ ಹೆಸರೇನು ?'' ಎಂದು ಕೇಳಿ ತಿಳಿದುಕೊಂಡರು. ಮರುದಿನ ಕಛೇರಿಗೆ ಹೋದವರೆ ವಾಸುದೇವಮೂರ್ತಿಯನ್ನು ಅಮಾನತ್ತಿನಲ್ಲಿಟ್ಟರು. ವಾಸುದೇವ ಮೂರ್ತಿಯ ಬಂಧು ಒಬ್ಬರು ಆಗ ಮಂತ್ರಿಯಾಗಿದ್ದರು. ಅವರ ಮೂಲಕ ಕಮೀಷನರಿಗೆ ತನ್ನ ಅಮಾನತ್ತನ್ನು ರದ್ದುಗೊಳಿಸಲು ಮೂರ್ತಿ ಪ್ರಭಾವ ತಂದ. ಕಮೀಷನರು ಮಂತ್ರಿಗಳಿಗೆ ''ಅವನು ಸ್ವಲ್ಪದಿನ ಚೆನ್ನಾಗಿ ನಿದ್ದೆ ಮಾಡಲಿ. ಆಮೇಲೆ ನೋಡುವ'' ಎಂದರು.

(ಸೂಚನೆ : ಈ ಪ್ರಬಂಧದಲ್ಲಿ ಬಂದಿರುವ ಹೆಸರುಗಳು ಕೇವಲ ಕಲ್ಪಿತವಾದವು. – ಲೇ.)

ಬಿಳುಮನೆ ರಾಮದಾಸ್
ನಂ. ೧೪೦೧, ೩೭ನೇ ಬಿ ಕ್ರಾಸ್, ೧೧ನೇ ಮುಖ್ಯರಸ್ತೆ, ಜಯನಗರ ೪ನೇ ಟಿ ಬ್ಲಾಕ್, ಬೆಂಗಳೂರು - ೫೬೦ ೦೪೧

# ಬ್ಯಾಂಗನ್ನಡ !



''ಹಾಗೆ ಕಾಯಿನ್ಸ್ ಅಂತ ಪ್ಯೂರ್ ಕನ್ನಡದಲ್ಲಿ ಹೇಳ್ರೀ. ಅದು ಬಿಟ್ಟು ನಾಣ್ಯ ಪೀಣ್ಯ ಅಂತ ಹೇಳಿದ್ರೆ ಹೇಗೆ ಅಂಡರ್‌ಸ್ಟ್ಯಾಂಡ್ ಆಗಬೇಕು ನನಗೆ ?...''

**ಬ್ಯಾಂ**ಗನ್ನಡ ! ಶೀರ್ಷಿಕೆಯನ್ನು ಓದಿದಾಗ ನಿಮ್ಮ ಹುಬ್ಬುಗಳು ಮೇಲೇರಿದವೇ ? 'ಶಿರ'ವೆಂದ ಮೇಲೆ 'ಶಿಖೆ' ಅಂತೊಂದಿರಬೇಕಲ್ಲವೇ ? ಈಗೆಲ್ಲ 'ಶಿಖೆ' ಇದ್ದರೆ 'ಸೆಕೆ' ಅಂತ ಅದನ್ನು ಕತ್ತರಿಸಿ ಮೋಟುಮಾಡುವುದು ರೂಢಿ ಎನ್ನಿ. ಶಿರಕ್ಕೆ ಶಿಖೆ ಯಿರುವಂತೆಯೇ ಲೇಖನಕ್ಕೆ ಶೀರ್ಷಿಕೆ ಅಥವಾ ತಲೆಬರಹ ಇರಬೇಕು. ಈ ಲೇಖನದ ತಲೆಬರಹಕ್ಕೆ ಮೇಲಿನ ಪದಕ್ಕಿಂತಲೂ ಸೂಕ್ತ ವಾದ ಇನ್ನೊಂದು ಪದ ನನ್ನ ಕಣ್ಣಿಗೆ ಬಿದ್ದಿಲ್ಲ. ಆದಕಾರಣ ಸದ್ಯಕ್ಕೆ ಇದನ್ನೇ ಒಪ್ಪಿಕೊಂಡು ಮುಂದುವರಿಯೋಣ.

ಬೆಂಗಳೂರು ನನಗೆ ತೀರ ಅಪರಿಚಿತ ವಾದ ಊರೇನೂ ಅಲ್ಲ, ಹಾಗಂತ ತುಂಬಾ ಪರಿಚಿತವಾದ ಊರು ಅಂತ ಹೇಳುವ ಧೈರ್ಯವೂ ನನಗಿಲ್ಲ, ಯಾಕೆಂದರೆ, ಬೆಂಗಳೂರಿನಲ್ಲಿ ದಾರಿ ತಪ್ಪಿದ ಹಾಗೆ ನಾನು ಇನ್ನಾವ ಊರಲ್ಲೂ ದಾರಿ ತಪ್ಪಿಲ್ಲ!

ದಾರಿ ತಪ್ಪುವುದು ಹಾಳುಬಿದ್ದು ಹೋಗಲಿ; ಬೆಂಗಳೂರಿಗೆ ಹೋದರೆ ನನಗೆ ಭಾಷೆ ಕೂಡ ತಪ್ಪುತ್ತದೆ! ಎಂ.ಜಿ.ರಸ್ತೆ, ಬ್ರಿಗೇಡ್ ರಸ್ತೆಗಳಿಗೆ ಕಾಲುಹಾಕಿದರಂತೂ ''ಇಲ್ಲಿ ಕನ್ನಡ ಅನ್ನುವ ಒಂದು ಭಾಷೆ ಚಲಾವಣೆಯಲ್ಲಿದೆಯಾ'' ಅಂತ ಅನುಮಾನ ಬರುವುದರ ಜೊತೆಗೆ ''ಕರ್ನಾಟಕದ ರಾಜಧಾನಿ ಅಂತಂದು ಕೊಂಡು ಅಪ್ಪಿತಪ್ಪಿ ಬೇರಾವುದೋ ಅಪರಿಚಿತ ದೇಶಕ್ಕೇನಾದರೂ ಬಂದು ಬಿಟ್ಟಿದ್ದೇನಾ'' ಅಂತಲೂ ಅನ್ನಿಸಿಬಿಟ್ಟದ್ದುಂಟು !

ಮಾಜಿ ಮುಖ್ಯಮಂತ್ರಿಯೊಬ್ಬರು ಬೆಂಗಳೂರನ್ನು ಸಿಂಗಪುರ ಮಾಡುವ ಉತ್ಸಾಹದಲ್ಲಿದಲ್ಲಿದ್ದುದು ಗುಟ್ಟೇನೂ ಅಲ್ಲ. ಆದರೆ, ಬೆಂಗಳೂರಿನ ಎಂ.ಜಿ.ರಸ್ತೆ. ಸಾರಿ, ಎಂ.ಜಿ.ರೋಡು, ಬ್ರಿಗೇಡ್ ರೋಡುಗಳು ಈಗಾಗಲೇ ಲಂಡನ್ ಆಗಿಹೋಗಿರುವುದು ಅವರ ಗಮನಕ್ಕೆ ಬಂದಿರಲಿಲ್ಲ ಅಂತ ಕಾಣುತ್ತದೆ. ಬೆಂಗಳೂರಿನ ಇನ್ನು ಕೆಲವು ಭಾಗಗಳಂತೂ ಚೆನ್ನೈ ಆಗಿ ಅದೆಷ್ಟೋ ಕಾಲ ವಾಗಿಬಿಟ್ಟಿದೆ. ವಸ್ತುಸ್ಥಿತಿ ಹೀಗಿರುವಾಗ ಮಾನ್ಯ ಮುಖ್ಯಮಂತ್ರಿಗಳು ಬೆಂಗಳೂರನ್ನು ಸಿಂಗಪುರ ಮಾಡಲು ಹೋಗಿದ್ದರೆ ಅದು ಖಂಡಿತ ಸಿಂಗಳೀಕಪುರವೇ ಆಗುತ್ತಿತ್ತೇನೋ !

ಇರಲಿ, ಬೆಂಗಳೂರಿನಲ್ಲಿ ದಾರಿಯ ಜೊತೆ ಭಾಷೆಯೂ ತಪ್ಪುತ್ತದೆ ಅಂತಂದೆನಲ್ಲವೇ ? ಅದು ಹೇಗೆ ಅಂತ ಸ್ವಲ್ಪ ವಿವರಿಸುತ್ತೇನೆ.

ನನ್ನ ಮಗ ಬೆಂಗಳೂರಿನಲ್ಲಿ ಕೆಲಸಕ್ಕೆ ಸೇರಿ ಮನೆ ಮಾಡಿ ಕೊಂಡಿದ್ದ ಸಂದರ್ಭವದು. ಒಂದು ಶನಿವಾರ ಮೈಸೂರಿನಿಂದ ಬೆಂಗಳೂರಿನ ಮೆಜೆಸ್ಟಿಕ್ಕಿಗೆ ಹೋಗಿ ಇಳಿದೆ. ನನ್ನ ಮಗ ಹೇಳಿದ್ದ: ''ರಾಮಕೃಷ್ಣಾಶ್ರಮದ ಹತ್ತಿರ ಸಿಟಿ ಬಸ್ಸಿನಲ್ಲಿ ಬಂದಿಳಿದು ಫೋನ್ ಮಾಡು, ನಾನು ಬಂದು ಮನೆಗೆ ಕರೆದುಕೊಂಡು ಹೋಗುತ್ತೇನೆ'' ಅಂತ.

ಸರಿ, ನಾನೊಂದು ಬಸ್ಸು ಹಿಡಿದು ಬುಲ್ ಟೆಂಪಲ್ ರೋಡಿನಲ್ಲಿರುವ (ಬಸವನಗುಡಿ ರಸ್ತೆ ಅಂದ್ರೆ ಯಾರಿಗೂ ಗೊತ್ತಾಗಲಿಕ್ಕಿಲ್ಲ!) ರಾಮಕೃಷ್ಣಾಶ್ರಮದ ಎದುರಿನಲ್ಲಿ ಬಸ್ಸಿಳಿದೆ.

ಅಲ್ಲೊಂದು ಸಣ್ಣ ಅಂಗಡಿಯ ಮುಂದೆ ನಾಣ್ಯ ನುಂಗಿಸಿ ದೂರವಾಣಿ ಕರೆ ಮಾಡುವ ಪೆಟ್ಟಿಗೆಯೊಂದಿತ್ತು. ನನ್ನ ಹತ್ತಿರ ೨ ರೂ. ನಾಣ್ಯವೊಂದು ಮಾತ್ರ ಇತ್ತು. ಹಾಗಾಗಿ ಅದನ್ನು ಅಂಗಡಿ ಯವನ ಮುಂದೆ ಹಿಡಿದು ''ಒಂದೊಂದು ರೂಪಾಯಿಯ ಎರಡು ನಾಣ್ಯಗಳನ್ನು ಕೊಡಿ'' ಅಂತ ಕೇಳಿದೆ.

ಅಂಗಡಿಯವನಿಗೆ ಅರ್ಥವಾದ ಹಾಗೆ ಕಾಣಲಿಲ್ಲ. ಅವನ ಮುಖ ಪ್ರಶ್ನಾರ್ಥಕ ಚಿಹ್ನೆಯಾಯಿತು. ''ಏನು, ಏನು ಬೇಕು ?'' ಅಂತ ಪ್ರಶ್ನಿಸಿದ.

''ಎರಡು ನಾಣ್ಯ ಬೇಕು ''- ಅಂದೆ, ಎರಡು ರೂಪಾಯಿಯ ನಾಣ್ಯವನ್ನು ಅವನಿಗೆ ತೋರಿಸುತ್ತಾ.

''ಹಾಗೆಂದ್ರೆ ಏನ್ರೀ ? ನಿಮಗೇನು ಬೇಕು ಸರಿಯಾಗಿ ಹೇಳಿ'' ಅಂತ ಅಸಹನೆಯ ಧ್ವನಿಯಲ್ಲಿ ಕೇಳಿದ.

ನನಗೆ ಅರ್ಥಂಬರ್ಥ ಜ್ಞಾನೋದಯವಾಯಿತು. ನಾನು ಕೇಳಿದೆ : ''ಎರಡು ಕಾಯಿನ್ಸ್ ಬೇಕು'' ಅಂತ.

ಆಗ ಅವನಿಗೆ ಅರ್ಥವಾಯಿತು. ನನ್ನ ಕೈಲಿದ್ದ ೨ ರೂ. ನಾಣ್ಯವನ್ನು ತೆಗೆದುಕೊಂಡು, ಒಂದೊಂದು ರೂಪಾಯಿಯ ಎರಡು ನಾಣ್ಯಗಳನ್ನು ನನ್ನ ಕೈಮೇಲಿಡುತ್ತಾ, ''ಹೂಂ ಹಾಗೆ ಪ್ಯೂರ್ ಕನ್ನಡದಲ್ಲಿ ಕೇಳಿ ಕಾಯಿನ್ಸ್ ಅಂತ. ಆಗ ನನಗೆ ಅಂಡರ್‌ಸ್ಟ್ಯಾಂಡ್ ಆಗುತ್ತೆ. ಅದು ಬಿಟ್ಟು ನಾಣ್ಯ ಪೀಣ್ಯ ಅಂತೆಲ್ಲಾ ಕೇಳಿದ್ರೆ ಹ್ಯಾಗೆ ?'' ಅಂತ ಅವನೆಂದಾಗ ನನಗೇ 'ಕನ್‌ಫ್ಯೂಸ್' ಆಯಿತು, 'ನಾಣ್ಯ' ಎಂಬ ಪದ ಕನ್ನಡದ್ದೋ, 'ಕಾಯಿನ್' ಎಂಬ ಪದ ಕನ್ನಡದ್ದೋ ಅಂತ !

ಇದು ಹಾಗಿರಲಿ, ಇನ್ನು ಕನ್ನಡ ಟಿವಿ ವಾಹಿನಿಗಳಲ್ಲಿ ಬರುವ ಅಡುಗೆಯ ವಿವರಗಳನ್ನು ಒಂದಿಷ್ಟು ಗಮನಿಸೋಣ.

ಟಿವಿ ನಿಲಯದ ಅಡುಗೆಯ ಮನೆಯಲ್ಲಿ ಬೆಂಗಳೂರಿನ ಮಹಿಳೆಯೊಬ್ಬರು ಅಡುಗೆ ಮಾಡಿ ತೋರಿಸಲು ಸಿದ್ಧರಾಗಿ ನಿಂತಿದ್ದಾರೆ. ಕಾರ್ಯಕ್ರಮ ನಡೆಸಿಕೊಡುವ ಚಂದದ ಹುಡುಗಿಯೊಬ್ಬಳು ಪಕ್ಕದಲ್ಲಿದ್ದಾಳೆ. ಈಗ ಕಾರ್ಯಕ್ರಮ 'ಹೊಸರುಚಿ' ಪ್ರಾರಂಭ :

''ನೋಡಿ, ಈ ಕ್ಯಾಪ್ಸಿಕಮ್ಮನ್ನು ಸ್ಮಾಲ್ ಪೀಸಸ್ ಆಗಿ ಕಟ್ ಮಾಡಿಕೊಳ್ಳಿ. ಟೇಸ್ಟ್‌ಗೆ ಸ್ವಲ್ಪ ಸಾಲ್ಟ್ ಮಿಕ್ಸ್ ಮಾಡಿ, ನಂತರ ಆನಿಯನ್ ಅನ್ನು ಸಣ್ಣಗೆ ಕಟ್ ಮಾಡಿಕೊಳ್ಳಿ. ಒಂದು ಫ್ರೈಯಿಂಗ್ ಪ್ಯಾನ್ ತೆಗೆದುಕೊಳ್ಳಿ. ಸ್ಟೌವ್ ಮೇಲೆ ಇಡಿ. ಸ್ಟೌವ್‌ನ ಫ್ಲೇಮ್ ಸಿಮ್‌ನಲ್ಲಿರಲಿ.

''ಈಗ ಸ್ವಲ್ಪ ಆಯಿಲ್ ಅನ್ನು ಪ್ಯಾನ್‌ಗೆ ಪೌರ್ ಮಾಡಿ, ಕಟ್ ಮಾಡಿಟ್ಟುಕೊಂಡಿದ್ದ ವೆಜಿಟೆಬಲ್ಸ್ ಎಲ್ಲವನ್ನೂ ಪ್ಯಾನ್‌ಗೆ ಹಾಕಿ ಫ್ರೈ ಮಾಡಿ. ಸ್ವಲ್ಪ ಚಿಲ್ಲಿ ಪೌಡರನ್ನು ನಂತರ 'ಸ್ಪ್ರಿಂಕಲ್ ಮಾಡಿ...'' ಸುಮಾರಾಗಿ ಹೀಗೆಯೇ ಸಾಗುತ್ತದೆ ವಿವರಣೆ. ಇದು ಕನ್ನಡಿಗರು ಕನ್ನಡಿಗರಿಗಾಗಿ ನಡೆಸಿಕೊಡುವ ಕನ್ನಡ ಕಾರ್ಯಕ್ರಮ; ಸಾರಿ, ಇದು ಬ್ಯಾಂಗನ್ನಡ ಕಾರ್ಯಕ್ರಮ. ಅಂದರೆ ಬ್ಯಾಂಗಲೋರ್ ಕನ್ನಡ ಕಾರ್ಯಕ್ರಮ.

ಎಲ್ಲಿ ಕಾಣಿಸುತ್ತಿಲ್ಲವಲ್ಲ ಕನ್ನಡವನ್ನು ಕಾಪಾಡಲೆಂದೇ ಕಂಕಣ ಕಟ್ಟಿಕಾಯುತ್ತಿರುವ ನವೆಂಬರ್ ಒಂದರ ಕನ್ನಡವೀರರು ?

ಜಿ. ಪಿ. ಗಣೇಶಯ್ಯ
ಅಖಿಲ ಭಾರತ ವಾಕ್-ಶ್ರವಣ ಸಂಸ್ಥೆ, ಮೈಸೂರು - ೫೭೦ ೦೦೬

# ಬೂಮ್‌ರ್ಯಾಂಗ್

ಮರಾಠಿ ಮೂಲ
ಮಧುರಿ ಬಾನುಭಾಗ

"ಹ್ಯಾಪಿ ಬರ್ಥಡೆ ಟೂ ಯೂ !"

ಸುತ್ತಲೂ ನೆರೆದಿದ್ದ ಪುಟಾಣಿ ಮಕ್ಕಳು, ಪುಟ್ಟಿಗೆ ಅಭಿನಂದಿಸಿದರು. ಪುಟ್ಟಿಯು ಐದು ಮೇಣಬತ್ತಿಗಳನ್ನು ಆರಿಸಿ, ಕೇಕನ್ನು ಕತ್ತರಿಸಿ, ಪಕ್ಕದಲ್ಲೇ ನಿಂತಿದ್ದ ಅಜ್ಜಿಯ ಬಾಯಿಗೆ ಒಂದು ಚೂರು ಕೇಕನ್ನು ಇರಿಸಿದಳು. ಡಾ॥ ರಾಜಮಣಿ ಕೃಷ್ಣಸ್ವಾಮಿ, ಒಬ್ಬ ಅತ್ಯಂತ ಪ್ರಖ್ಯಾತ ಬಾಯೋಕೆಮಿಸ್ಟ್ ಆಗಿದ್ದರೂ, ಈ ಕ್ಷಣ ಅವರು ಪ್ರೀತಿಯ ಅಜ್ಜಿಯ ಪಾತ್ರದಲ್ಲಿದ್ದರು. ಮೊಮ್ಮಗಳ ಎಳೆ ಕೈಗಳ ಮೃದು ಸ್ಪರ್ಶವನ್ನು ಅನುಭವಿಸುತ್ತ, ತುಂಡು ಕೇಕನ್ನು ತಿಂದು, ಉಳಿದ ಭಾಗವನ್ನು ಮೊಮ್ಮಗಳ ಬಾಯಿಯಲ್ಲಿರಿಸಿದರು.

"ಮುದ್ದು ಪುಟ್ಟಿ, ವೆಂಕಟರಮಣ ನಿನಗೆ ದೀರ್ಘಾಯಸ್ಸು ನೀಡಲಿ. ಅದು ಸುಖಮಯವಾಗಿರಲಿ. ನಿನ್ನ ತಾತನ ಹೆಸರನ್ನು ಉಜ್ವಲಗೊಳಿಸುವ ಅವಕಾಶ ನಿನಗೆ ಸಿಗಲಿ !" ಎನ್ನುತ್ತ ಮನಸಾರೆ ಆಶೀರ್ವದಿಸಿ ಪ್ರೀತಿಯಿಂದ ಪುಟ್ಟಿಯನ್ನು ಆಲಿಂಗಿಸಿಕೊಂಡಾಗ ಕಣ್ಣೀರಿನ ತೆಳುಪರದೆ ಎದುರಾಯಿತು. ಪಕ್ಕದಲ್ಲೇ ನಿಂತಿದ್ದ ವನಮಾಲಾಳಿಗೆ ಆ ಕಣ್ಣೀರಿನ ಅರ್ಥ ಸರಿಯಾಗಿ ಆಯಿತು.

"ಅಮ್ಮ", ನಿಧಾನವಾಗಿ ಪುಟ್ಟಿಯನ್ನು ತಾಯಿಯಿಂದ ಕೆಳಗಿಳಿಸುತ್ತ, ಅವಳು ನುಡಿದಳು. "ಅಪ್ಪಾ ಸ್ವರ್ಗದಲ್ಲಿ ಕುಳಿತು ಎಲ್ಲವನ್ನು ನೋಡುತ್ತಿದ್ದಾರೆ. ನೀನು ಕಣ್ಣೀರು ಹಾಕುವುದು ಅವರಿಗೆ ಸ್ವಲ್ಪವೂ ಇಷ್ಟವಾಗಲಿಕ್ಕಿಲ್ಲ." ಈ ಮಾತನ್ನು ಹೇಳುವಾಗ, ಅವಳ ಧ್ವನಿಯು ಜಡವಾಗಿತ್ತು. ಕೆಮಿಸ್ಟ್ರಿಯಲ್ಲಿ ಪಿಎಚ್.ಡಿ. ಮಾಡಿ, ಪೋಸ್ಟ್‌ಡಾಕ್ಟರೇಟಿಗಾಗಿ ಸಂಶೋಧನೆ ಮಾಡುತ್ತಿದ್ದ ವನಮಾಲಾ, ತಂದೆ ತಾಯಿಯ ಸಂಶೋಧನೆಯ ಕಾರ್ಯವನ್ನು ಮುಂದುವರೆಸುವಲ್ಲಿ, ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಪುಟ್ಟಿಯ ಐದನೆಯ ಹುಟ್ಟುಹಬ್ಬ, ಒಂದು ವಿಶೇಷ ಘಟನೆಯಾಗಿದೆ ಎಂಬುದು ಅವಳೂ ಅರಿತಿದ್ದಳು.

ವನಮಾಲಾಳ ತಂದೆ ಡಾ॥ ಕೃಷ್ಣಸ್ವಾಮಿಯವರು. ಮಿದುಳಿನ ಮೇಲೆ ಹಲವಾರು ಪ್ರಯೋಗಗಳನ್ನು ಮಾಡಲು ಸಂಶೋಧನೆ ಮಾಡಿದ್ದರು. ಅವನ್ನು ಪ್ರಾಣಿಗಳ ಮೇಲೆ ಪ್ರಯೋಗಿಸಿ, ತಮ್ಮ ಸಂಶೋಧನೆಯ ದಿಸೆ ಯೋಗ್ಯವಾಗಿದೆಯೆಂದು ತಿಳಿದುಕೊಂಡಿದ್ದರು. ಮಾನವನ ಮೇಲೆ ಆ ಪ್ರಯೋಗವನ್ನು ಮಾಡಬೇಕೆಂದು ಅವರು ನಿಶ್ಚಯಿಸಿದಾಗ ಪುಟ್ಟಿಯ ಜನ್ಮವಾಗಿತ್ತು. ತಮ್ಮ ಪ್ರಯೋಗಗಳು ಪೂರ್ಣತ್ವಕ್ಕೆ ಬಂದಾಗ, ಅದನ್ನು ಪ್ರತ್ಯಕ್ಷವಾಗಿ ಮಾಡಿ ನೋಡಲು ತಮ್ಮ ಮೊಮ್ಮಗಳನ್ನೇ ಆರಿಸಿದ್ದರು. ಜಾತಿವಂತ ಸಂಶೋಧಕ ಹೀಗೆ ಇರುತ್ತಾನೆ. ತಮ್ಮ ಸಂಶೋಧನೆಯ ಬಗ್ಗೆ ಅವರಿಗೆ ಎಷ್ಟು ಗಾಢ ವಿಶ್ವಾಸವಿರುತ್ತೆಂದರೆ, ಅದರ ಯಶಸ್ಸಿನ ಬಗ್ಗೆ ಎಷ್ಟು ವಿಶ್ವಾಸವಿರುತ್ತೆಂದರೆ, ಅದನ್ನು ಸಿದ್ಧಪಡಿಸಲು ತಮ್ಮ ಅಥವಾ ಸ್ವಕೀಯರ ಜೀವವನ್ನು ಉಪಯೋಗಿಸಲು ಸ್ವಲ್ಪವೂ ಅಂಜಿಕೆಯಾಗುವುದಿಲ್ಲ. ಎಡ್ವರ್ಡ್ ಜೆನ್ನರನು ದೇವಿ ಲಸಿಕೆಯನ್ನು ಮೊಟ್ಟಮೊದಲು ತನಗೆ ಚುಚ್ಚಿಕೊಂಡು, ಅದರ ಯಶಸ್ಸಿನ ಬಗ್ಗೆ ಖಾತ್ರಿಮಾಡಿಕೊಂಡಿದ್ದನು. ಹಾಗೆಯೇ ಅಲೆಕ್ಸಾಂಡರ್ ಫ್ಲೆಮಿಂಗನು ಪೆನಿಸಿಲಿನ್‌ನ ಪ್ರಯೋಗವನ್ನು ಮೊಟ್ಟಮೊದಲಿಗೆ ತನ್ನ ಗಾಯದ ಮೇಲೆ ಮಾಡಿನೋಡಿದ್ದನು.

ಪುಟ್ಟಿ ಒಂದು ವರ್ಷದವಳಾಗುವ ಹೊತ್ತಿಗೆ ಕೃಷ್ಣಸ್ವಾಮಿಯವರಿಗೆ ಬ್ರೇನ್ ಕ್ಯಾನ್ಸರ್ ಆಗಿ ನಾಲ್ಕು ತಿಂಗಳಲ್ಲೇ ಎಲ್ಲವೂ ಮುಗಿದುಹೋಗಿತ್ತು. ಅದಕ್ಕೆ ಮೊದಲು ಸಿಕ್ಕ ಸಮಯದಲ್ಲಿ, ತಮ್ಮ ಸಂಶೋಧನೆಯನ್ನು ಮುಂದುವರೆಸಲು ಹೆಂಡತಿ, ಡಾ॥ ರಾಜಮಣಿ ಹಾಗೂ ಅಳಿಯನನ್ನು ಸಿದ್ಧಗೊಳಿಸಿದ್ದರು. ಈ ಕಾರಣಕ್ಕಾಗಿಯೇ ಪುಟ್ಟಿಯ ಐದನೇ ಹುಟ್ಟಿದ ಹಬ್ಬವನ್ನು ಡಾ॥ ರಾಜಮಣಿಯವರು ಎದುರುನೋಡುತ್ತಿದ್ದರು. ಡಾ॥ ಕೃಷ್ಣಸ್ವಾಮಿಯವರ ಪ್ರಯೋಗಗಳು ಈಗ ಪೂರ್ಣವಾಗಿ ಸಿದ್ಧವಿದ್ದವು. ಪುಟ್ಟಿ ಐದು ವರ್ಷದವಳಾದ ತಕ್ಷಣ ಅದನ್ನು ಅವಳ ಮೇಲೆ ಪ್ರಯೋಗಿಸಬೇಕೆಂದು ಹೆಂಡತಿಗೆ, ಅಳಿಯನಿಗೆ ಸ್ಪಷ್ಟಪಡಿಸಿದ್ದರು. ರಾಘವನ್ ಇಂಜಿನಿಯರಿಂಗ್ ಮುಗಿಸಿ, ಪಿಎಚ್.ಡಿ.ಗಾಗಿ ಕೃಷ್ಣಸ್ವಾಮಿಯವರ ಬಳಿ ಬಂದಿದ್ದ.

ಈಗ ಅವಳ ಹುಟ್ಟುಹಬ್ಬದ ಪಾರ್ಟಿಯಲ್ಲಿ ಪಾಲ್ಗೊಳ್ಳುವಾಗ ತನ್ನ ಗಂಡನ ಕೆಲಸವನ್ನು ಪೂರ್ಣಗೊಳಿಸುವ ಸಂಧಿಯನ್ನು ವೆಂಕಟೇಶ್ವರನೇ ಕೊಟ್ಟುದುದಕ್ಕಾಗಿ ಅವನಿಗೆ ಮತ್ತೆ ಮತ್ತೆ ವಂದಿಸಿದರು.

ಮಕ್ಕಳ ಆಟ, ಗದ್ದಲದಿಂದ ರಾಘವನ್-ವನಮಾಲಾ ಮನೆ ತುಂಬಿಹೋಗಿತ್ತು. ಆರೆಂಜ್ ಜ್ಯೂಸನ್ನು ಕುಡಿಯುತ್ತ, ಒಂದು ಮೂಲೆಯಲ್ಲಿ ಕುಳಿತ ರಾಜಮಣಿ, ತಮ್ಮ ಅಳಿಯನಿಗೆ ಹೇಗೆ ಜ್ಞಾಪಿಸುವುದು ಎಂದು ಆಲೋಚಿಸುತ್ತಿದ್ದರು. ರಾಘವನ್ ಅವರ ಗಂಡನ ಅತ್ಯಂತ ಅಚ್ಚುಮೆಚ್ಚಿನ ವಿದ್ಯಾರ್ಥಿ. ತಮ್ಮ ಮಗಳೊಡನೆ ವಿವಾಹವಾದ ಮೇಲಂತೂ ಇನ್ನಷ್ಟು ಹತ್ತಿರದವನಾಗಿದ್ದ. ಕೃಷ್ಣಸ್ವಾಮಿಯವರ ಮರಣದ ನಂತರ ಅವನು ಸಂಶೋಧನೆಯನ್ನು ಬಿಟ್ಟಿದ್ದರೂ ಸಹ, ಅವರ ಪ್ರಯೋಗದ ಬಗ್ಗೆ ಆತನಿಗೆ ಪೂರ್ಣಜ್ಞಾನವಿತ್ತು. ಆದ್ದರಿಂದ ಅವನು ಈ ಪ್ರಯೋಗಕ್ಕೆ ಒಪ್ಪುವನೆಂಬ ಭರವಸೆ ಇತ್ತು.

ಪಾರ್ಟಿ ಮುಗಿದಾಗ, ಮಗಳು ಮತ್ತು ಅಳಿಯ

ಅಮ್ಮನಿಗೆ ಅಲ್ಲೇ ಇರುವಂತೆ ಒತ್ತಾಯಿಸಿದರು. ಆದರೆ ರಾಜಮಣಿಯವರು ನಿರಾಕರಿಸುತ್ತಾ, ''ಬೇಡ ವನಮಾಲಾ, ನಾನು ಮನೆಗೆ ಹೋಗುತ್ತೇನೆ. ನಾನು ನಾಳೆಯಿಂದ ನಿಮ್ಮ ಅಪ್ಪನ ಪ್ರಯೋಗದ ತಯಾರಿ ಮಾಡುವುದಿದೆ'' ಎಂದರು.

''ಅಮ್ಮ, ನೀವು ಆ ಪ್ರಯೋಗವನ್ನು ಮುಂದುವರೆಸುವ ತೀರ್ಮಾನ ಮಾಡಿದ್ದೀರಾ?'' ಎಂದು ರಾಘವನ್, ಅತ್ತೆ ರಾಜಮಣಿಯವರನ್ನು ಪ್ರಶ್ನಿಸಿ ತನ್ನ ಅಸ್ವಸ್ಥತೆಯನ್ನು ವ್ಯಕ್ತಗೊಳಿಸಿದ.

''ಹೌದು ರಾಘವನ್. ಪುಟ್ಟಿ, ನಿಮ್ಮ ಅಪ್ಪನಿಗೆ ವನ್ನಿಗಿಂತ ಪ್ರಿಯಳಾಗಿದ್ದಳು. ಹಾಲಿಗಿಂತ ಹಾಲಿನ ಕೆನೆ ಹೆಚ್ಚು ಪ್ರಿಯವಾಗಿರುತ್ತದೆಯಲ್ಲವೆ? ಜಗತ್ತಿನ ಮೊಟ್ಟ ಮೊದಲ ಸೂಪರ್ ಚೈಲ್ಡ್ ಅವಳೇ ಆಗಿರಬೇಕೆಂದು ಅವರ ಆಸೆ ಇತ್ತು. ಈಗ ನಾವೆಲ್ಲರೂ, ಯಾವ ಸಂಶಯದ ಸುಳಿಯಲ್ಲೂ ಸಿಕ್ಕಿಬೀಳದೆ, ಅಪ್ಪನ ಪ್ರಯೋಗವನ್ನು ಪ್ರತ್ಯಕ್ಷದಲ್ಲಿ ತರುವ ಕಾರ್ಯ ಮಾಡಬೇಕು.''

''ಆ... ಹೌದು. ಆದರೂ ಅಮ್ಮ, ನನಗೆ ಏಕೋ ಸ್ವಲ್ಪ ಭಯವಾಗ್ತಾ ಇದೆ.'' ರಾಘವನ್ ಉತ್ತರಿಸಿದ.

''ಡೋಂಟ್ ವರಿ. ವೆಂಕಟೇಶ್ವರ ನಮ್ಮನ್ನ ಕಾಯುತ್ತಾನೆ. ಅವನು ಎಲ್ಲಾ ಸರಿ ಮಾಡ್ತಾನೆ'' ಎಂದರು ರಾಜಮ್ಮ.

ರಾಜಮ್ಮ ಮನೆಗೆ ತಲುಪಿದಾಗ ರಾತ್ರಿ ಹತ್ತು ಘಂಟೆಯಾಗಿತ್ತು. ಒಂದು ಲೋಟ ಹಾಲು ಕುಡಿದು ಅವರು ಸ್ಟಡಿಯಲ್ಲಿ ಬಂದು ಕುಳಿತರು. ಇಷ್ಟು ದೊಡ್ಡ ಮನೆಯಲ್ಲಿ, ಗಂಡನ ನೆನಪಿನ ಜೊತೆಗೆ, ಅವರೊಬ್ಬರೆ ವಾಸಿಸುತ್ತಿದ್ದರು. ಅವರು ಇಡೀ ದಿನ ವನ್ನಿಯ ಮನೆಗೆ ಹೋಗುವರಿದ್ದ ಕಾರಣ, ಕೆಲಸದವಳು ಬಂದಿರಲಿಲ್ಲ. ಕುರ್ಚಿಯಲ್ಲಿ ಕುಳಿತು ಐದು ನಿಮಿಷ ನಾಮಸ್ಮರಣೆ ಮಾಡಿದ ಮೇಲೆ ಅವರಿಗೆ ಸ್ವಲ್ಪ ಹುಷಾರೆನಿಸಿತು. ಕಣ್ಣಿಗೆ ಕನ್ನಡಕ ಏರಿಸಿ, ಎದುರಿಗಿದ್ದ ಕಾಗದದ ಮೇಲೆ ಕಣ್ಣು ಹಾಯಿಸಿದರು. 'ಮೆಂಡೆಕ್ಸ್ ಸ್ಕೂಲ್ ಆಫ್ ಮೆಡಿಕಲ್ ಸಾಯನ್ಸ್' ಎಂಬ ವಿಖ್ಯಾತ ಸಂಸ್ಥೆಯಿಂದ ಅವರು ತರಿಸಿದ ಜರ್ನಲ್‌ಗಳು ಬಂದಿದ್ದವು. ಅವನ್ನು ಓದಲು ಆರಂಭಿಸಿದ ಆಕೆ, ಒಬ್ಬ ಪ್ರೀತಿಯ ಅಜ್ಜಿಯ ಪಾತ್ರದಿಂದ, ಸಹಜವಾಗಿ ವಿಖ್ಯಾತ ಸಂಶೋಧಕಿಯ ಪಾತ್ರಕ್ಕಿಳಿದರು.

ಡಾ|| ರಾಜಮಣಿ ಕೃಷ್ಣಸ್ವಾಮಿ ಓರ್ವ ಸುಪ್ರಸಿದ್ಧ ಬಾಯೋಕೆಮಿಸ್ಟ್ ಇದ್ದರು. ಅವರು ವಿವಾಹವಾದಾಗ ಕೇವಲ. ಎಸ್.ಎಸ್.ಸಿ. ಆಗಿದ್ದರು. ಆದರೆ ಮದುವೆಯ ನಂತರ ಕೃಷ್ಣಸ್ವಾಮಿಯವರು ಓದನ್ನು ಮುಂದುವರೆಸಲು ಪ್ರೋತ್ಸಾಹಿಸಿದರು. ಫಿಜಿಕ್ಸ್‌ನಲ್ಲಿ ರೇಡಿಯೇಶನ್ ಬಗ್ಗೆ ಪೋಸ್ಟ್ ಡಾಕ್ಟೋರಲ್ ಸಂಶೋಧನೆಗಾಗಿ ಕೃಷ್ಣಸ್ವಾಮಿಯವರು ಅಮೆರಿಕಾಗೆ ಹೋದಾಗ, ರಾಜಮಣಿಯವರು ಬಾಯೋಕೆಮಿಸ್ಟ್ರಿಯಲ್ಲಿ ಡಾಕ್ಟರೇಟ್ ಮಾಡುವಂತೆ ಒತ್ತಾಯಿಸಿದ್ದರು. ರಾಜಮಣಿಯವರಿಗೆ ಡಾಕ್ಟರೇಟ್ ಸಿಕ್ಕಾಗ ಅವರಿಗಿಂತ ಕೃಷ್ಣಸ್ವಾಮಿಯವರೇ ಅಧಿಕ ಸಂತಸಗೊಂಡಿದ್ದರು. ಆನಂತರ ಅವರಿಬ್ಬರೂ ಒಬ್ಬರಿಗೊಬ್ಬರು ಸಹಾಯವಾಗುವಂತಹ ಕ್ಷೇತ್ರವನ್ನು ಆರಿಸಿ, ಸಂಶೋಧನೆ ನಡೆಸಿದ್ದರು. ತೀಕ್ಷ್ಣವಾದ ಬುದ್ಧಿಚಾತುರ್ಯದೊಡನೆ ಅತ್ಯಂತ ಕಠೋರ ಪರಿಶ್ರಮ ಹಾಗೂ ತಾಳ್ಮೆಯ ಜೊತೆಗೂಡಿ, ಇಬ್ಬರೂ ಸೇರಿ ಅನೇಕ ಇಂಟರ್‌ನ್ಯಾಶನಲ್ ಜರ್ನಲ್‌ಗಳಲ್ಲಿ ಸಂಶೋಧನೆಯ ಪ್ರಬಂಧಗಳನ್ನು ಮಂಡಿಸಿದ್ದರು. ಅವರ ವಿಷಯ ಮೆದುಳಾಗಿತ್ತು. ಮಾನವನ ಮೆದುಳು. ಅದರಲ್ಲೂ ಈ ಅಂಗದ ರಚನೆಗಿಂತಲೂ, ಮಾನವನ ಬುದ್ಧಿಯನ್ನು ಅರಿತುಕೊಳ್ಳುವುದಾಗಿತ್ತು. ಒಂದು ಹಿಡಿಯಷ್ಟಿರುವ ಈ ಅವಯವದ ಮಹತ್ವ ಅವರಿಬ್ಬರೂ ಚೆನ್ನಾಗಿ ಅರಿತುಕೊಂಡಿದ್ದರು.

ಮಾನವನ ಬುದ್ಧಿಶಕ್ತಿಯನ್ನು ವಿವರಿಸುವುದು ಬಹಳ ಕ್ಲಿಷ್ಟ. ಬುದ್ಧಿಯನ್ನು ನಾಲ್ಕು ವಿಭಾಗಗಳಲ್ಲಿ ವಿಂಗಡಿಸಬಹುದು. ಮೊದಲನೆಯದು ಸ್ಮರಣೆ. ಅದರಲ್ಲಿ ವಿವಿಧ ಬಗೆಯ ಮಾಹಿತಿಯು ಸಂಗ್ರಹಿಸಲ್ಪಡುತ್ತದೆ. ಹುಟ್ಟಿನಿಂದ ಸಾವಿನವರೆಗೂ ಈ ವಿಭಾಗದಲ್ಲಿ, ಪಂಚೇಂದ್ರಿಯಗಳ ಸಹಾಯದಿಂದ ಬೇರೆ ಬೇರೆ ವಿಧದ ಮಾಹಿತಿಯೂ ಒಂದು ವಿಶಿಷ್ಟ ಪರಿಭಾಷೆಯಲ್ಲಿ ಮಿದುಳಿನ ಒಂದು ಭಾಗದಲ್ಲಿ ಸಂಗ್ರಹಿಸುತ್ತದೆ. ಮತ್ತೆ ಮತ್ತೆ ಉಪಯೋಗಿಸಲ್ಪಡುವ ಮಾಹಿತಿಯೂ ಒಂದು ವಿಶಿಷ್ಟ ಭಾಗದಲ್ಲಿ ನೋಂದಾಯಿಸಲಾಗುತ್ತದೆ. ಉಪಯೋಗಿಸಲ್ಪಡದೇ ಇರುವ ಮಾಹಿತಿಯು ಸ್ಮೃತಿಯಿಂದ ಹೊರ ಹಾಕಲ್ಪಡುತ್ತದೆ. ಗಣಕಯಂತ್ರದಲ್ಲಿ, ಫ್ಲಾಪಿಯ ಮೇಲೆ ವಿದ್ಯುತ್ ಸಿಗ್ನಲ್‌ಗಳ ಭಾಷೆಯಲ್ಲಿ ಹೇಗೆ ಮಾಹಿತಿಯು ಸಂಗ್ರಹಿಸಲ್ಪಡುತ್ತದೋ ಹಾಗೆಯೇ ಮನುಷ್ಯನ ಮಿದುಳಿನ ವಿಶಿಷ್ಟ ಭಾಗದಲ್ಲಿ ಸೂಕ್ಷ್ಮ ರಾಸಾಯನಿಕ ಬದಲಾವಣೆಗಳು ಕಂಡುಬರುತ್ತವೆ. ಹಾಗೂ ಈ ಬದಲಾವಣೆಯ ಪರಿಭಾಷೆಯಲ್ಲಿಯೇ ಮಾಹಿತಿಯೂ ಬರೆದಿಡಲಾಗುತ್ತದೆ. ಅದನ್ನು ಉಪಯೋಗಿಸದಿದ್ದರೆ, ನಿಧಾನವಾಗಿ ಪೂರ್ವಾವಸ್ಥೆಗೆ ಬರುತ್ತದೆ ಹಾಗೂ ಮಾಹಿತಿಯೂ ಅಳಿಸಿಹೋಗುತ್ತದೆ. ಅದನ್ನೇ ವಿಸ್ಮೃತಿ ಎನ್ನುತ್ತಾರೆ.

ಬುದ್ಧಿವಂತಿಕೆಯ ಎರಡನೆಯ ಬಗೆ ಎಂದರೆ ಕಾಂಪ್ರಿಹೆನ್ಶನ್. ಅಂದರೆ ಮಾಹಿತಿಯನ್ನು ಉಪಯೋಗಿಸಿ, ಪ್ರಯತ್ನಪೂರ್ವಕವಾಗಿ ಹೆಚ್ಚಿನ, ಮುಂದುವರೆದ ಮರ್ಮವನ್ನು ಅರ್ಥಮಾಡಿಕೊಳ್ಳುವುದು. ಇದನ್ನೇ ನಾವು ಅರಿವು ಎನ್ನಬಹುದು ಅಥವಾ ಇದನ್ನು ಅರ್ಥ ಮಾಡಿಕೊಳ್ಳುವ ಶಕ್ತಿ, ಗ್ರಾಸ್ಪಿಂಗ್ ಪವರ್ ಎನ್ನಬಹುದು.

ಮೂರನೆಯದು ವಿವೇಕ ಅಥವಾ ರೀಝನ್. ಇದರಲ್ಲಿ ಅನೇಕ ಕಲ್ಪನೆಗಳನ್ನು, ಮಾಹಿತಿಯನ್ನು ಉಪಯೋಗಿಸಿ, ಮಾನವನ ಮಿದುಳು ಒಂದರಲ್ಲೊಂದು ಚಿಕ್ಕ ಪ್ರಶ್ನೆಗಳ ಉತ್ತರವನ್ನು ಕಂಡುಹಿಡಿಯಬಲ್ಲದು. ಎದುರಿಗೆ ಘಟಿಸುವ, ಯಾವುದಾದರೊಂದು ಘಟನೆಯನ್ನು ಅರ್ಥ ಮಾಡಿಕೊಳ್ಳಲು ಮೇಲೆ ಹೇಳಿದ ಎರಡೂ ವಿಭಾಗಗಳನ್ನು ಯೋಗ್ಯ ರೀತಿಯಲ್ಲಿ ಉಪಯೋಗಿಸಿಕೊಂಡು, ಸರಿಯಾದ ಉತ್ತರ ಕಂಡುಹಿಡಿಯಬಹುದು. ಈ ಭಾಗವು ವಿಕಾಸಗೊಂಡಂತೆಲ್ಲಾ, ಹೆಚ್ಚೆಚ್ಚು ಸಮಸ್ಯೆಗಳನ್ನೊಳಗೊಂಡ ಪ್ರಶ್ನೆಗಳನ್ನು ಬಗೆಹರಿಸಲು ಮಾನವನ ಮಿದುಳು ಸಿದ್ಧವಾಗುತ್ತದೆ.

ನಾಲ್ಕನೆಯ ಅಥವಾ ಕಡೆಯ ಭಾಗವೆಂದರೆ ಸ್ವತಂತ್ರ ಪ್ರಜ್ಞೆ. ಇಂತಹ ವ್ಯಕ್ತಿಗೆ ನಾವು ಜೀನಿಯಸ್ ಎನ್ನುತ್ತೇವೆ. ಸಂಪೂರ್ಣ ಹೊಸದಾದ ಕಲ್ಪನೆ ಹೊಳೆಯುವುದು. ಆಮೇಲೆ ಮೇಲಿನ ಮೂರು ಭಾಗಗಳನ್ನು ಉಪಯೋಗಿಸಿ ಅದನ್ನು ನಿಜ ಮಾಡಿ ತೋರಿಸಲಾಗುತ್ತದೆ.

ಮನುಷ್ಯನ ಮಿದುಳಿನಲ್ಲಿ ಈ ನಾಲ್ಕು ವಿಭಾಗಗಳು ಹುಟ್ಟಿನಿಂದ ಕೆಲಸ ಮಾಡುತ್ತಿರುತ್ತವೆ. ಶಿಕ್ಷಣ ಪಡೆದು ನಾವು ಅವುಗಳನ್ನು ಉಪಯೋಗಿಸಲು ಕಲಿಯುತ್ತೇವೆ. ಯಾವ ರೀತಿ ಮನುಷ್ಯನ ಅವಯವಗಳಾದ ಮೂಗು. ಕಣ್ಣು, ಬಣ್ಣ, ಕಿವಿ, ಇವು ಒಂದೇ ಬಗೆಯದಾಗಿದ್ದರೂ ಅದರ ಸ್ವರೂಪ ವಿಭಿನ್ನವಾಗಿರುತ್ತದೆ. ಕೋಟಿಗಟ್ಟಲೆ ಮಾನವರ ದೇಹಗಳನ್ನು ಪರಿಶೀಲಿಸಿದರೂ, ಪ್ರತಿಯೋರ್ವನ ವೈಶಿಷ್ಟ್ಯತೆ ಇದ್ದೇ ಇರುತ್ತದೆ. ಅದೇ ರೀತಿ ಈ ನಾಲ್ಕು ಮಿದುಳಿನ ಭಾಗಗಳು. ಪ್ರತಿಯೊಬ್ಬರಲ್ಲೂ ಹೆಚ್ಚು-ಕಡಿಮೆ ಪ್ರಮಾಣದಲ್ಲಿ ಇರುತ್ತದೆ. ಒಂದು ಹೆಚ್ಚು ಪ್ರಬಲವಾಗಿದ್ದರೆ, ಮತ್ತೊಂದು ಸ್ವಲ್ಪ ಕಡಿಮೆ ಪ್ರಬಲವಾಗಿರುತ್ತದೆ. ಅದಕ್ಕನುಗುಣವಾಗಿ ನಾವು ಒಬ್ಬ ವ್ಯಕ್ತಿ ಬುದ್ಧಿವಂತನಿದ್ದಾನೆ ಎಂದು ಸಾಮಾನ್ಯ ಭಾಷೆಯಲ್ಲಿ ಹೇಳಿಬಿಡುತ್ತೇವೆ. ಜನಸಾಮಾನ್ಯರಲ್ಲಿ ಕಡೆಯ ವಿಭಾಗ ಕಡಿಮೆ ಪ್ರಮಾಣದಲ್ಲಿರುತ್ತದೆ. ಹೊಸ ಹೊಸ ಸಂಶೋಧನೆ, ಹೊಸ ಕಲ್ಪನೆಗಳು ಈ ಬಗೆಯ ಬುದ್ಧಿವಂತಿಕೆಯಿಂದಲೇ ಸಂಭವಿಸುತ್ತವೆ. ಅಂತಲೇ ನ್ಯೂಟನ್‌ನಂತಹವನೊಬ್ಬನೇ ಗಿಡದಿಂದ ಬೀಳುವ ಹಣ್ಣನ್ನು ನೋಡಿ ಗುರುತ್ವಾಕರ್ಷಣೆಯ ನಿಯಮವನ್ನು ಕಂಡುಹಿಡಿಯುತ್ತಾನೆ. ಆದರೆ, ಕೋಣೆಯ ಗೋಡೆಗೆ, ಒಂದು ದೊಡ್ಡ ತೂತನ್ನು ಬೆಕ್ಕಿಗಾಗಿ ಹಾಗೂ ಒಂದು ಸಣ್ಣ ತೂತನ್ನು ಇಲಿಗಾಗೆಂದು ಮಾಡುವವನು ಅವನೇ. ಆದರೂ ಅವನ ಅಸಾಮಾನ್ಯ ಬುದ್ಧಿವಂತಿಕೆಯನ್ನು ಯಾರೂ ಅಲ್ಲಗಳೆಯುವುದಿಲ್ಲ. ಐನ್‌ಸ್ಟೈನ್‌ನಂತಹ ಮಹಾನ್ ವಿಜ್ಞಾನಿಯು, ಪುಸ್ತಕದಲ್ಲಿ ಬರೆದಿರುವುದನ್ನು ನನಗೆ ಕೇಳಬೇಡಿ ಎಂದು, ತನ್ನ ಮಿದುಳಿನ ಸ್ಮೃತಿ ವಿಭಾಗದ ಕಡಿಮೆ ಬುದ್ಧಿವಂತಿಕೆಯನ್ನು ಸಹಜವಾಗಿ ಸ್ವೀಕರಿಸುವವನು. ಆತನಿಗೂ ನಾವು ಶತಮಾನದ ಪ್ರಜ್ಞಾವಂತರಲ್ಲಿ ಗಣನೆ ಮಾಡುತ್ತೇವೆ.

ಡಾ|| ಕೃಷ್ಣಸ್ವಾಮಿಯವರು, ಈ ನಾಲ್ಕು ಬಗೆಯ ಬುದ್ಧಿವಂತಿಕೆಯು ಮಿದುಳಿನಲ್ಲಿ ಯಾವ ರೀತಿ ವಿಕಸನಗೊಳ್ಳುತ್ತವೆ, ಅಲ್ಲಿಯ ಸೆಲ್‌ಗಳಲ್ಲಿ ಯಾವ ಬಗೆಯ ಬದಲಾವಣೆಗಳು ಸಂಭವಿಸುತ್ತವೆ ಎಂಬುದರ ಬಗ್ಗೆ ಸಂಶೋಧನೆ ಮಾಡಿದ್ದರು. ಪ್ರತಿಯೊಂದು ಬಗೆಯ ಬುದ್ಧಿವಂತಿಕೆಯ ಸ್ಥಾನ, ಮಿದುಳಿನಲ್ಲಿ ಎಲ್ಲಿದೆ ಎಂಬುದನ್ನು ಗುರುತಿಸಿ, ಆ ನಂತರ ಸಿ.ಟಿ. ಸ್ಕ್ಯಾನ್ ಮೂಲಕ, ಗಣಕಯಂತ್ರದ ಮೇಲೆ ತ್ರಿಮಿತಿ ಛಾಯಾಚಿತ್ರಗಳನ್ನು ತರುವುದು. ಇಲೆಕ್ಟ್ರಾನ್ ಮೈಕ್ರೊಸ್ಕೋಪನ್ನು ಉಪಯೋಗಿಸಿ ಪ್ರತಿಯೊಂದು ಮೈಕ್ರಾನ್ ಭಾಗವನ್ನು, ಲಕ್ಷಾಂತರ ಪಟ್ಟು ವೃದ್ಧಿಸಿ ಸುಲಭವಾದ ಅಥವಾ ಜಟಿಲವಾದ ಪ್ರಶ್ನೆಯನ್ನು ಬಿಡಿಸುವಾಗ ಮೆದುಳಿನ ಆಯಾ ಭಾಗದಲ್ಲಿ ಆಗುವ ಬದಲಾವಣೆಗಳನ್ನು ಗುರುತಿಸಿ, ಅದರ ಬಗ್ಗೆ ಆಳವಾಗಿ ಸಂಶೋಧನೆ ಮಾಡಿ ಎಲ್ಲವನ್ನು ಗಣಕಯಂತ್ರದಲ್ಲಿ ನೋಂದಾಯಿಸುವುದು. ಉದಾಹರಣೆಗೆ, ಸ್ಮೃತಿ ಭಾಗದಲ್ಲಿ ಯಾವುದಾದರೊಂದು ಮಾಹಿತಿಯು ಯಾವ ರೀತಿ ಸಂಗ್ರಹಿಸಲ್ಪಡುತ್ತದೆ ಎಂಬುದನ್ನು, ಆ ಭಾಗದಲ್ಲಿ ಬದಲಾವಣೆಯಾಗುವ, ಸೂಕ್ಷ್ಮಾತಿಸೂಕ್ಷ್ಮವಾದ ವ್ಯತ್ಯಾಸವನ್ನು, ಫೋಟೋ ತಂತ್ರವನ್ನು ಉಪಯೋಗಿಸಿ, ಕಂಡುಹಿಡಿದು ಅದನ್ನು ಗಣಕಯಂತ್ರದಲ್ಲಿ ಶೇಖರಿಸಿ ಇಡುವುದು. ಈ ರೀತಿ ಬದುಕಿರುವ, ಬುದ್ಧಿವಂತ ಮನುಷ್ಯನ ಮಿದುಳಿನ ನಾಲ್ಕು ಬಗೆಯ ಬುದ್ಧಿವಂತಿಕೆಯನ್ನು ತ್ರಿಮಿತಿಯಲ್ಲಿ ಗಣಕಯಂತ್ರದ ಫ್ಲಾಪಿಯ ಮೇಲೆ ಶೇಖರಿಸಿಡಬಹುದು.

ಆಮೇಲೆ, ಮತ್ತೊಂದು ಆರೋಗ್ಯವಂತ ಮಿದುಳಿನ ಮೇಲೆ ಅಂತಹುದೇ ಬದಲಾವಣೆಗಳನ್ನು, ಕೃತಕವಾಗಿ ಮಾಡಿದಲ್ಲಿ ಮಿದುಳಿನ ಬುದ್ಧಿವಂತಿಕೆಯನ್ನು [illegible]

ಯಲ್ಲಿಯೇ ವಿಕಸಿತಗೊಳಿಸಬಹುದು. ಒಂದೊಂದೇ ಪ್ಯೈಕ್ರಾನ್ ಭಾಗವನ್ನು ಆರಿಸಿ, ಪ್ರಿಸಿಜನ್ ಉಪಯೋಗಿಸಿ ಬುದ್ಧಿವಂತಿಕೆಯನ್ನು ಒಂದು ಮೆದುಳಿನಿಂದ ಮತ್ತೊಂದಕ್ಕೆ ಕಸಿ ಮಾಡಬಹುದು. ಕೃತಕ ಬದಲಾವಣೆಯನ್ನು ಮಾಡಲು ಅತ್ಯಂತ ಸೂಕ್ಷ್ಮ ಹಾಗೂ ಸರಿಯಾದ ಶಕ್ತಿಯ ಸಾಧನವನ್ನು ಉಪಯೋಗಿಸಬೇಕು. ಅದಕ್ಕೆ ಲೇಝರ್ ಬೀಮ್ ಅಥವಾ ಧ್ವನಿ ಲಹರಿಗಳನ್ನು ಉಪಯೋಗಿಸಿ ಮೆದುಳಿಗೆ ಯಾವುದೇ ಅಪಾಯ ಉಂಟಾಗದೇ ಬುದ್ಧಿವಂತಿಕೆಯ ಕಸಿ ಮಾಡಲು ಸಾಧ್ಯ ಎಂದು ಕೃಷ್ಣಸ್ವಾಮಿಯವರ ಹೇಳಿಕೆಯಾಗಿತ್ತು.

ಮೊದಲು ಇದನ್ನು ಅವರು ಪ್ರಾಣಿಗಳ ಮೇಲೆ ಪ್ರಯೋಗಿಸಿದರು. ಒಂದು ಬೆಕ್ಕಿನ ಮರಿಯ ಮುಂದೆ ಬಿಸಿ ಹಾಲನ್ನು ಇಟ್ಟಾಗ ಅದು ಕುಡಿಯಲು ಬಾಯಿ ಹಾಕಿತು. ಬಿಸಿ ತಾಗಿದಾಗ ತಕ್ಷಣ ಬಾಯಿಯನ್ನು ಹೊರ ತೆಗೆಯಿತು. ಈ ಎಲ್ಲಾ ಕ್ರಿಯೆಯಲ್ಲಿ ಅದರ ಮೆದುಳಿನ ಮೇಲೆ ಆದ ಬದಲಾವಣೆಗಳನ್ನು ಗಣಕಯಂತ್ರದ ಮೇಲೆ ನೋಂದಾಯಿಸಲಾಯಿತು. ಮತ್ತೊಂದು ಮರಿಯ ಮೆದುಳಿನ ಮೇಲೆ ಲೇಝರ್ ಬೀಮ್‌ಅನ್ನು ಉಪಯೋಗಿಸಿ ಆ ಬದಲಾವಣೆಗಳನ್ನು ಮಾಡಲಾಯಿತು. ಆ ಬುದ್ಧಿ ಕಸಿಮಾಡಿದ ನಂತರ ಅದರ ಮುಂದೆ ಹಾಲನ್ನು ಇಟ್ಟಾಗ, ಹಾಲಿನ ಬಟ್ಟಲು ಬಿಸಿಯಾಗಿಲ್ಲದಿರುವುದನ್ನು ಸ್ಪರ್ಶದಿಂದ ಖಚಿತಪಡಿಸಿಕೊಂಡು, ಆಮೇಲೆ ಹಾಲು ಕುಡಿಯಲಾರಂಭಿಸಿತು. ಅಂದರೆ ಒಂದು ಮೆದುಳಿನಲ್ಲಿ ಶೇಖರಿಸಲ್ಪಟ್ಟ ಜ್ಞಾನವು, ಕೃತಕವಾಗಿ ಉಪಯೋಗಿಸಿ ಇಂಪ್ಲೋಜ್ ಮಾಡಿದಲ್ಲಿ ಪ್ರತ್ಯಕ್ಷ ಅನುಭವ ಪಡೆಯುವ ಆವಶ್ಯಕತೆ ಮತ್ತೊಂದು ಮೆದುಳಿಗೆ ಇರುವುದಿಲ್ಲ. ಗಣಕ ಯಂತ್ರ ಒಂದು ಫ್ಲಾಪಿಯಿಂದ ವಿದ್ಯುತ್ ಸಂದೇಶವನ್ನು ಮತ್ತೊಂದು ಫ್ಲಾಪಿಗೆ, ಕಡಿಮೆ ಸಮಯದಲ್ಲಿ ಸಹಜವಾಗಿ ವರ್ಗಾಯಿಸುವಂತೆ, ಬಹು ಕಡಿಮೆ ಸಮಯದಲ್ಲಿ ಜೀವಂತ ಮೆದುಳಿನ ನಾಲ್ಕು ಬಗೆಯ ಬುದ್ಧಿವಂತಿಕೆಯನ್ನು ವರ್ಗಾಯಿಸುವುದು ಸಾಧ್ಯವಿದೆ. ಈ ಸಂಶೋಧನೆಯು ಪೂರ್ಣಗೊಂಡು, ಪ್ರಯೋಗ ಮಾಡಲು ಆರಂಭಿಸುವ ಸಮಯಕ್ಕೆ, ಕೃಷ್ಣಸ್ವಾಮಿಯವರಿಗೆ ಬ್ರೇನ್ ಕ್ಯಾನ್ಸರ್ ಆಯಿತು.

ಸಾವನ್ನಪ್ಪುವ ಮೊದಲು, ತಮ್ಮ ಅಪೂರ್ಣ ಕೆಲಸವನ್ನು ಪೂರೈಸಬೇಕೆಂಬ ವಚನವನ್ನು ಅವರು ರಾಜಮಣಿಯಿಂದ ಪಡೆದು, ಇಹಲೋಕದ ಯಾತ್ರೆ ಮುಗಿಸಿದರು.

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸಾಯನ್ಸ್‌ನ ಕಾನ್ಫರೆನ್ಸ್ ಹಾಲ್ ವಿವಿಧ ವಿಭಾಗದ ಅಗ್ರಗಣ್ಯ ಸಂಶೋಧಕರಿಂದ ತುಂಬಿತ್ತು. ದಿಲ್ಲಿ, ಮದ್ರಾಸ್, ಮುಂಬೈನಿಂದ ಹಲವಾರು ಬಾಯೋಫಿಜಿಸಿಸ್ಟ್‌ಗಳು ಇಂದಿನ ಪ್ರಯೋಗವನ್ನು ನೋಡಬೇಕೆಂದು ಬಂದಿದ್ದರು. ಡಾ|| ರಾಜಮಣಿ ಕೃಷ್ಣಸ್ವಾಮಿಯವರು ತಮ್ಮ ಬುದ್ಧಿವಂತಿಕೆಯ ಅಥವಾ ಜ್ಞಾನದ ಕಸಿಯನ್ನು ಮಾಡುವ ಪ್ರಯೋಗವನ್ನು ಪ್ರತ್ಯಕ್ಷವಾಗಿ ಮಾಡಿ ತೋರಿಸುವವರಿದ್ದರು. ಸ್ಟೇಜಿನ ಮೇಲೆ ಬಗೆ ಬಗೆಯ ಉಪಕರಣಗಳನ್ನು ಜೋಡಿಸಿಡಲಾಗಿತ್ತು. ಮೂರು ದೊಡ್ಡ ಸ್ಕ್ರೀನ್‌ಗಳು ಎಲ್ಲರಿಗೂ ಕಾಣುವಂತಿದ್ದವು.

ಪ್ರೇಕ್ಷಕರ ಮೊದಲ ಸಾಲಿನಲ್ಲಿ ಡಾ|| ವನಮಾಲಾ ರಾಘವನ್ ತನ್ನ ಐದು ವರ್ಷದ ಮಗಳು ಹಾಗೂ ಗಂಡನೊಟ್ಟಿಗೆ ಗಂಭೀರವದನೆಯಾಗಿ ಕುಳಿತಿದ್ದಳು.

ಡಾ|| ರಾಜಮಣಿಯವರು ಪ್ರಸ್ತಾವನೆ ಮಾಡಲು ಆರಂಭಿಸಿದಾಗ, ಮೊಟ್ಟಮೊದಲು ತಮ್ಮ ಪತಿ ಡಾ|| ಕೃಷ್ಣಸ್ವಾಮಿಯವರನ್ನು ಕೃತಜ್ಞತೆಯಿಂದ ಉಲ್ಲೇಖಿಸಿ, ''ಇಂದಿನ ಪ್ರಯೋಗದ ಪೂರ್ಣ ರೂಪರೇಷೆ ಡಾ|| ಕೃಷ್ಣಸ್ವಾಮಿಯವರು ಬರೆದಿಟ್ಟಿದ್ದರು. ನಾನು ಅದನ್ನು ಕೇವಲ ಪ್ರತ್ಯಕ್ಷಕ್ಕೆ ತಂದಿದ್ದೇನೆ. ಕಾಲವನ್ನು ಮುಂದೆ ಸಾಗಿಸುವ ಒಂದು ಪ್ರಯೋಗವನ್ನು ಈಗ ನಾವು ನೋಡುವವರಿದ್ದೇವೆ.''

ಸಂಶೋಧನೆ ಮಾಡುವವರ ದೊಡ್ಡ ವೈರಿ ಯಾರೆಂದರೆ ಸಮಯ. ಈಗ ಯಾವುದೇ ಜ್ಞಾನ ಸಂಪಾದನೆಗೆ, ಸಂಶೋಧನೆ ಮಾಡುವಾಗ ಆ ವಿಷಯದ ಜ್ಞಾನವನ್ನು ಪಡೆಯಲು, ಅರ್ಥೈಸಿಕೊಳ್ಳಲು ಮನುಷ್ಯನಿಗೆ ತನ್ನ ಜೀವನದ ಮೂವತ್ತೈದರಿಂದ ನಲ್ವತ್ತು ವರ್ಷಗಳು ಬೇಕಾಗುತ್ತವೆ. ಏಕೆಂದರೆ, ಜ್ಞಾನದ ಮೇಲ್ತುದಿಯನ್ನು ತಲುಪುವ ದಾರಿ ಪಿರಾಮಿಡ್ ನಂತಿರುತ್ತದೆ. ಮೊದಲು ಬಹಳ ಅಗಲವಾದ ಅಡಿಗಲ್ಲು ಹಾಕಬೇಕಾಗುತ್ತದೆ. ಆ ನಂತರ

# ನವಿಲುಗರಿ

(ವಿಭಾ ಸ್ಮೃತಿಯಲ್ಲಿ)



ಆ ಗಳಿಗೆಯ ಸತ್ಯ
ನಿತ್ಯ ಸಾವಾದದ್ದು
ವಿಪರ್ಯಾಸ ಗೆಳತಿ
ಕನಸುಗಳು
ಹೂವಾಗಿ ಬಿರಿದು
ಘಮಘಮಿಸುವಷ್ಟರಲ್ಲೆ
ಕಾಯಲಾರದೆ ಹೋದೆಯ ?
ಸುಪ್ತನಿದ್ರೆಯಲಿ ಎಚ್ಚರಗೊಳ್ಳುವ
ವಾಸ್ತವದ ಮುಳ್ಳುಗಳು
ಹೇಳದೆಯೂ ಹೇಳುವುದು
ಒಂದೇ ಸತ್ಯ :
ಈ ಬದುಕೇ ಹೀಗೆ ಎಂದು.

*　　*　　*

ಹಾಳೆಗಳ ನಡುವೆ
ಎಂದೋ ಹುದುಗಿಸಿಟ್ಟಿರುವ
ನವಿಲುಗರಿ ಎಂದಾದರೊಂದು ದಿನ
ಮರಿ ಮಾಡುವುದೆಂದೇ ನನ್ನ ನಂಬಿಕೆ;
ಆ ಗರಿಗೂ ಒಂದು ಕಣ್ಣಿದೆ,
ಕಣ್ಣಿನೊಳಗೆ ನೂರಾರು ಬಣ್ಣಗಳಿವೆ,
ಬಣ್ಣಗಳೊಳಗೆ ಕನಸೂ...
ನನ್ನ ಮನಸ ಕಣ್ಣಿನೊಳಗೆ
ಹನಿಯಾಡುತಿಹ ಕಣ್ಣಿನೊಳಗೆ
ಹನಿಯಾಡುತಿಹ ಇಂತದೇ
ಬಣ್ಣಗಳ ಕನಸು ನೀನು ಎಂದಾದರೂ, ಹೇಗಾದರೂ
ತಿರುಗಿ ಬರುವೆ; ಕನಸುಗಳಿಗೆ ಜೀವ ಕೊಡುವೆ
ಎಂದೇ ನಂಬಿವೆ;
ನಿನ್ನಂತ ಇಲ್ಲೇ ಉಳಿದಿದೆಯಲ್ಲ
ಭರವಸೆಯ ಬೆಳಕಾಗಿ ?!?

ಜ. ನಾ. ತೇಜಶ್ರೀ
ಉಪನ್ಯಾಸಕಿ, ನಂ. ೬೫೦, ವಿಶ್ವೇಶ್ವರಯ್ಯ ರಸ್ತೆ
ವಿದ್ಯಾನಗರ, ಹಾಸನ - ೫೭೩ ೨೦೧

ನಿಧಾನವಾಗಿ ಒಂದು ವಿಶಿಷ್ಟ ಕ್ಷೇತ್ರದಲ್ಲಿ ಗಮನವನ್ನು ಕೇಂದ್ರೀಕರಿಸಬೇಕಾಗುತ್ತದೆ. ಆದ್ದರಿಂದ ರಾಮಾನುಜನರಂತಹ ಒಬ್ಬಿಬ್ಬರನ್ನು ಹೊರತುಪಡಿಸಿದರೆ, ಸಂಶೋಧಕರಿಂದ ಆತನ ನಲ್ವತ್ತು, ನಲ್ವತ್ತೈದರ ನಂತರವೇ ಏನಾದರೂ ಸಂಶೋಧನೆ ಆಗಲು ಸಾಧ್ಯ. ಅಂದರೆ ಆ ನಂತರ ಕೇವಲ ಹತ್ತು ಹನ್ನೆರಡು ವರ್ಷಗಳು ಮಾತ್ರ ಲಭ್ಯವಾಗುತ್ತವೆ. ದೇಹದ ಹಾಗೂ ಮನಸ್ಸಿನ ಕಾರ್ಯಕ್ಷಮತೆ ಐವತ್ತರ ನಂತರ ಇಳಿಮುಖವಾಗುತ್ತದೆಂಬುದು ಸತ್ಯ. ಅದನ್ನು ನಾವು ಬದಲಾಯಿಸಲು ಸಾಧ್ಯವಿಲ್ಲ. ಅದರ ಪರಿಣಾಮವಾಗಿ ಬಹಳ ಕಡಿಮೆ ಸಮಯ ಸಂಶೋಧನೆ ಮಾಡಲು ದೊರಕುತ್ತದೆ. ಅಷ್ಟೇ ಅಲ್ಲದೆ, ಆ ವಯಸ್ಸಿಗೆ ಇತರ ಕರ್ತವ್ಯಗಳು ಸಂಶೋಧನೆ ಮಾಡುವುದಕ್ಕೆ ಅಡ್ಡಿಯಾಗುತ್ತವೆ. ಇದರಿಂದ ಉಪಯೋಗಿಸಬಹುದಾಂತಹ ಸಮಯ ಇನ್ನಷ್ಟು ಕಡಿಮೆಯಾಗುತ್ತದೆ. ಡಾ॥ ಕೃಷ್ಣಸ್ವಾಮಿಯವರು ಇನ್ನು ಹತ್ತು ಹದಿನೈದು ವರ್ಷ ಬದುಕಿದ್ದರೆ, ಅವರಿಂದ ಮತ್ತಷ್ಟು ಉತ್ತಮ ಪರಿಪೂರ್ಣವಾದ ಸಂಶೋಧನೆ ಆಗುತ್ತಿತ್ತೆಂಬುದರಲ್ಲಿ ನನಗೆ ಯಾವ ಸಂದೇಹವಿಲ್ಲ.

ಡಾ॥ ಕೃಷ್ಣಸ್ವಾಮಿಯವರು ಯಾವಾಗಲೂ ಒಂದು ಮಾತು ಹೇಳ್ತಿದ್ದರು: ''ಯಾವುದೇ ಶಾಖೆಯ ಜ್ಞಾನವು ವಯಸ್ಸಿನ ಹತ್ತು ಹನ್ನೆರಡನೇ ವಯಸ್ಸಿಗೆ ದೊರೆತರೆ, ಬುದ್ಧಿವಂತಿಕೆಯನ್ನು ಚಿಕ್ಕ ವಯಸ್ಸಿನಲ್ಲೇ ವಿಕಾಸಗೊಳಿಸಿದರೆ ಸಂಶೋಧನೆಯ ಕ್ಷೇತ್ರದಲ್ಲಿ ಅಪೂರ್ವ ಕ್ರಾಂತಿ ತರಬಹುದು. ಇಂದಿನ ಪ್ರಯೋಗದಿಂದ ಅವರ ಆ ಹೇಳಿಕೆ ಪ್ರತ್ಯಕ್ಷವಾದುದನ್ನು ನಾವು ನೋಡುವವರಿದ್ದೇವೆ.''

ಗಣಕಯಂತ್ರದ ಮೇಲೆ ಮೊದಲನೆಯ ಫ್ಲಾಪಿಯನ್ನು ಹಾಕಿ ಗಂಭೀರ ಧ್ವನಿಯಲ್ಲಿ ರಾಜಮಣಿಯವರು ಹೇಳತೊಡಗಿದರು –

''ಈಗ ನಾವು ನೋಡುತ್ತಿರುವುದು ನನ್ನ ಮಗಳಾದ ಡಾ॥ ವನಮಾಲಾ ರಾಘವನ್. ಇವಳ ಮೆದುಳಿನ ಥ್ರೀ ಡೈಮೆನ್ಶನ್ ಚಿತ್ರ.''

ಮೊಟ್ಟಮೊದಲು ಸ್ಕ್ರೀನ್ ಮೇಲೆ ಮೆದುಳಿನ ಫೋಟೋ ಕಾಣತೊಡಗಿತು. ಒಂದು ವಿಶಿಷ್ಟವಾದ ಭಾಗಕ್ಕೆ ಗಮನ ಸೆಳೆಯುತ್ತಾ ಅದರ ಚಿಕ್ಕ ಭಾಗವನ್ನು ದೊಡ್ಡದಾಗಿಸುತ್ತಾ ಸ್ಕ್ರೀನ್ ತುಂಬುವಷ್ಟು ದೊಡ್ಡದಾಗಿಸಿದರು. ನಿಧಾನವಾಗಿ ಬೇರೆ ಬೇರೆ ಕೋನಗಳಲ್ಲಿ ಮೆದುಳಿನ ಬುದ್ಧಿವಂತಿಕೆಯನ್ನು ತೋರಿಸುವ ನಾಲ್ಕು ಭಾಗಗಳನ್ನು ಸ್ಮೃತಿ, ಗ್ರಹಣ ಶಕ್ತಿ, ರೀಝನ್ ಹಾಗೂ ಪ್ರಜ್ಞೆಯ ಮಾದರಿ ಭಾಗವನ್ನು ತಮ್ಮ ಮಾತಿನಿಂದ ತಿಳಿಸಿಹೇಳುತ್ತಾ ಪ್ರೇಕ್ಷಕರಿಗೆ ಸ್ಪಷ್ಟೀಕರಿಸಿದರು.

ಆಮೇಲೆ ಮತ್ತೊಂದು ಫ್ಲಾಪಿಯನ್ನು ಹಾಕಿ ತಮ್ಮ ಮಾತು ಮುಂದುವರಿಸಿದರು : ''ಈಗ ನಾವು ನನ್ನ ಮೊಮ್ಮಗಳು ಕುಮಾರಿ ಪವಿತ್ರಾ, ಅಂದರೆ ಪುಟ್ಟಿ ರಾಘವನ್. ಇವಳ ಒಂದು ತಿಂಗಳ ಹಿಂದೆ ತೆಗೆದ ಮೆದುಳಿನ ಛಾಯಾಚಿತ್ರವನ್ನು ನೋಡುವವರಿದ್ದೇವೆ. ಅವಳ ವಯಸ್ಸು ಐದು ವರ್ಷ. ಆದರೆ ತಾಯಿ ಹಾಗೂ ಮಗಳ ವಿವಿಧ ಭಾಗಗಳ ಸೆಲ್‌ಗಳ ಸಮಾನತೆಯನ್ನು ನೀವು ನೋಡಬಹುದು. ಆದರೂ ಅವೆರಡರಲ್ಲಿ ಅತೀ ಸೂಕ್ಷ್ಮವಾದ ವ್ಯತ್ಯಾಸಗಳಿರುವುದನ್ನು, ಬಹುದೊಡ್ಡದಾಗಿಸಿರುವ ಈ ಚಿತ್ರದ ಸಹಾಯದಿಂದ ನೀವು ನೋಡಬಲ್ಲಿರಿ. ಕುಮಾರಿ ಪುಟ್ಟಿಯ ಮೆದುಳಿನ ಆಯಾ ಭಾಗದ ಸೆಲ್‌ಗಳ ಮೇಲೆ, ಡಾ॥ ಕೃಷ್ಣಸ್ವಾಮಿಯವರು ಬರೆದಿಟ್ಟಂತೆ ನಾನು ಕೃತಕವಾಗಿ ಬದಲಾವಣೆಯನ್ನು ತರಿಸಿದೆ. ಅದಕ್ಕಾಗಿ ಬಹಳ ಪ್ರಿಸೈಜ್ ಲೇಸರ್ ಬೀಮ್ ಅನ್ನು ಉಪಯೋಗಿಸಲಾಯಿತು. ಕೆಲವು ಬಾರಿ ಧ್ವನಿಲಹರಿಗಳನ್ನು ಉಪಯೋಗಿಸಲಾಯಿತು. ಏಕೆಂದರೆ ಹಳದಿ ಅಥವಾ ಹಸಿರು ಬಣ್ಣದ ಲೇಸರ್ ಬೀಮ್‌ಗಳು, ಒಂದು ವಿಶಿಷ್ಟ ಧ್ವನಿಲಹರಿಗಳು, ಜೀವಂತ ಸೆಲ್‌ಗಳಿಗೆ ಅಪಾಯ ಮಾಡುವುದಿಲ್ಲ. ಆದರೆ ಅದರಲ್ಲಿ ಬದಲಾವಣೆ ತರಬೇಕಿತ್ತು. ಎರಡು ಮೆದುಳಿನ ವಿಶಿಷ್ಟ ಭಾಗದ ಬ್ಲೋಅಪ್‌ಗಳನ್ನು ಉಪಯೋಗಿಸಿ ಬದಲಾವಣೆಗಳನ್ನು ಮಾಡಲಾಯಿತು.''

ಮೂರನೆಯ ಫ್ಲಾಪಿ ಹಾಕುತ್ತಾ ಅವರು ಮುಂದುವರೆಸಿದರು : ''ಪುಟ್ಟಿ ರಾಘವನ್‌ನ ಮೆದುಳಿನ ಈ ಚಿತ್ರ ಮೊನ್ನೆ ತೆಗೆದುಕೊಳ್ಳಲಾಗಿದೆ. ಅವಳ ಪ್ರತಿಯೊಂದು ಚದುರ ಮೈಕ್ರಾನ್ ಹಾಗೂ ಅವಳ ತಾಯಿಯ ಕರೆಸ್ಪಾಂಡಿಂಗ್ ವಿಭಾಗದ ಚದುರ ಮೈಕ್ರಾನ್‌ನಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಈಗ ಇಬ್ಬರ ಮೆದುಳಿನ ನಕ್ಷೆ ಸಮಾನವಾಗಿವೆ. ಈ ರೀತಿ ಇಂಪ್ರೋಝ್ ಮಾಡಲು ನನಗೆ ಹದಿನೇಳು ದಿನಗಳು ಬೇಕಾದವು. ಅದಕ್ಕೆಂದೇ ಪ್ರತಿದಿನ ಹನ್ನೆರಡು ಗಂಟೆ ಕಾಲ ಬೇಕಾಯಿತು. ಅಂದರೆ ಪುಟ್ಟಿ ರಾಘವನ್‌ಳಿಗೆ ಹದಿನೇಳೇ ದಿವಸಗಳಲ್ಲಿ ಎಷ್ಟು ಜ್ಞಾನ ಲಭಿಸಿತೋ, ಅವಳ ಬುದ್ಧಿವಂತಿಕೆಯನ್ನು ಒಂದೊಂದಾಗಿ ವಿಕಸಿತಗೊಳಿಸಲಾಯಿತೋ, ಅಷ್ಟು ಜ್ಞಾನವನ್ನು ಪಡೆಯಲು ಅವಳ ತಾಯಿಗೆ ಇಪ್ಪತ್ತೆಂಟು ವರ್ಷಗಳು ಬೇಕಾದವು.''

ರಾಜಮಣಿಯವರ ಭಾಷಣ ಮುಗಿದಾಗ, ಗುಂಡುಸೂಜಿ ಬಿದ್ದರೂ ತಿಳಿಯುವಷ್ಟು ಶಾಂತತೆ ಹರಡಿತ್ತು. ಮೊಟ್ಟಮೊದಲು ಎರಡನೇ ಸಾಲಿನಲ್ಲಿ ಕುಳಿತಿದ್ದ ಡಾ॥ ರಾಮಮೂರ್ತಿಯವರು ಎದ್ದು, ತಮ್ಮ ಕಿಸೆಯೊಳಗಿಂದ ಒಂದು ದೊಡ್ಡ ಚಾಕಲೇಟನ್ನು ಹೊರತೆಗೆದು ಪುಟ್ಟಿಯ ಎದುರು ಹಿಡಿದು, ''ಪುಟ್ಟಿ, ನೀರಿನ ರಾಸಾಯನಿಕ ಫಾರ್ಮ್ಯುಲಾವನ್ನು ಹೇಳಿದರೆ ಈ ಇಡೀ ಚಾಕಲೇಟ್ ನಿನಗೆ ಬಹುಮಾನ.''

ಡಾ॥ ರಾಮಮೂರ್ತಿಯವರು, ಡಾಕ್ಟರೇಟ್ ಮಾಡುತ್ತಿದ್ದಾಗ ವನಮಾಲಾಳ ಗೈಡ್ ಆಗಿದ್ದರು. ಒಂದು ತಿಂಗಳ ಹಿಂದೆಯಷ್ಟೆ ಪುಟ್ಟಿಯ ಹುಟ್ಟುಹಬ್ಬದ ಕೇಕನ್ನು ಅವರು ತಿಂದಿದ್ದರು.

ಅವರ ಕೈಯಲ್ಲಿದ್ದ ಕ್ಯಾಡಬರಿಯನ್ನು ಅಲಕ್ಷಿಸಿ, ''ಸರ್, ಎಚ್‌ಟೂಓ'' ಎಂದಳು ಪುಟ್ಟಿ. ಅವಳ ಮಾತಿನ ಧಾಟಿ, ಅವರು ಕೆಮಿಸ್ಟ್ರಿಯ ಸಂಶೋಧಕನಿಗೆ ಇಂತಹ ಪ್ರಶ್ನೆ ಕೇಳುವ ತಪ್ಪು ಮಾಡಿದ್ದಾರೆ ಎಂಬಂತಿತ್ತು.

ಡಾ॥ ರಾಮಮೂರ್ತಿಯವರು ನಿಧಾನವಾಗಿ, ಹೆಚ್ಚೆಚ್ಚು ಕಠಿಣ ಪ್ರಶ್ನೆಗಳನ್ನು ಕೇಳತೊಡಗಿದಾಗ ಪುಟ್ಟಿಯು ಬಹುಸುಲಭವಾಗಿ ಅವುಗಳನ್ನು ಉತ್ತರಿಸುತ್ತಿದ್ದಳು. ಆನಂತರ ಒಬ್ಬೊಬ್ಬರಾಗಿ ಎದ್ದು ಅವಳನ್ನು ಪರೀಕ್ಷಿಸತೊಡಗಿದರು. ಯಾವ ಕೆಮಿಸ್ಟ್ರಿಯ ಶಾಖೆಯಲ್ಲಿ ವನಮಾಲಾ ಪೋಸ್ಟ್ ಡಾಕ್ಟೋರಲ್ ಸಂಶೋಧನೆ ಮಾಡುತ್ತಿದ್ದಳೋ, ಆ ವಿಷಯದ ಬಗ್ಗೆ ಸಂಪೂರ್ಣ ಆತ್ಮವಿಶ್ವಾಸದಿಂದ ಪುಟ್ಟಿ ಸಹಜವಾಗಿ ಉತ್ತರಿಸುತ್ತಿದ್ದಳು. ಒಂದು ತಿಂಗಳ ಹಿಂದೆ, ಸೀನಿಯರ್ ಕೆ.ಜಿ.ಯಲ್ಲಿ ಎಬಿಸಿಡಿ, ಒನ್, ಟೂ, ಥ್ರಿ ಕಲಿಯುತ್ತಿದ್ದ ಈ ಪುಟ್ಟ ಹುಡುಗಿಯ ಕೆಮಿಸ್ಟ್ರಿಯ ಜ್ಞಾನ ನಂಬಲಸಾಧ್ಯವಾಗಿತ್ತು.

ಡಾ॥ ರಾಜಮಣಿಯವರ ಪ್ರಯೋಗ ಮುಗಿದಿತ್ತು. ಬಹಳ ಹೊತ್ತು ಕರತಾಡನವಾಯಿತು. ಐ.ಐ.ಎಸ್ಸಿಯ ಡೈರೆಕ್ಟರ್ ಅವರ ಬಳಿ ಬಂದರು. ''ಕಂಗ್ರ್ಯಾಚ್ಯುಲೇಶನ್ಸ್ ಡಾ॥ ರಾಜಮಣಿ. ಈ ಪ್ರಯೋಗದ ಯಶಸ್ಸಿನ ಕಾರಣ ನೀವು ನಮ್ಮ ಇನ್‌ಸ್ಟಿಟ್ಯೂಟ್‌ನ ಹೆಸರನ್ನು ಜಗತ್ ವಿಖ್ಯಾತಗೊಳಿಸಿದಿರಿ. ಇದರಿಂದ ಸಂಶೋಧನಾ ಕ್ಷೇತ್ರದಲ್ಲಿ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿ ಸಂಭವಿಸುವುದೆಂಬ ವಿಶ್ವಾಸ ನನಗಿದೆ. ಈ ಸಂಶೋಧನೆಯನ್ನು ಇಡೀ ಪ್ರಪಂಚಕ್ಕೆ ತಿಳಿಯಪಡಿಸುವಲ್ಲಿ ನಾನು ನಿಮಗೆ ಬೇಕಾದ ಎಲ್ಲಾ ಸಹಾಯವನ್ನು ನೀಡುವೆನೆಂಬ ವಿಶ್ವಾಸವಿರಲಿ. ನಾಳೆಯಿಂದಲೇ, ನಾವು ಇದರ ಬಗ್ಗೆ ಮುನ್ನಡೆಯೋಣ'' ಎಂದರು.

ಮಗಳು, ಅಳಿಯನೊಂದಿಗೆ, ಮೊಮ್ಮಗಳನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಗಾಡಿಯಲ್ಲಿ ಹಿಂತಿರುಗುತ್ತಿದ್ದ ರಾಜಮಣಿಯವರಿಗೆ ಗಂಡನ ಅಪೂರ್ಣ ಕೆಲಸವನ್ನು ಪೂರೈಸಿದ ಸಮಾಧಾನವಾಗಿತ್ತು. ಅವರನ್ನು ಮನೆಗೆ ಬಿಟ್ಟು ರಾಘವನ್ ಹಾಗೂ ವನಮಾಲಾ ತಮ್ಮ ಮನೆಗೆ ಮರಳಿದರು.

ರಾತ್ರಿ ಬಹಳ ಹೊತ್ತು ರಾಜಮಣಿಯವರಿಗೆ ನಿದ್ದೆ ಬರಲಿಲ್ಲ. ಕೃಷ್ಣಸ್ವಾಮಿಯವರ ನೆನಪು ಅವರನ್ನು ಕಾಡುತ್ತಿತ್ತು. ಆಮೇಲೆ ಯಾವಾಗಲೊ ಒಮ್ಮೆ ನಿದ್ದೆ ಆವರಿಸಿತು.

ಫೋನಿನ ಕರೆಗಂಟೆಯ ಕರ್ಕಶ ಧ್ವನಿಯಿಂದ ಅವರಿಗೆ ಎಚ್ಚರವಾಯಿತು. ಒಂದು ಕ್ಷಣ ಅವರಿಗೆ ಭ್ರಮೆಯೆಂದು ತೋರಿತು. ಫೋನ್ ಬದಿಯ ಗಡಿಯಾರದಲ್ಲಿ ನಾಲ್ಕು ಇಪ್ಪತ್ತಾಗಿತ್ತು. ರಿಸಿವರ್‌ನ್ನು ಕಿವಿಗಿರಿಸಿದಾಗ ವನಮಾಲಾಳ ಧ್ವನಿ ಕೇಳಿದ ಕೂಡಲೆ, ಚಾಟಿ ಏಟು ಪಡೆದಂತೆ, ಅವರು ಸಂಪೂರ್ಣ ಎಚ್ಚರಗೊಂಡರು.

''ಅಮ್ಮ, ನೀನು ಸರಿಯಾಗಿ ಎಚ್ಚರ ಆಗಿದಿಯಾ ತಾನೆ ?''

''ಹೌದು ವನ್ನಿ, ಇಷ್ಟುಹೊತ್ತಿಗೆ ಏಕೆ ಫೋನ್ ಮಾಡಿದೆ ? ಏನಾಯ್ತು ?''

''ಹದಿನೈದು ಇಪ್ಪತ್ತು ನಿಮಿಷಗಳ ಮೊದಲು ಪುಟ್ಟಿ ನಿದ್ದೆಯಿಂದ ಎದ್ದು ನೇರವಾಗಿ ನಮ್ಮ ರೂಮಿಗೆ ಬಂದಳು. ಗಾಢ ನಿದ್ರೆಯಲ್ಲಿದ್ದ ರಾಘವನ್‌ನ್ನು ಅವಳು ಎಬ್ಬಿಸಿದಳು. ಅವರ ಸದ್ದಿನಿಂದ ನಾನು ಎಚ್ಚೆತ್ತೆ. ಪುಟ್ಟಿಪುಟ್ಟಿ ಅಂತಾ ಅವನು ಅವಳನ್ನ ದೂರ ತಳ್ತಾ ಇದ್ದಾ.''

''ಹಾಂ. ವನ್ನಿ, ಅವಳು ಹೆದರಿರಬಹುದು. ಎಷ್ಟು ಚಿಕ್ಕ ಹುಡುಗಿ ಅವಳು. ಅಲ್ಲದೇ ನಿನ್ನೆ ಎಷ್ಟೊಂದು ಜನರೆದುರಿಗೆ ಅವಳಿಗೆ ಪ್ರಶ್ನೆಗಳನ್ನು ಕೇಳಿದ್ದಾಯಿತು. ಎಷ್ಟು ಧೈರ್ಯವಾಗಿ ಉತ್ತರ ಕೊಟ್ಟಳು ಅಂತಾ ನೀನೆ ನೋಡ್ಡಿಯಲ್ಲಾ. ಅವಳು ಜಗತ್ತಿನ ಮೊಟ್ಟಮೊದಲ ಸೂಪರ್ ಚೈಲ್ಡ್ ಗೊತ್ತೇನು ? ಅವಳನ್ನ ಹತ್ತಿರದಲ್ಲಿ ಮಲಗಿಸಿಕೋ. ಸುಮ್ಮನೆ ಚಿಂತೆ ಮಾಡಬೇಡ.''

''ಅಮ್ಮ'' ವನಮಾಲಾಳ ಧ್ವನಿ ವಿಚಿತ್ರವಾಗಿ ಬರುತ್ತಿತ್ತು.

''ಅಮ್ಮ ನನ್ನೆದುರಿಗೆ ಅವಳು ರಾಘವನ್‌ಗೆ ತಬ್ಬಿಕೊಂಡು ಏನು ಹೇಳಿದಳು ಗೊತ್ತಾ ? 'ರಾಘವನ್ ಡಾರ್ಲಿಂಗ್, ಈಗ ನನಗೆ ಒಬ್ಬ ಮಗ ಬೇಕು. ನಿನ್ನ ಹಾಗೆ ಕಾಣುವವ. ಪುಟ್ಟಿಗೆ ಐದು ವರ್ಷ ಆದ ತಕ್ಷಣ, ನಾವು ಮತ್ತೊಂದು ಮಗುವನ್ನು ಪ್ಲಾನ್ ಮಾಡಿದ್ದೆವಲ್ಲಾ. ಮರೆತುಬಿಟ್ಟೆಯಾ ?' ಎಂದಳಮ್ಮ. 'ಅಮ್ಮ, ನೀನು ಕೇಳ್ತಾ ಇದೀಯಾ ತಾನೆ ?'

ಡಾ॥ ರಾಜಮಣಿಯವರ ಕೈಯಿಂದ ರಿಸಿವರ್ ಕೆಳಗೆ ಜಾರಿತ್ತು.

ಅನುವಾದ : ಶ್ರೀಮತಿ ಮಾಣಿಕ್ಯ ಪಟವರ್ಧನ್
ಎ-೧೦೭, ಓಮನ್ ಟೋಪಾಝ್, ಸರ್ಜಾಪುರ ರಸ್ತೆ
ಅಗರ, ಕೋರಮಂಗಲ, ಬೆಂಗಳೂರು - ೫೬೦ ೦೩೪

**ನ**ಮ್ಮ ದೇಶ ಡಂಕೆಲ್ ಒಪ್ಪಂದಕ್ಕೆ ಸಹಿ ಹಾಕಬೇಕಾದ ದಿನದಿಂದಲೂ (೧೯೮೬) ಪೇಟೆಂಟ್ ಕುರಿತ ಚರ್ಚೆ ಸುದ್ದಿ ಮಾಡಿದೆ. ಭಾರತದ ಔಷಧಿ ಉದ್ಯಮ ಜಗತ್ತಿನಲ್ಲಿ ನಾಲ್ಕನೇ ಸ್ಥಾನವನ್ನು ಹೊಂದಿದೆ. ಭಾರತದ ಯಶಸ್ವೀ ಉದ್ಯಮಗಳಲ್ಲಿ ಔಷಧಿ ಉದ್ಯಮಕ್ಕೆ ಮೊದಲ ಸ್ಥಾನವಿದೆ. ಈಗಿರುವ ಪೇಟೆಂಟ್ ಬದಲಿಸಲು ಪ್ರಯತ್ನಗಳು ಜಾರಿಯಲ್ಲಿವೆ, ಇದರಿಂದ ಔಷಧಿ ಉದ್ಯಮಕ್ಕೆ ತೊಂದರೆ ಉಂಟಾಗಲಿದೆ. ಇದರ ಪರಿಣಾಮದಿಂದಾಗಿ ಜನಾರೋಗ್ಯಕ್ಕೆ ಆಪತ್ತು ಬರಲಿದೆ ಎಂಬುದು ಈಗಾಗಲೇ ಸ್ಪಷ್ಟವಾಗಿದೆ. ಇದಕ್ಕೆ ಸಂಬಂಧಿಸಿದ ಕೆಲವು ವಿಷಯಗಳನ್ನು ಚರ್ಚೆ ಮಾಡೋಣವೇ ?

**ಪೇಟೆಂಟ್ ಎಂದರೇನು ?**

ಪೇಟೆಂಟ್ ಎಂದರೆ ಒಬ್ಬ ವ್ಯಕ್ತಿ ಯಾವುದಾದರೂ ಹೊಸ ವಸ್ತುವನ್ನು ಕಂಡು ಹಿಡಿದಿದ್ದರೆ, ಅವರ ಪರಿಶ್ರಮವನ್ನು ಗುರುತಿಸಿ ಅವರಿಗೆ ಮಾನ್ಯತೆ ಕೊಡುವುದು ಹಾಗೂ ಯಾರೇ ಇತರರು ಆ ವ್ಯಕ್ತಿಯು ಕಂಡುಹಿಡಿದ ವಸ್ತುವನ್ನು ಉಪಯೋಗಿಸಿ ಲಾಭಮಾಡಿ ಕೊಳ್ಳದಂತೆ ತಡೆಯುವುದು. ಪೇಟೆಂಟ್ ಹಕ್ಕನ್ನು ಕೊಡಲು ಪ್ರತಿ ದೇಶದಲ್ಲೂ ಪೇಟೆಂಟ್ ಕಛೇರಿಗಳಿರುತ್ತವೆ ಹಾಗೂ ಪೇಟೆಂಟ್ ಅಧಿಕಾರಿ ಆ ಹೊಸ ವಸ್ತುವನ್ನು ಪರಿಶೀಲಿಸಿ ಆ ವಸ್ತು ಹೊಸದಾಗಿದೆಯೇ ಹಾಗೂ ಇತರೇ ಯಾರೂ ಕಂಡುಹಿಡಿದಿಲ್ಲವೇ ಎಂದು ಪರಿಶೀಲಿಸಿದ ನಂತರವೇ ಪೇಟೆಂಟ್ ಕೊಡುತ್ತಾರೆ. ಪೇಟೆಂಟ್ ಕೊಡುವಿಕೆ ಔಷಧಿಗಳಿಗೂ ಅನ್ವಯಿಸುತ್ತದೆ. ಪೇಟೆಂಟ್ ಕೊಡುವ ಪದ್ಧತಿ ಮೊಟ್ಟಮೊದಲಿಗೆ ಪ್ರಾರಂಭವಾದದ್ದು ಇಟಲಿಯಲ್ಲಿ (೧೫ನೇ ಶತಮಾನ). ನಂತರ ಫ್ರಾನ್ಸ್, ಇಂಗ್ಲೆಂಡ್, ಅಮೆರಿಕಾ ಹಾಗೂ ಜಪಾನಿನಲ್ಲಿ ಔದ್ಯೋಗಿಕ ಕ್ರಾಂತಿಯಾದಾಗಿನಿಂದ ಪೇಟೆಂಟ್ ಉಪಯೋಗ ಸಾಮಾನ್ಯ ವಾಗಿದೆ. ಪೇಟೆಂಟ್ ಉಪಯೋಗವನ್ನು ಹಲವಾರು ಕ್ಷೇತ್ರಗಳಿಗೆ ವಿಸ್ತರಿಸಲಾಗಿದೆ ಹಾಗೂ ಪೇಟೆಂಟ್ ಸಂಖ್ಯೆಯಲ್ಲೂ ಹೆಚ್ಚಳವಾಗಿದೆ. ಪೇಟೆಂಟ್ ಹೆಚ್ಚಾದಂತೆ ಆಯಾ ದೇಶಕ್ಕೆ ಹೆಚ್ಚು ಆದಾಯವು ಬರತೊಡಗಿದೆ. ಪೇಟೆಂಟ್ ಪಡೆದ ವ್ಯಕ್ತಿಯ ಹಕ್ಕುಗಳನ್ನು ಕಾಪಾಡಲು ಹಾಗೂ ಇತರರು ಈ ಹಕ್ಕನ್ನು ಉಲ್ಲಂಘಿಸದಂತೆ ತಡೆಯಲು ಸರಕಾರಗಳು ಪೊಲೀಸ್ ಹಾಗೂ ಸೈನ್ಯವನ್ನು ಉಪಯೊಗಿಸಲು ಮುಂದಾಗಿವೆ.

ಮೊದಲಿಗೆ ಕೇವಲ ಸಂಶೋಧಕನಿಗೆ ಪೇಟೆಂಟ್ ಹಕ್ಕು ಕೊಡಲಾಗುತ್ತಿತ್ತು. ಆದರೆ ಈಗಿನ ದಿನಗಳಲ್ಲಿ ಕೇವಲ ಒಬ್ಬ ವ್ಯಕ್ತಿ ವಸ್ತುವಿನ ಸಂಶೋಧನೆಯಲ್ಲಿ ತೊಡಗಿದ್ದರೂ, ದೊಡ್ಡ ದೊಡ್ಡ ಕಂಪನಿಗಳು ಅಪಾರ ಹಣ ಹೂಡಿ ಸಂಶೋಧನೆ ಹಾಗೂ ವಸ್ತು ಉತ್ಪಾದನೆಯಲ್ಲಿ ತೊಡಗಿ ಪೇಟೆಂಟ್ ಪಡೆಯಲು ಮುಂದಾಗಿವೆ ಹಾಗೂ ಇದರಿಂದಾಗಿ ಒಬ್ಬ ವ್ಯಕ್ತಿಗೆ ಕೊಡಲಾಗುತ್ತಿದ್ದ ಮಾನ್ಯತೆ, ದೊಡ್ಡ ಕಂಪನಿಗಳಿಗೆ ಲಭಿಸುತ್ತದೆ. ಈ ದೊಡ್ಡ ಕಂಪನಿಗಳು ಆ ಪದಾರ್ಥವನ್ನು ಮಾರಿ ಅಪಾರ ಲಾಭ ಗಳಿಸಲು ಮುಂದಾಗಿ, ಜನ ಸಾಮಾನ್ಯರನ್ನು ಶೋಷಣೆ ಮಾಡುತ್ತಿವೆ. ಪೇಟೆಂಟ್ ಮಾನ್ಯತೆ ಯಾವ ಉದ್ದೇಶದಿಂದ ಪ್ರಾರಂಭವಾಯಿತೋ ಅದು ಈಗ ಇಲ್ಲದಂತಾಗಿ, ಸಂಶೋಧನೆಯಿಂದ ಲಾಭ ಮಾಡಿಕೊಂಡು ಜನಸಾಮಾನ್ಯರನ್ನು ಕಡೆಗಣಿಸುವಂತಾಗಿದೆ.

ಆದರೆ ದುರ್ಬಲ ರಾಷ್ಟ್ರಗಳ ಕಥೆಯೇ ಬೇರೆ. ಯಾವುದೇ ದುರ್ಬಲ ರಾಷ್ಟ್ರ ಪೇಟೆಂಟ್ ಕೊಟ್ಟರೂ ಅದನ್ನು ಜಾರಿಗೆ ತರಲು ಅಗತ್ಯವಾದ ರಕ್ಷಣಾಪಡೆಗಳು ಇಲ್ಲದಿದ್ದಲ್ಲಿ ಅಲ್ಲಿ ಪೇಟೆಂಟ್ ಪಡೆದವನಿಗೆ ರಕ್ಷಣೆ ಸಿಗದಂತಾಗುತ್ತದೆ. ಕ್ರಮೇಣ ಬಡ ರಾಷ್ಟ್ರಗಳ ಪೇಟೆಂಟ್ ಗಳನ್ನು ಉಲ್ಲಂಘಿಸಿ ಶ್ರೀಮಂತ ರಾಷ್ಟ್ರಗಳು ಇತರರ ಪೇಟೆಂಟ್‌ಗಳನ್ನು ತಮ್ಮದಾಗಿಸಿ ಕೊಳ್ಳಲು ಪ್ರಾರಂಭಿಸಿವೆ. ಶ್ರೀಮಂತ ರಾಷ್ಟ್ರಗಳು ಮಾಡುತ್ತಿರುವ ಶೋಷಣೆ ಈಗಾಗಲೇ ಬೆಳಕಿಗೆ ಬಂದಿದೆ ಹಾಗೂ ಸೋವಿಯತ್ ಯೂನಿಯನ್‌ನ ಪತನದ ನಂತರ ಇದು ಹೆಚ್ಚಾಗಿರುವುದು ಕಂಡುಬರುತ್ತಿದೆ. ಇಂದು ಅನೇಕ ಮುಂದುವರೆದ ರಾಷ್ಟ್ರಗಳು ಅಂತರ ರಾಷ್ಟ್ರೀಯ ನಿಯಮವನ್ನು ಮುರಿದು ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳಲು ಮುಂದಾಗಿವೆ. ಜಗತ್ತಿನಲ್ಲಿರುವ ಶೇ.೯೭ರಷ್ಟು ಪೇಟೆಂಟ್‌ಗಳು ಮುಂದುವರೆದ ರಾಷ್ಟ್ರಗಳ ಬಹು ರಾಷ್ಟ್ರೀಯ ಕಂಪನಿಗಳ ಹಿಡಿತದಲ್ಲಿವೆ. ಈಗಿರುವ ಪೇಟೆಂಟ್ ವ್ಯವಸ್ಥೆಯಲ್ಲಿ ಸಂಶೋಧನೆ ಮಾಡಿದ ವ್ಯಕ್ತಿಗೆ ಮಾನ್ಯತೆಯೇನೋ ಸಿಗಬಹುದು ಆದರೆ ಅದೇ ಸಂದರ್ಭದಲ್ಲಿ ಜನಸಾಮಾನ್ಯರ ಶೋಷಣೆಯಾಗುತ್ತಿದೆ. ಪೇಟೆಂಟ್ 'ಟೆಕ್ನೋಲೀಗಲ್' ವಿಷಯವಾಗಿದೆ.

**ಭಾರತದಲ್ಲಿ ಜನಾರೋಗ್ಯ ಪರಿಸ್ಥಿತಿ ಹೇಗಿದೆ ?**

ನಮ್ಮಲ್ಲಿ ತಡೆಗಟ್ಟಬಹುದಾದ ರೋಗಗಳು ಈಗಲೂ ವ್ಯಾಪಕವಾಗಿ ಕಂಡುಬರುತ್ತಿದೆ. ಅಗತ್ಯ ಔಷಧಿಗಳ ಕೊರತೆ, ಅನಗತ್ಯ ಔಷಧಿಗಳ ಹಾವಳಿ ಎಲ್ಲೆಲ್ಲೂ ಕಂಡುಬರುತ್ತಿದೆ. ಇತ್ತೀಚೆಗೆ ಏಡ್ಸ್ ರೋಗಿಗಳ ಸಂಖ್ಯೆ ಹೆಚ್ಚುತ್ತಲಿದೆ. ಹೊಸ ಪೇಟೆಂಟ್ ವ್ಯವಸ್ಥೆಯಿಂದಾಗಿ ಔಷಧಿ ಬೆಲೆಗಳು ಗಗನಕ್ಕೇರಲಿವೆ. ಅನಕ್ಷರತೆ, ಬಡತನ, ನಮ್ಮ ದೇಶದ ಹೆಚ್ಚಿನ ಜನರನ್ನು ಮುಗ್ಧ ಪ್ರೇಕ್ಷಕರನ್ನಾಗಿ ಮಾಡಿ, ಪೇಟೆಂಟ್ ಬದಲಾವಣೆಗಳು ನಮ್ಮ ಮುಂದೆ ಸದ್ದಿಲ್ಲದೇ ಹಾದುಹೋಗಿ, ಎಲ್ಲರ ಜೀವನದ ಮೇಲೆ ಪರಿಣಾಮ ಬೀರಲಿದೆ ಎಂಬುದು ನಿರ್ವಿವಾದ. ಮಾಧ್ಯಮಗಳೂ ಮೂಕಪ್ರೇಕ್ಷಕರಂತೆ ವರ್ತಿಸುತ್ತಿವೆಯೇ ಎಂದು ಹಲವರ ಪ್ರಶ್ನೆ.

**ಭಾರತದಲ್ಲಿ ೩.೩ ಕೋಟಿ ಸಕ್ಕರೆ ಕಾಯಿಲೆ, ೨.೦ ಕೋಟಿ ಅಸ್ತಮ, ೪೫ ಲಕ್ಷ ಕ್ಷಯ, ೨೦ ಲಕ್ಷ ಮಲೇರಿಯಾ, ೫೧ ಲಕ್ಷ ಎಚ್.ಐ.ವಿ. ರೋಗಿಗಳಿದ್ದಾರೆ.**

**ಔಷಧಿ ಉದ್ಯಮ**

ಭಾರತದಲ್ಲಿ ಔಷಧಿ ಉದ್ಯಮ ಪ್ರಾರಂಭವಾದುದು ೧೯೨೦ರಲ್ಲಿ. ಪ್ರಾರಂಭದಲ್ಲಿ ಕೆಲವು ಭಾರತೀಯ ಕಂಪನಿಗಳು ಔಷಧಿ ತಯಾರಿಸಲು ಪ್ರಯತ್ನಿಸಿದರೂ, ಬಹುರಾಷ್ಟ್ರೀಯ ಕಂಪನಿಗಳೇ ಔಷಧಿ ಉದ್ಯಮದ ಹಿಡಿತವನ್ನು ಹೊಂದಿದ್ದವು. ಈ ಕಂಪನಿಗಳು ನಮಗೆ ಅಗತ್ಯವಿರುವ ಔಷಧಿಗಳನ್ನು ತಯಾರಿಸುವ ಬದಲು ತಮ್ಮಲ್ಲಿ ಲಭ್ಯವಿರುವ ಹಾಗೂ ಲಾಭ ತರುವ ಔಷಧಿಗಳನ್ನು ಮಾತ್ರ ತಯಾರಿಸುತ್ತಿದ್ದವು. ಔಷಧಿ ಬೆಲೆಗಳು ವಿಪರೀತ ಹೆಚ್ಚಾಗಿದ್ದುವೆಂದು ಹಲವು ಅಧ್ಯಯನಗಳು (೧೯೫೨) ನಮಗೆ ತಿಳಿಸುತ್ತವೆ. ಸರಕಾರವು ಇದನ್ನು ಗಮನಿಸಿ ಸಾರ್ವಜನಿಕ ಔಷಧಿ ಉದ್ಯಮವನ್ನು ಪ್ರಾರಂಭಿಸುವ (೧೯೫೬) ತೀರ್ಮಾನವನ್ನು ತೆಗೆದುಕೊಂಡಿತು. ಭಾರತದಲ್ಲಿ ಸಾರ್ವಜನಿಕ ಕ್ಷೇತ್ರದ ಔಷಧಿ ಉದ್ಯಮ



ಪ್ರಾರಂಭವಾದಕೂಡಲೇ (ಎಚ್.ಎ.ಎಲ್., ಐ.ಡಿ.ಪಿ.ಎಲ್.) ಔಷಧಿ ಬೆಲೆಗಳು ಕಡಿಮೆಯಾದವು. ಆದರೆ ಔಷಧಿ ಕ್ಷೇತ್ರದ ಹಿಡಿತ ಬಹುರಾಷ್ಟ್ರೀಯ ಕಂಪನಿಗಳ ಕೈಯಲ್ಲೇ ಇತ್ತು ಎಂಬುದನ್ನು ಮರೆಯುವಂತಿಲ್ಲ.

ಭಾರತದ ಉದ್ದಿಮೆಗಳು ಅಭಿವೃದ್ಧಿ ಹೊಂದಲು, ಬಹುರಾಷ್ಟ್ರೀಯ ಕಂಪನಿಗಳ ಪೈಪೋಟಿ ಎದುರಿಸಲು ಹಾಗೂ ಸ್ವಾವಲಂಬನೆ ಸಾಧಿಸಲು ಪೇಟೆಂಟ್ ವ್ಯವಸ್ಥೆ ಅಗತ್ಯವಾಗಿತ್ತು. ಅದೇ ವೇಳೆಗೆ ಭಾರತದಲ್ಲಿ ಪೇಟೆಂಟ್ ವ್ಯವಸ್ಥೆಯನ್ನು ಜಾರಿಗೆ ತರಲು ಚರ್ಚೆ ಪ್ರಾರಂಭವಾಗಿತ್ತು. ಜಸ್ಟಿಸ್ ಅಯ್ಯಂಗಾರ್ ಸಮಿತಿ ಆಧಾರದ ಮೇಲೆ ಮುಂದುವರೆದ ಚರ್ಚೆ ಸುಮಾರು ೧೨ ವರ್ಷಗಳವರೆಗೆ ಸಂಸತ್ತಿನ ಮೇಲ್ಮನೆ ಹಾಗೂ ಕೆಳಮನೆಯಲ್ಲಿ ರೂಪುಗೊಂಡು, ಭಾರತೀಯ ಪೇಟೆಂಟ್ ಕಾನೂನು ೧೯೭೦ರಲ್ಲಿ ಹೊರಬಂದಿತು.

**ಭಾರತೀಯ ಪೇಟೆಂಟ್ ಕಾನೂನಿನ ೭೦ರ ಉದ್ದೇಶಗಳು**

೧. ತಾಂತ್ರಿಕತೆಯಿಂದ ದೇಶದ ಆರ್ಥಿಕತೆಯನ್ನು ಸುಧಾರಿಸುವ ಹಾಗೂ ಸ್ವಾವಲಂಬನೆ ಸಾಧಿಸುವ ಪ್ರಯತ್ನ
೨. ಸ್ಥಳೀಯ ಬೆಳವಣಿಗೆಗೆ ಒತ್ತು
೩. ಆರೋಗ್ಯಕರ ಪೈಪೋಟಿ
೪. ಸಂವಿಧಾನ ಪ್ರಸ್ತಾಪಿಸಿರುವ ಮೂಲಭೂತ ಹಕ್ಕಾದ ಆರೋಗ್ಯದ ಹಕ್ಕನ್ನು ಸಮರ್ಥಿಸುವುದು
೫. ಜ್ಞಾನ ಹಾಗೂ ತಂತ್ರಜ್ಞಾನದ ಏಕಸ್ವಾಮ್ಯವನ್ನು ತಡೆಗಟ್ಟುವುದು

**ಭಾರತೀಯ ಪೇಟೆಂಟ್ ಕಾನೂನು ೭೦**

ಒಂದು ವಸ್ತುವನ್ನು ಹಲವಾರು ವಿಧಾನದಿಂದ ತಯಾರಿಸಬಹುದಾಗಿದೆ. ಇದನ್ನು ಆಧರಿಸಿದ ಭಾರತೀಯ ಪೇಟೆಂಟ್ ಕಾನೂನು, ೧೯೭೦ರಲ್ಲಿ ವಿಧಾನ ಸ್ವಾಮ್ಯಕ್ಕೆ (Process Patent) ಪರವಾನಗಿ ನೀಡಿತು. ಅಂದರೆ ಒಂದು ಔಷಧಿಯನ್ನು ಹಲವಾರು ಕಂಪನಿಗಳು ತಯಾರಿಸಬಹುದಾಗಿದೆ; ಒಂದು ಕಂಪನಿಯು ಔಷಧಿಯನ್ನು ತಯಾರಿಸಿ ಏಕಸ್ವಾಮ್ಯ ಸಾಧಿಸುವಂತಿಲ್ಲ. ಆರೋಗ್ಯಕರ ಪೈಪೋಟಿಯಿಂದಾಗಿ ಔಷಧಿ ಬೆಲೆಗಳು ಕಡಿಮೆಯಾಗುತ್ತವೆ. ಪೇಟೆಂಟ್ ಕಾಲಾವಧಿ ಏಳು ವರ್ಷಗಳು ಮಾತ್ರ. ಈ ಕಾಲಾವಧಿ ದೀರ್ಘಕಾಲದವರೆಗೆ ಇದ್ದರೆ, ಔಷಧಿ ಕಂಪನಿಗಳಿಗೆ ಏಕಸ್ವಾಮ್ಯ ದೊರೆತಂತಾಗುತ್ತದೆ. ಯಾವುದೇ ಕಂಪನಿಯು ಪೇಟೆಂಟ್ ಪಡೆದು ಆ ಔಷಧಿಯನ್ನು ತಯಾರಿಸದಿದ್ದಲ್ಲಿ ಮತ್ತು ಆ ಔಷಧಿ ಅಗತ್ಯ ಹಾಗೂ ಪ್ರಯೋಜನಕರ ಎಂದು ಕಂಡು ಬಂದಲ್ಲಿ ಸರಕಾರ ಅದೇ ಔಷಧಿ ತಯಾರಿಸಲು ಇನ್ನೊಂದು ಕಂಪನಿಗೆ ಪರವಾನಗಿ ಕೊಡುವ ಸವಲತ್ತು ಒದಗಿಸಲಾಗುತ್ತದೆ. ಈ ಕಡ್ಡಾಯ ಪರವಾನಗಿಯಿಂದಾಗಿ ಜನರು ಔಷಧಿಯಿಂದ ವಂಚಿತರಾಗುವುದಿಲ್ಲ. ಭಾರತೀಯ ಪೇಟೆಂಟ್ ಕಾನೂನು ಸಂಶೋಧಕನ ಹಿತವನ್ನು ಗಮನಿಸುವುದಲ್ಲದೇ ಜನ ಸಾಮಾನ್ಯರ ಹಿತ ಕಾಪಾಡುವುದರ ಬಗ್ಗೆ ಕಾಳಜಿ ವಹಿಸುತ್ತದೆ. ಭಾರತೀಯ ಪೇಟೆಂಟ್ ಕಾನೂನು ೧೯೭೦ರಲ್ಲಿ ಜಾರಿಗೆ ಬಂದಾಗಿಂದಲೂ ಭಾರತದಲ್ಲಿ ಔಷಧಿ ಉದ್ಯಮ ಗಮನಾರ್ಹವಾಗಿ ಬೆಳೆಯಲು ಸಾಧ್ಯವಾಗಿದೆ. ಸುಮಾರು ನೂರು ಅಗತ್ಯ ಔಷಧಿಗಳನ್ನು ತಯಾರಿಸಲು ತಂತ್ರಜ್ಞಾನ ಲಭ್ಯವಾಯಿತು ಹಾಗೂ ನಾವು ಬೇರೆ ದೇಶಗಳಿಗೆ ಔಷಧಿಗಳನ್ನು ರಫ್ತು ಮಾಡಲು ಸಾಧ್ಯವಾಯಿತು.

ಭಾರತೀಯ ಪೇಟೆಂಟ್ ಕಾನೂನು ೧೯೭೦ರಿಂದಾಗಿ ಭಾರತಕ್ಕೆ ಮೂರನೇ ಜಗತ್ತಿನಲ್ಲಿ ಔಷಧಿ ಕ್ಷೇತ್ರದ ಮುಂದಾಳತ್ವ ದೊರಕಿತು. ಭಾರತೀಯ ಪೇಟೆಂಟ್ ಕಾನೂನು ಜಗತ್ತಿನ ಎಲ್ಲ ದೇಶಗಳಿಂದ ಪ್ರಶಂಸೆ ಪಡೆಯಿತು. ಈಗಲೂ ಭಾರತದಲ್ಲಿ ಔಷಧಿ ಬೆಲೆಗಳನ್ನು, ವಸ್ತು ಸ್ವಾಮ್ಯ (Product Patent) ಹೊಂದಿದ ದೇಶಗಳ ಔಷಧಿ ಬೆಲೆಗಳಿಗೆ ಹೋಲಿಸಿದರೆ, ಗಮನಾರ್ಹವಾಗಿ ಕಡಿಮೆ ಇರುವುದು ಕಂಡುಬರುತ್ತದೆ.

ಭಾರತದ ಪೇಟೆಂಟ್ ಕಾನೂನು, ಬಹುರಾಷ್ಟ್ರೀಯ ಕಂಪನಿಗಳಿಗೆ ನುಂಗಲಾರದ ತುತ್ತಾಗಿ ಪರಿಣಮಿಸಿತು. ಇದನ್ನು ಎದುರಿಸಲು ಆ ಕಂಪನಿಗಳು ತಮ್ಮ ದೇಶಗಳ ಸರಕಾರಗಳ ಮೇಲೆ ಒತ್ತಡ ತಂದವು. ಇದರಿಂದಾಗಿ ಮುಂದುವರಿದ ರಾಷ್ಟ್ರಗಳು, ಅದರಲ್ಲೂ ಅಮೇರಿಕಾ, ಅಂತರ ರಾಷ್ಟ್ರೀಯ ವ್ಯಾಪಾರ ಒಪ್ಪಂದ (ಗ್ಯಾಟ್)ವನ್ನು ತಮ್ಮ ಲಾಭಕ್ಕಾಗಿ ಬಳಸಿಕೊಂಡವು! ೧೯೮೬ರಲ್ಲಿ ಉರುಗ್ವೇ ದೇಶದಲ್ಲಿ ನಡೆದ ಚರ್ಚೆಯಲ್ಲಿ ಡಂಕಲ್ ಪ್ರಸ್ತಾವನೆಯನ್ನು ಎಲ್ಲ ದೇಶಗಳ ಮುಂದಿಟ್ಟು, ಬೌದ್ಧಿಕ ಆಸ್ತಿ ಹಕ್ಕು ವಿಷಯವನ್ನು ವ್ಯಾಪಾರ ಒಪ್ಪಂದವಾಗಿ ಪರಿವರ್ತಿಸಿ ಎಲ್ಲ ದೇಶಗಳು ಒಪ್ಪುವಂತೆ ಒತ್ತಡ ತಂದು, ವ್ಯಾಪಾರ ಚರ್ಚೆಯನ್ನು ತಮ್ಮ ಲಾಭಕ್ಕಾಗಿ ಬಳಸಿಕೊಂಡವು. ಸಾಲದ ಒತ್ತಡ ಹಾಗೂ ಹೊಸ ಸಾಲ ಪಡೆಯುವ ಉದ್ದೇಶದಿಂದ ಭಾರತವೂ ಸೇರಿದಂತೆ ಅನೇಕ ದೇಶಗಳು ಡಂಕಲ್ ಪ್ರಸ್ತಾವನೆಗೆ ಸಹಿ ಹಾಕಿದರೂ, ಅದು ಪ್ರಯೋಜನಕಾರಿ ಎಂದು ಯಾವ ದೇಶವೂ ಪರಿಗಣಿಸಲಿಲ್ಲ. ಡಂಕಲ್ ಪ್ರಸ್ತಾವನೆಗೆ ಸಹಿ ಹಾಕುವುದೆಂದರೆ, ವ್ಯಾಪಾರಕ್ಕೆ ಸಂಬಂಧಿಸಿದ ಟ್ರಿಪ್ಸ್ (ಬೌದ್ಧಿಕ ಆಸ್ತಿ ಹಕ್ಕನ್ನು – Trade Related Intellectual Property Rights) ಜಾರಿಗೆ ತಂದು, ಭಾರತೀಯ ಪೇಟೆಂಟ್ ಕಾನೂನು ೭೦ನ್ನು ಬದಲಿಸುವುದು. ಭಾರತೀಯ ಪೇಟೆಂಟ್ ಕಾನೂನು ೧೨ ವರ್ಷ ದೀರ್ಘ ಚರ್ಚೆಯ ನಂತರ ಜಾರಿಗೆಬಂದ ಒಂದು ಮಹತ್ವದ ಜನಪರ ಕಾಯಿದೆ. ಆದರೆ ಟ್ರಿಪ್ಸ್ ಒಪ್ಪಂದವು ಕೆಲವೇ ಬಹುರಾಷ್ಟ್ರೀಯ ಕಂಪನಿಗಳ ಮುಖ್ಯಸ್ಥರು ಜನರ ಹಿತದ ಬದಲು ತಮ್ಮ ಲಾಭ ದೃಷ್ಟಿಯಿಂದ ತಯಾರಿಸಿದ ಒಂದು ದಾಖಲೆ.

ಅಂತರರಾಷ್ಟ್ರೀಯ ಸಂಸ್ಥೆಯಾದ ಯುನಿಡೋ, ಜಗತ್ತಿನಲ್ಲಿ ಕೇವಲ ಹತ್ತು ಕಂಪನಿಗಳು ಹೊಸ ಔಷಧಿಗಳನ್ನು ತಯಾರಿಸುವ ತಂತ್ರಜ್ಞಾನವನ್ನು ಹೊಂದಿವೆ ಎಂದು ತಿಳಿಸುತ್ತದೆ. ಅಂದರೆ, ಹೊಸ ಔಷಧಿಗಳನ್ನು ತಯಾರಿಸಲು ನಮ್ಮಲ್ಲಿ ತಂತ್ರಜ್ಞಾನ ಇಲ್ಲದಿದ್ದಾಗ, ವಸ್ತುಸ್ವಾಮ್ಯ ಅಪಾಯಕರ ಹಾಗೂ ಈಗಾಗಲೇ ಶೇ.೯೭ರಷ್ಟು ಪೇಟೆಂಟ್‌ಗಳು ಬಹುರಾಷ್ಟ್ರೀಯ ಕಂಪನಿಗಳ ಕೈಯಲ್ಲಿರುವುದರಿಂದ ನಮ್ಮ ಔಷಧಿ ಉದ್ಯಮಕ್ಕೆ ಆಪತ್ತು ಬಂದಂತೆ. ಇದರಿಂದಾಗಿ ನಾವು ಬಹುರಾಷ್ಟ್ರೀಯ ಕಂಪನಿಗಳಿಂದಲೇ ಔಷಧಿಗಳನ್ನು ಕೊಂಡುಕೊಳ್ಳಬೇಕಾಗುವುದರಿಂದ ಔಷಧಿ ಬೆಲೆಗಳು ವಿಪರೀತ ಹೆಚ್ಚುತ್ತವೆ ಹಾಗೂ ಪರಾವಲಂಬಿಗಳಾಗುತ್ತೇವೆ.

೧೯೯೪ರಲ್ಲಿ ವಿಶ್ವವ್ಯಾಪಾರ ಸಂಘಟನೆ ಅಸ್ತಿತ್ವಕ್ಕೆ ಬಂದು ಗ್ಯಾಟ್ ಒಪ್ಪಂದಕ್ಕೆ ಹಸ್ತಾಕ್ಷರ ಹಾಕಿದ ದೇಶಗಳಿಗೆ ತಮ್ಮ ಪೇಟೆಂಟ್ ಕಾನೂನನ್ನು ಬದಲಿಸಲು ಆದೇಶ ನೀಡಿತು. ಜೊತೆಗೆ ಟ್ರಿಪ್ಸ್ ಒಪ್ಪಂದವನ್ನು ಜಾರಿಗೆ ತರಲು ಭಾರತಕ್ಕೆ ಹತ್ತು ವರ್ಷ ಸಮಯ ನೀಡಿತು. ಭಾರತ ಜನವರಿ ೧, ೨೦೦೫ರಂದಿನಿಂದ ಟ್ರಿಪ್ಸ್ ಒಪ್ಪಂದ ವನ್ನು ಜಾರಿಗೆ ತರಬೇಕಾಗಿತ್ತು. ಆದರೆ ಜಾರಿಗೆ ತರದಂತೆ ದೇಶದ ನಾನಾ ಕಡೆಗಳಿಂದ ಒತ್ತಡ ಬಂದಿದ್ದರಿಂದ, ಸರಕಾರ ಚರ್ಚೆಗೆ ಒಪ್ಪದ್ದರಿಂದ, ಸುಗ್ರೀವಾಜ್ಞೆ ತಂದಿತು. ಪೇಟೆಂಟ್ ವ್ಯವಸ್ಥೆ ಜಾರಿಗೆ ತರುವ ಸಮಯದಲ್ಲಿ, ಹೊಸ ಪೇಟೆಂಟ್ ವ್ಯವಸ್ಥೆ ಅತ್ಯುತ್ತಮವಾಗಿದೆಯೆಂದು ಹೇಳಲು ಅನೇಕ ಮಿಥ್ಯೆಗಳನ್ನು ಸೃಷ್ಟಿಸಲಾಗಿದೆ.

**ಬಹುರಾಷ್ಟ್ರೀಯ ಕಂಪನಿಗಳ ಮಿಥ್ಯೆ ಹಾಗೂ ವಾಸ್ತವತೆಯ ಸತ್ಯ**

**ಮಿಥ್ಯೆ :** ಅಂತರರಾಷ್ಟ್ರೀಯ ಒಪ್ಪಂದಕ್ಕೆ ಸಹಿ ಹಾಕಿದುದರಿಂದ, ಪೇಟೆಂಟ್ ಬದಲಾಯಿಸಬೇಕಾದುದು ನಮ್ಮ ಕರ್ತವ್ಯ.

**ಸತ್ಯ :** ಜನಹಿತ ಕಾಪಾಡುವುದು ಸರಕಾರದ ಮೊದಲ ಕರ್ತವ್ಯ.

**ರೂಪಾಯಿಯಲ್ಲಿ ಔಷಧಿ ಬೆಲೆ : ಹತ್ತು ಮಾತ್ರೆಗೆ (೨೦೦೪ ಡಿಸೆಂಬರ್‌ನಲ್ಲಿ)**

| ಔಷಧಿ | ಭಾರತದಲ್ಲಿ | | ಪಾಕಿಸ್ತಾನದಲ್ಲಿ | ಇಂಗ್ಲೆಂಡಿನಲ್ಲಿ | ಅಮೇರಿಕಾದಲ್ಲಿ |
|---|---|---|---|---|---|
| | ಬ್ರ್ಯಾಂಡ್ | ಜಾತಿ ಸೂಚಕ | | | |
| ಸಿಪ್ರೋಫ್ಲಾಕ್ಸಾಸಿನ್ (ಆ್ಯಂಟಿಬಯಾಟಿಕ್) ೫೦೦ ಮಿ.ಗ್ರಾಂ | ೮೮.೯೮ (ಬೇಸಿಪ್) | ೨೯.೦೦ | ೪೨೩.೮೬ | ೧೧೮೫.೭೦ | ೨೩೫೨.೩೫ |
| ಡೈಕ್ಲೊಫಿನ್ಯಾಕ್ (ನೋವು ನಿವಾರಕ) ೫೦ ಮಿ.ಗ್ರಾಂ | ೧೬.೧೦ (ವೋವಿರಾನ್) | ೩.೫೦ | ೮೪.೭೧ | ೬೦.೯೬ | ೬೭೪.೭೭ |
| ರ್ಯಾನಿಟಿಡೀನ್ (ಅಲ್ಸರ್ ಮಾತ್ರೆ) ೩೦೦ ಮಿ.ಗ್ರಾಂ | ೨೦.೦೦ (ಆಸಿಲ್ಯಾಕ್) | ೬.೦೨ | ೭೪.೦೯ | ೨೪೭.೧೬ | ೮೬೩.೫೦ |
| ಅಟಿನಲಾಲ್ (ಬಿ.ಪಿ. ಮಾತ್ರೆ) ೧೦೦ ಮಿ.ಗ್ರಾಂ | ೨೯.೨೫ (ಅಟೆನ್) | ೭.೫೦ | ೭೧.೮೨ | - | ೭೫೩.೯೪ |
| ಸಿಟ್ರಿಝೈನ್ (ಅಲರ್ಜಿ ಮಾತ್ರೆ) ೧೦ ಮಿ.ಗ್ರಾಂ | ೨೬.೭೦ (ಸೆಟ್‌ಝೈನ್) | ೬.೦೦ | ೩೫.೭೧ | ೨೬೨.೦೯ | ೯೨೭.೨೯ |

**ಮಿಥ್ಯೆ** : ಹೊಸ ಔಷಧಿ ತಯಾರಿಸಲು ಅಪಾರ ಖರ್ಚಾಗುತ್ತದೆ ಹಾಗೂ ಔಷಧಿ ಬೆಲೆ ಸ್ವಾಭಾವಿಕವಾಗಿಯೇ ಹೆಚ್ಚಾಗುತ್ತದೆ.

**ಸತ್ಯ** : ಔಷಧಿ ಕಂಪನಿಗಳು ಒಟ್ಟು ಶೇ. ೩೫ರಷ್ಟು ಹಣವನ್ನು ಔಷಧಿಯನ್ನು ಮಾರುಕಟ್ಟೆಯಲ್ಲಿ ಸ್ಥಾಪಿಸಲು, ಶೇ.೨೦ರಷ್ಟು ಲಾಭಕ್ಕೆ, ಶೇ. ೧೪ರಷ್ಟು ಸಂಶೋಧನೆಗೆ ಖರ್ಚು ಮಾಡುತ್ತಿವೆ. ಭಾರತದಲ್ಲಿ ಇವೇ ಬಹುರಾಷ್ಟ್ರೀಯ ಔಷಧಿ ಕಂಪನಿಗಳು ಶೇ. ೧೪ಕ್ಕೆ ಬದಲು ಕೇವಲ ಶೇ.೨ರಷ್ಟು ಹಣವನ್ನು ಸಂಶೋಧನೆಗೆ ಖರ್ಚು ಮಾಡುತ್ತವೆ. ಸಾಮಾನ್ಯವಾಗಿ ಸಂಶೋಧನೆಯೆಂದರೆ 'ವಯಾಗರಾ'ದಂತಹ ಅನಗತ್ಯ ಔಷಧಿಗಳನ್ನು ಕಂಡು ಹಿಡಿಯುವುದು ಹಾಗೂ ಹಳೇ ಔಷಧಿಗೆ ಹೊಸ ರೂಪ ಕೊಡುವುದು. ಔಷಧಿ ಕಂಪನಿಗಳು ಔಷಧಿ ಮಾರಿ ಗಳಿಸಿದ ಅಪಾರ ಹಣದಿಂದ ರಾಜಕೀಯ ವ್ಯಕ್ತಿಗಳಿಗೆ ಚುನಾವಣೆಯಲ್ಲಿ ಹಣ ಕೊಡುತ್ತವೆ. ಈನಂತರ ತಮ್ಮ ಲಾಭ ಹೆಚ್ಚಿಸಿಕೊಳ್ಳಲು ರಾಜಕೀಯ ಪ್ರಭಾವವನ್ನು ಉಪಯೋಗಿಸುತ್ತವೆ. ಇದರಿಂದಾಗಿ ಸ್ವಾಭಾವಿಕವಾಗಿ ಔಷಧಿ ಬೆಲೆಗಳು ಹೆಚ್ಚಾಗುತ್ತವೆ.

ಬಹುರಾಷ್ಟ್ರೀಯ ಕಂಪನಿಗಳ ಸಂಶೋಧನೆ ಜರುಗುವುದು ಸಾರ್ವಜನಿಕ ಆಸ್ಪತ್ರೆಗಳಲ್ಲಿ ಹಾಗೂ ಯೂನಿವರ್ಸಿಟಿಗಳಲ್ಲಿ, ಅದೂ ಜನರ ಹಣದಿಂದಲೇ ಆಗುತ್ತದೆ. ತಮ್ಮ ಲಾಭದ ದೃಷ್ಟಿಯಿಂದ ಔಷಧಿ ಕಂಪನಿಗಳು ಔಷಧಿಯನ್ನು ಮಾರುಕಟ್ಟೆಗೆ ತರಲು ಅಪಾರ ಖರ್ಚು ಮಾಡುತ್ತವೆ, ನಿಜ. ಔಷಧಿ ತಯಾರಿಸಲು ವಿಜ್ಞಾನ ಹಾಗೂ ತಂತ್ರಜ್ಞಾನದ ಬಳಕೆ ಅನಿವಾರ್ಯ. ಆದರೆ ಅದರ ಲಾಭ ಜನರಿಗೆ ವರ್ಗಾಯಿಸಲು ಹಿಂದೇಟೇಕೆ ? ಭಾರತದಂತಹ ದೇಶವು ಔಷಧಿ ತಯಾರಿಸಿ ಅತಿ ಬಡರಾಷ್ಟ್ರಗಳಿಗೆ ರಫ್ತು ಮಾಡುತ್ತಿರುವುದು ಲಾಭಕ್ಕಲ್ಲ, ಅಲ್ಲಿಯ ಜನರ ಆರೋಗ್ಯ ಸುಧಾರಿಸಲು. ಆದರೆ ಬಹುರಾಷ್ಟ್ರೀಯ ಕಂಪನಿಗಳು ಔಷಧಿಗಳನ್ನು ತಯಾರಿಸುವ ಉದ್ದೇಶ ಲಾಭಗಳಿಕೆ, ಜನಾರೋಗ್ಯ ಸುಧಾರಿಸಲು ಅಲ್ಲ. ಇಂತಹ ತಪ್ಪು ಹೇಳಿಕೆಗಳನ್ನು ನೀಡಿ ಈ ಬಹುರಾಷ್ಟ್ರೀಯ ಕಂಪನಿಗಳೇ ಪ್ರಚಾರ ಮಾಡುತ್ತಿವೆ.

**ಮಿಥ್ಯೆ** : ವಸ್ತುಸ್ವಾಮ್ಯ ಸಂಶೋಧನೆಗೆ ಸಹಾಯವಾಗುತ್ತದೆ.

**ಸತ್ಯ** : ಪಾಕಿಸ್ತಾನ, ದಕ್ಷಿಣ ಆಫ್ರಿಕಾದಲ್ಲಿ ವಸ್ತುಸ್ವಾಮ್ಯ ಜಾರಿಯಲ್ಲಿದೆ. ಆದರೆ ಆ ದೇಶಗಳ ಮುಖ್ಯ ಆರೋಗ್ಯ ಸಮಸ್ಯೆಗಳಾದ ನಿದ್ರಾ ಕಾಯಿಲೆ ಹಾಗೂ ಮಲೇರಿಯಾಗೆ, ಯಾವ ಹೊಸ ಔಷಧಿಯನ್ನೂ ಕಂಡುಹಿಡಿಯಲಾಗಿಲ್ಲ.

**ಮಿಥ್ಯೆ** : ಭಾರತದಲ್ಲಿ ದೊರಕುವ ಶೇ. ೯೭ರಷ್ಟು ಔಷಧಿಗಳಿಗೆ ಹೊಸ ಪೇಟೆಂಟ್‌ನಿಂದ ತೊಂದರೆಯಿಲ್ಲ.

**ಸತ್ಯ** : ಈ ವಿಷಯ ಈಗಿರುವ ಔಷಧಿಗಳಿಗೆ ಮಾತ್ರ ಅನ್ವಯಿಸುತ್ತದೆ. ಒಂದು ಔಷಧಿಯ ಅವಧಿ ೩-೫ ವರ್ಷ ಅಷ್ಟೆ. ಮುಂಬರುವ ಎಲ್ಲಾ ಔಷಧಿಗಳಿಗೂ ಪೇಟೆಂಟ್ ಕಾಯಿದೆಯಿಂದಾಗಿ ತೊಡಕು ಉಂಟಾಗುತ್ತದೆ. ಈಗಿರುವ ಶೇ.೩ರಷ್ಟು ಔಷಧಿಗಳ ಬೆಲೆಗಳು ಖಂಡಿತ ಗಗನಕ್ಕೇರುತ್ತವೆ. ಆದರಿಂದಾಗಿ ಲಕ್ಷಾಂತರ ಜನರಿಗೆ ತೊಂದರೆಯಾಗುತ್ತದೆ.

**ಮಿಥ್ಯೆ** : ಔಷಧಿ ಬೆಲೆಗಳು ಜಾಸ್ತಿಯಾಗದಂತೆ, ಸ್ವಾಭಾವಿಕವಾಗಿ ಮಾರುಕಟ್ಟೆ ನಿಯಂತ್ರಣ ತರುತ್ತದೆ. ಪೇಟೆಂಟ್‌ನಿಂದಾಗಿ ಕೇವಲ ಶೇ.೩ರಷ್ಟು ಔಷಧಿಗಳ ಬೆಲೆ ಹೆಚ್ಚುತ್ತದೆ.

**ಸತ್ಯ** : ಸುಗ್ರೀವಾಜ್ಞೆಯಿಂದಾಗಿ ಔಷಧಿ ಬೆಲೆಗಳ ಹತೋಟಿ ನಿಯಮ (Drug Price Control Order) ಅರ್ಥಹೀನವಾಗುತ್ತದೆ. ಮಾರುಕಟ್ಟೆ ಆಧಾರಿತ ವ್ಯವಸ್ಥೆ ಎಲ್ಲವನ್ನೂ ಸರಿಪಡಿಸುತ್ತದೆ ಎಂಬುದು ಸಾಮ್ರಾಜ್ಯಶಾಹಿಗಳ ವಾದ. ಆದರೆ ಅದು ಔಷಧಿ ಕ್ಷೇತ್ರದಲ್ಲಿ ಅರ್ಥಹೀನ. ಮಾರುಕಟ್ಟೆ ಆಧಾರಿತ ರಾಷ್ಟ್ರಗಳಲ್ಲಿಯೇ ಔಷಧಿ ಬೆಲೆಗಳು ಹೆಚ್ಚಾಗಿವೆ ಎಂದು ಮೇಲಿನ ಕೋಷ್ಟಕದಿಂದ ತಿಳಿಯಬಹುದು. ಈಗ ಭಾರತದಲ್ಲಿ ೩೧ ಔಷಧಿಗಳ ತಯಾರಿಕೆಯನ್ನು ಕೂಡಲೇ ನಿಲ್ಲಿಸಬೇಕಾಗುತ್ತದೆ. ಈ ಔಷಧಿಗಳನ್ನು ನಾವು ಬಹುರಾಷ್ಟ್ರೀಯ ಕಂಪನಿಗಳಿಂದ ಕೊಳ್ಳಬೇಕಾಗಿರುವುದರಿಂದ ಅವುಗಳ ಬೆಲೆ ಕೂಡಲೇ ಹೆಚ್ಚುತ್ತದೆ. ಕ್ರಮೇಣ ಎಲ್ಲ ಔಷಧಿಗಳ ಬೆಲೆಗಳೂ ಹೆಚ್ಚುತ್ತವೆ.

**ಮಿಥ್ಯೆ** : ಔಷಧಿ ಬೆಲೆಗಳು ಜಾಸ್ತಿಯಾದರೆ, ಸರಕಾರ ಅದನ್ನು ಕಡ್ಡಾಯ ಪರವಾನಗಿ ವಿಧಾನದಿಂದ ಹಿಡಿತದಲ್ಲಿಡಬಹುದು.

**ಸತ್ಯ** : ಭಾರತ ಸರ್ಕಾರ ಪ್ರಾರಂಭದಲ್ಲಿ (೧೯೭೮) ೩೭೦ ಔಷಧಿಗಳನ್ನು ಔಷಧಿ ನಿಯಂತ್ರಣದಲ್ಲಿ ಇಟ್ಟು ಔಷಧಿ ಬೆಲೆಗಳನ್ನು ಹತೋಟಿಯಲ್ಲಿಟ್ಟಿತು. ಈಗ ಕೇವಲ ೭೩ ಔಷಧಿಗಳಿಗೆ ಔಷಧಿ ಬೆಲೆ ನಿಯಂತ್ರಣವಿದೆ. ಅಂದರೆ ಸರಕಾರ ಹೆಚ್ಚು ಹೆಚ್ಚು ಔಷಧಿಗಳನ್ನು ನಿಯಂತ್ರಣದಿಂದ ತೆಗೆದುಹಾಕುತ್ತಿದೆ, ಸರ್ಕಾರದ ನೀತಿಯಿಂದಾಗಿ ಔಷಧಿ ಬೆಲೆಗಳು ಹೆಚ್ಚುತ್ತಿವೆ !

**ಪೇಟೆಂಟ್ ಕಾನೂನು ಬದಲಾವಣೆಯಾದಲ್ಲಿ...**

ಟ್ರಿಪ್ಸ್ ಒಪ್ಪಂದವನ್ನು ಜಾರಿಗೆ ತರುವುದೆಂದರೆ ನಮ್ಮ ವಿಧಾನ ಸ್ವಾಮ್ಯವನ್ನು ರದ್ದುಗೊಳಿಸಿ ವಸ್ತುಸ್ವಾಮ್ಯವನ್ನು ಜಾರಿಗೊಳಿಸುವುದು, ಪೇಟೆಂಟ್ ಅವಧಿಯನ್ನು ೨೦ ವರ್ಷಕ್ಕೆ ಏರಿಸುವುದು, ಕಡ್ಡಾಯ ಪರವಾನಗಿ ರದ್ದುಮಾಡುವುದು ಇತ್ಯಾದಿ. ಈ ಒಪ್ಪಂದದಿಂದ ಔಷಧಿ ಕಂಪನಿಗಳಿಗೆ ಏಕಸ್ವಾಮ್ಯ ನೀಡಿದಂತಾಗುತ್ತದೆ, ಪೈಪೋಟಿಯನ್ನು ರದ್ದುಗೊಳಿಸಿದಂತಾಗುತ್ತದೆ. ಔಷಧಿ ಬೆಲೆಗಳು ಗಗನಕ್ಕೇರುವ ಸಾಧ್ಯತೆ ಇದೆ. ಪರಿಣಾಮವಾಗಿ ಜನಾರೋಗ್ಯವನ್ನು ಕಡೆಗಣಿಸಿದಂತಾಗುತ್ತದೆ. ವಸ್ತುಸ್ವಾಮ್ಯ ಇರುವ ದೇಶಗಳಲ್ಲಿ (ಪಾಕಿಸ್ತಾನ, ಅಮೆರಿಕಾ) ಔಷಧಿಗಳ ಬೆಲೆಗಳು ಹೆಚ್ಚಾಗಿವೆ. ಇದೇ ಪರಿಣಾಮ ನಮ್ಮ ದೇಶದಲ್ಲೂ ಕಂಡುಬರುತ್ತದೆ.

ಭಾರತ ಸರಕಾರ ೧೯೯೯ರಲ್ಲಿ ಹಾಗೂ ೨೦೦೨ರಲ್ಲಿ ಎರಡು ತಿದ್ದುಪಡಿಗಳನ್ನು ತಂದಿತು. ಮೂರನೇ ತಿದ್ದುಪಡಿಗೆ ಬಿಜೆಪಿ ಸರಕಾರ ಮಸೂದೆಯನ್ನು ತಯಾರಿಸಿತ್ತು. ಆ ಮಸೂದೆಯಲ್ಲಿ ಜನವಿರೋಧಿ ಅಂಶಗಳಿವೆ. ಬಿಜೆಪಿ ಸರಕಾರ ಆ ಮಸೂದೆಯನ್ನು ೨೦೦೩ರಲ್ಲಿ ಮಂಡಿಸಲಾಗಲಿಲ್ಲ ಹಾಗೂ ಸರಕಾರ ಉರುಳಿದ್ದರಿಂದ ಅದೇ ಮಸೂದೆ ಈಗ ಯುಪಿಎ ಸರಕಾರದ ಮುಂದಿದೆ. ಈ ಸರಕಾರವೂ ಆ ಮಸೂದೆಯನ್ನು ಯಾವ ಬದಲಾವಣೆಯೂ ಇಲ್ಲದೆ ಸಂಸತ್ತಿನಲ್ಲಿ ಮಂಡಿಸಲು ತಯಾರಾಗಿ ನಿಂತಿದೆ !

**ಆ ಮಸೂದೆಯ ಅನಪೇಕ್ಷಣೀಯ ವಿಷಯಗಳು**

೧. ಟ್ರಿಪ್ಸ್ ಒಪ್ಪಂದದಲ್ಲಿರುವ ಜನಾರೋಗ್ಯಕ್ಕೆ ಪೂರಕವಾಗುವ ಕೆಲವು ಸಕಾರಾತ್ಮಕ ಅಂಶಗಳನ್ನು ಕಡೆಗಣಿಸಲಾಗಿದೆ. ದೋಹ ಒಪ್ಪಂದದ ಯಶಸ್ಸಿಗೆ ಭಾರತದ ಪ್ರಯತ್ನವು ನಿಜಕ್ಕೂ ಪ್ರಶಂಸನೀಯ. ದೋಹ ಒಪ್ಪಂದದಲ್ಲಿ ಜನಾರೋಗ್ಯ ರಕ್ಷಣೆಗೆ ಕೆಲವು ಸಕಾರಾತ್ಮಕ ಅಂಶಗಳಿವೆ. ಅವುಗಳನ್ನೂ ಕೈಬಿಡಲಾಗಿದೆ.

೨. ಈ ಮಸೂದೆ ಬಗ್ಗೆ ಜನಪ್ರತಿನಿಧಿಗಳೊಂದಿಗೆ ಚರ್ಚೆ ಮಾಡದೇ ಇರುವುದು. ಟ್ರಿಪ್ಸ್ ಒಪ್ಪಂದದ ಸಕಾರಾತ್ಮಕ ಅಂಶಗಳನ್ನು ಸುಗ್ರೀವಾಜ್ಞೆ ಮೊಟಕುಗೊಳಿಸುತ್ತದೆ.

ಡಿಸೆಂಬರ್ ೧೭, ೨೦೦೪ರಂದು ವಿಶ್ವ ಆರೋಗ್ಯ ಸಂಸ್ಥೆ, ಆರೋಗ್ಯ ಮಂತ್ರಿಗೆ ಪತ್ರ ಬರೆದು ಟ್ರಿಪ್ಸ್ ಒಪ್ಪಂದದಲ್ಲಿಯ ಜನಾರೋಗ್ಯಕ್ಕೆ ಪೂರಕವಾದ ಅಂಶಗಳನ್ನು ಹೊಸ ಪೇಟೆಂಟ್ ಕಾನೂನಿನಲ್ಲಿ ಅಳವಡಿಸಿಕೊಂಡು ನಮ್ಮ ಔಷಧಿ ಬೆಲೆಗಳು ಹೆಚ್ಚಾಗದಂತೆ ನೋಡಿಕೊಳ್ಳಲು ಸಲಹೆ ನೀಡಿದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ, ಸರಕಾರ ಜನಾರೋಗ್ಯ ಒಳಿತಿಗೆ ಪ್ರಯತ್ನ ಮಾಡದೆ, ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದು ಪೇಟೆಂಟ್ ಬದಲಾಯಿಸಲು ಮುಂದಾಗಿದೆ ಎಂದು ವಿಶ್ವ ಆರೋಗ್ಯ ಸಂಸ್ಥೆಗೆ ತಿಳಿದು ಬಂದಿದೆ. ದೇಶಾದ್ಯಂತ ಹಲವಾರು ಜನಪರ ಸಂಘಟನೆಗಳು ಈ ಮಸೂದೆ ಮಂಡನೆಗೆ ತಮ್ಮ ವಿರೋಧ ವ್ಯಕ್ತಪಡಿಸಿವೆ; ಬದಲಾವಣೆಗೆ ಒತ್ತಾಯಿಸಿವೆ; ಪ್ರತಿಭಟಿಸಿವೆ. ಅಮೆರಿಕಾದ ಸಾಮ್ರಾಜ್ಯಶಾಹಿಗಳ ಪ್ರತಿಷ್ಠಿತ ಪತ್ರಿಕೆ 'ದಿ ನ್ಯೂಯಾರ್ಕ್ ಟೈಮ್ಸ್' ಭಾರತೀಯ ಸರಕಾರದ ಹೊಸ ಪೇಟೆಂಟ್ ನೀತಿ (ಸುಗ್ರೀವಾಜ್ಞೆ) ಜನಸಾಮಾನ್ಯರಿಗೆ ಔಷಧಿ ಒದಗಿಸಲು ಅಸಮರ್ಪಕವಾಗಿದೆ ಎಂಬುದರ ಬಗ್ಗೆ ಇತ್ತೀಚೆಗೆ ಆಶ್ಚರ್ಯ ವ್ಯಕ್ತಪಡಿಸಿದೆ.

**ಮೂರನೇ ಪೇಟೆಂಟ್ ತಿದ್ದುಪಡಿ**

ಸರಕಾರ ಪೇಟೆಂಟ್ ಕಾನೂನಿಗೆ ತಂದಿರುವ ಎರಡೂ ತಿದ್ದುಪಡಿಗಳು (೧೯೯೯, ೨೦೦೨) (ಅಧಿಕಾರದಲ್ಲಿದ್ದ ರಾಜಕೀಯ ಪಕ್ಷಗಳಾದ ಬಿಜೆಪಿ ಹಾಗೂ ಯುಪಿಎ ಹೊರಡಿಸಿದ ಸುಗ್ರೀವಾಜ್ಞೆ) ಜಾರಿಗೆ ಬಂದಿದ್ದರೆ ಭಾರತದ ಔಷಧಿ ಕ್ಷೇತ್ರ ಸಂಪೂರ್ಣ ನಾಶವಾಗುವ ಸಾಧ್ಯತೆ ಇತ್ತು. ಕಾರಣ ಈ ಎಲ್ಲ ತಿದ್ದುಪಡಿಗಳು ಹಾಗೂ ಸುಗ್ರೀವಾಜ್ಞೆಗಳು ಟ್ರಿಪ್ಸ್ ಒಪ್ಪಂದದಲ್ಲಿನ ಸಕಾರಾತ್ಮಕ ಅಂಶಗಳನ್ನು ಕಡೆಗಣಿಸಿವೆ. ಈ ಎಲ್ಲಾ ತಿದ್ದುಪಡಿ ಹಾಗೂ ಸುಗ್ರೀವಾಜ್ಞೆಗಳು ಬಹುರಾಷ್ಟ್ರೀಯ ಕಂಪನಿಗಳ ಒತ್ತಡದಿಂದಾಗಿ. ಬಹುರಾಷ್ಟ್ರೀಯ ಕಂಪನಿಗಳ ಪರವಾದ ನೀತಿಗಳನ್ನು ನಮ್ಮ ರಾಜಕೀಯ ಪಕ್ಷಗಳು ಜಾರಿಮಾಡಲು ಮುಂದುವರೆದುದು ವಿಷಾದನೀಯ.

ಭಾರತದ ಹಾಗೂ ಅಂತರರಾಷ್ಟ್ರೀಯ ಜನಾರೋಗ್ಯ ಸಂಘಟನೆಗಳು ಈ ಬೆಳವಣಿಗೆಯನ್ನು ವಿರೋಧಿಸಿವೆ. ಸಂಸತ್ತಿನಲ್ಲಿ ಎಡಪಕ್ಷಗಳು ಸುಗ್ರೀವಾಜ್ಞೆಯ ನೀತಿಗಳನ್ನು ವಿರೋಧಿಸುತ್ತಾ, ಜನಪರ ಪೇಟೆಂಟ್ ಬದಲಾವಣೆಗಳನ್ನು ಜಾರಿಗೆ ತರಲು ಪಟ್ಟು ಹಿಡಿದು ಕುಳಿತಿದ್ದವು. ಈ ರೀತಿಯ ಹಲವಾರು ಒತ್ತಡಗಳಿಂದಾಗಿ ಸರಕಾರವು ಎಡಪಕ್ಷಗಳು ಸೂಚಿಸಿದ ೧೨ ಬದಲಾವಣೆಗಳಲ್ಲಿ ೧೦ ಬದಲಾವಣೆಗಳನ್ನು ಜಾರಿಗೆ ತಂದಿದೆ ಮತ್ತು ಇನ್ನೆರಡು ಬದಲಾವಣೆಗಳ ಪರಿಶೀಲನೆಗೆ ತಜ್ಞರ ಸಮಿತಿಗೆ ಒಪ್ಪಿಸಿದೆ. ಜಾರಿಗೆ ಬರಲಿರುವ ಪೇಟೆಂಟ್ ಕಾನೂನು ೨೦೦೫, ಸಂಪೂರ್ಣ ಜನಪರವಾಗಿರದಿದ್ದರೂ, ಕೆಲವು ಸಕಾರಾತ್ಮಕ ಅಂಶಗಳನ್ನು ಹೊಂದಿದೆ.

**ಮೂರನೇ ತಿದ್ದುಪಡಿಯ ಕೆಲವು ಮುಖ್ಯ ತೀರ್ಮಾನಗಳು**

ಟ್ರಿಪ್ಸ್ ಒಪ್ಪಂದವನ್ನು ಜಾರಿಗೆ ತರುವುದು ಭಾರತಕ್ಕೆ ಅನಿವಾರ್ಯವಾಗಿತ್ತು, ಆದರೆ ಟ್ರಿಪ್ಸ್ ಒಪ್ಪಂದದಲ್ಲಿಯ ಕೆಲವು ಸಕಾರಾತ್ಮಕ ಅಂಶಗಳನ್ನು ನಾವು ಮೂರನೇ ತಿದ್ದುಪಡಿಯಲ್ಲಿ ಅಳವಡಿಸಿಕೊಳ್ಳಬಹುದಾಗಿತ್ತು, ಅದನ್ನು ಮೂರನೇ ತಿದ್ದುಪಡಿ ಮಾಡಿದೆ.

| ಟ್ರಿಪ್ಸ್ | ಸುಗ್ರೀವಾಜ್ಞೆ |
|---|---|
| ಟ್ರಿಪ್ಸ್ ಪ್ರಕಾರ ಕೇವಲ ಹೊಸ ಔಷಧಿಗೆ ಪೇಟೆಂಟ್ ಕೊಡಬಹುದು. ಹಳೆಯ ಔಷಧಿಯ ಹೊಸ ಉಪಯೋಗಕ್ಕೆ ಅಥವಾ ಹೊಸ ಔಷಧಿ ಪ್ರಮಾಣಕ್ಕೆ ಕೊಡಲಾಗುವುದಿಲ್ಲ. | ಔಷಧಿ ಕಂಪನಿಗಳು ಹಳೆ ಔಷಧಿಗೆ ಹೊಸ ಉಪಯೋಗವನ್ನು ಸೂಚಿಸಿ ಅಂದರೆ ಆಸ್ಪಿರಿನ್ ತಲೇನೋವಿಗಲ್ಲದೆ ಮೈಕೈನೋವಿಗೂ ಉಪಯೋಗಿಸಬಹುದು ಎಂಬ ಕಾರಣ ನೀಡಿ ಅದರ ಪೇಟೆಂಟ್ ಪಡೆಯಲು ಮುಂದಾಗುತ್ತವೆ. ಅನಗತ್ಯ ಸಮ್ಮಿಶ್ರ ಔಷಧಿಗಳನ್ನು ತಯಾರಿಸಲು ಮುಂದಾಗುತ್ತವೆ. ಇದು ಅವೈಜ್ಞಾನಿಕ. ಆದರೆ ಪೇಟೆಂಟ್ ಅಧಿಕಾರಿಗಳಿಗೆ ಇದು ಮುಖ್ಯವಲ್ಲ. |
| ಪೇಟೆಂಟ್ ಕೊಡುವುದಕ್ಕಿಂತ ಮೊದಲು ಅಥವಾ ಆನಂತರ ಅದರ ಉಪಯೋಗದ ಬಗ್ಗೆ ಪರಿಶೀಲನೆ ಮಾಡಿ ಅದು ಯೋಗ್ಯವಾದಲ್ಲಿ ಮಾತ್ರ ಪೇಟೆಂಟ್ ಕೊಡಬಹುದು. | ನಮ್ಮಲ್ಲಿ ಪ್ರಾರಂಭದಿಂದಲೂ ವಸ್ತುಸ್ವಾಮ್ಯ ಇಲ್ಲದಿದ್ದರಿಂದ ವಿಶ್ವ ವ್ಯಾಪಾರ ಸಂಸ್ಥೆ (WTO) ನಮಗೆ ಮೇಲ್ ಬಾಕ್ಸ್ ತೆರೆಯಲು ಹಾಗೂ ಸಂಪೂರ್ಣ ಮಾರುಕಟ್ಟೆಯ ಹಕ್ಕನ್ನು ಅರ್ಜಿದಾರರಿಗೆ ನೀಡಲು ಒತ್ತಾಯಿಸಿದೆ. ೧೯೯೫ರಿಂದ ಔಷಧಿ ಕಂಪನಿಗಳು 'ಮೇಲ್‌ಬಾಕ್ಸಿನಲ್ಲಿ' ಔಷಧಿ ಪೇಟೆಂಟ್ ಪಡೆಯಲು ಅರ್ಜಿ ಹಾಕಿವೆ. ಹಾಗೂ ಆ ಕಂಪನಿಗಳಿಗೆ ಸಂಪೂರ್ಣ ಮಾರುಕಟ್ಟೆಯ ಹಕ್ಕನ್ನು ಕೊಡಬೇಕಾಗುತ್ತದೆ. ಮೇಲ್‌ಬಾಕ್ಸ್‌ನಲ್ಲಿ ಸುಮಾರು ೮೦೦೦ ಅರ್ಜಿಗಳಿದ್ದವು. ಅವುಗಳಲ್ಲಿ ಹೆಚ್ಚಿನವು ಬಹುರಾಷ್ಟ್ರೀಯ ಕಂಪನಿಗಳವು. ಇಲ್ಲಿ ಗಮನಿಸಬೇಕಾದ ಒಂದು ಮುಖ್ಯ ವಿಷಯವೆಂದರೆ ಅಮೆರಿಕಾದ ಔಷಧಿ ನಿಯಂತ್ರಣ (ಎಫ್.ಡಿ.ಎ.) ೧೯೯೫ರಿಂದ ೨೦೦೩ರರೊಳಗೆ ಕೇವಲ ೨೭೪ ಔಷಧಿಗಳಿಗೆ ಮಾರಲು ಪರವಾನಗಿ ಕೊಟ್ಟಿವೆ. ಈಗ ತಂದಿರುವ ಸುಗ್ರೀವಾಜ್ಞೆಯಿಂದಾಗಿ ಮೇಲ್‌ಬಾಕ್ಸಿನಲ್ಲಿರುವ ಎಲ್ಲ ಔಷಧಿಗಳಿಗೆ ಪರಿಶೀಲನೆ ಇಲ್ಲದೇ ಪೇಟೆಂಟ್ ಕೊಡಬೇಕಾಗುತ್ತದೆ. |
| ಪೇಟೆಂಟ್ ಕೊಟ್ಟು ಜನಾರೋಗ್ಯಕ್ಕೆ ಅಪಾಯ ವಾಗದಂತೆ ಪ್ರಯತ್ನಿಸುತ್ತದೆ. | ಸುಗ್ರೀವಾಜ್ಞೆಯಿಂದಾಗಿ ಔಷಧಿ ಬೆಲೆಗಳು ಹೆಚ್ಚುತ್ತವೆ. ಅನಗತ್ಯ ಔಷಧಿಗಳು ಹೆಚ್ಚುತ್ತವೆ. ಅಗತ್ಯ ಔಷಧಿಗಳು ದೊರಕದಂತಾಗಿ ಜನಾರೋಗ್ಯಕ್ಕೆ ಅಪಾಯ ಉಂಟಾಗುತ್ತದೆ. |
| ದೋಹ ಒಪ್ಪಂದದ ನಂತರ ಕಡ್ಡಾಯ ಪರವಾನಗಿ ಒಪ್ಪಿಕೊಂಡು ಅತಿ ಬಡರಾಷ್ಟ್ರಗಳಿಗೆ ಔಷಧಿಗಳನ್ನು ರಫ್ತು ಮಾಡಲು ಸಾಧ್ಯವಿದೆ. | ಸುಗ್ರೀವಾಜ್ಞೆಯಿಂದಾಗಿ ಕಡ್ಡಾಯ ಪರವಾನಗಿ ನಿಯಮ ಕ್ಲಿಷ್ಟವಾಗಿದೆ. ಔಷಧಿಗಳನ್ನು ರಫ್ತು ಮಾಡುವುದು ನಿಂತುಹೋಗುವ ಸಾಧ್ಯತೆ ಇದೆ. |

**ಯಾವುದನ್ನು ಪೇಟೆಂಟ್ ಮಾಡಬಹುದು ?**

ಟ್ರಿಪ್ಸ್ ಒಪ್ಪಂದವು ವಸ್ತು ಸ್ವಾಮ್ಯ (Product Patent)ವನ್ನು ಜಾರಿಗೆ ತರುವ ಉದ್ದೇಶ ಹೊಂದಿದೆ. ಹೊಸ ಔಷಧಿಗಳಿಗೆ ವಸ್ತುಸ್ವಾಮ್ಯ ದೊರಕುವುದರಿಂದ ಆ ಔಷಧಿಗಳ ಬೆಲೆಗಳು ವಿಪರೀತ ಜಾಸ್ತಿಯಾಗುವ ಸಾಧ್ಯತೆಯಿತ್ತು. ಕೆಲವು ಕಂಪನಿಗಳು ಸಮ್ಮಿಶ್ರ ಔಷಧಿಗಳನ್ನು, ಔಷಧಿಯ ಬದಲುರೂಪಗಳಾದ ಸಾಲ್ಟ್, ಎಸ್ಟರ್, ಈಥರ್, ಪಾಲಿಮಾರ್ಫ್, ಮೆಟಾಬೊಲೈಟ್ಸ್, ಐಸೋಮರ್‌ಗಳಿಗೆ ಪೇಟೆಂಟ್ ಪಡೆಯಲು ಮುಂದಾಗುವುದರಿಂದ ಈ ತರಹದ ಔಷಧಿಗಳಿಗೆ ಪೇಟೆಂಟ್‌ಗಳನ್ನು ನೀಡುವುದನ್ನು (ಕ್ಷುಲ್ಲಕ ಪೇಟೆಂಟ್) ಈಗ ನಾವು ವಿರೋಧಿಸಬಹುದಾಗಿದೆ. ಇನ್ನೂ ಕೆಲವು ಔಷಧಿ ಕಂಪನಿಗಳು ಹಳೇ ಔಷಧಿಗಳಿಗೆ ಹೊಸ ಔಷಧಿ ಗುಣವಿದೆಯೆಂದು ಪ್ರಸ್ತಾಪಿಸಿ ಪೇಟೆಂಟ್ ಪಡೆಯಲು ಮುಂದಾಗಬಹುದಾಗಿದೆ. ಈಗ ಇವುಗಳನ್ನು ನಾವು ವಿರೋಧಿಸಬಹುದಾಗಿದೆ. ಆದರೆ ಮೂರನೇ ಪೇಟೆಂಟ್ ತಿದ್ದುಪಡಿಯಲ್ಲಿ ಯಾವುದನ್ನು ಪೇಟೆಂಟ್ ಮಾಡಬಹುದು ಎಂಬುದರ ಬಗ್ಗೆ ಸ್ಪಷ್ಟತೆ ಇಲ್ಲದಿರುವುದರಿಂದ, ಔಷಧಿ ಕಂಪನಿಗಳು ಕಾನೂನಿನ ಗೊಂದಲಗಳನ್ನು ತಮ್ಮ ಲಾಭಕ್ಕೆ ಉಪಯೋಗಿಸಿಕೊಳ್ಳುವ ಸಾಧ್ಯತೆ ಇದೆ. ಈಗ ಪೇಟೆಂಟ್ ಮಾಡುವುದರ ಬಗ್ಗೆ ಸ್ಪಷ್ಟತೆ ಅಗತ್ಯವಿದೆಯೆಂದು ಒತ್ತಾಯಿಸುವ ಅಗತ್ಯವಿದೆ.

**ಜಾತಿಸೂಚಕ ಔಷಧಿಗಳು**

ಭಾರತವು ಜನವರಿ ೧, ೨೦೦೫ಕ್ಕಿಂತ ಮೊದಲು ತಯಾರಿಸುತ್ತಿದ್ದ ಔಷಧಿಗಳನ್ನು ತಯಾರಿಸಿ ಮಾರಲು ಮೂರನೇ ಪೇಟೆಂಟ್ ತಿದ್ದುಪಡಿ ಪರವಾನಗಿ ನೀಡುತ್ತದೆ. ಆದರೆ ಈ ಔಷಧಿಗಳನ್ನು ತಯಾರಿಸುವವರು ಆ ಔಷಧಿ ಪೇಟೆಂಟ್ ಪಡೆದವರಿಗೆ ಶೇ.೪ರಷ್ಟು ರಾಯಧನ ಕೊಡಬೇಕಾಗುತ್ತದೆ. ಇದರಿಂದಾಗಿ ಔಷಧಿ ಬೆಲೆಗಳು ಸ್ವಲ್ಪ (ಶೇ. ೪) ಹೆಚ್ಚಾಗುವ ಸಾಧ್ಯತೆ ಇದೆ.

**ಔಷಧಿಗಳನ್ನು ರಫ್ತು ಮಾಡಬಹುದಾಗಿದೆ**

ಔಷಧಿ ರಫ್ತು ಮಾಡಲು ಆಮದು ಮಾಡಿಕೊಳ್ಳುವ ದೇಶವು ಕಡ್ಡಾಯ ಪರವಾನಗಿ ಕೊಡುವ ಅವಶ್ಯಕತೆ ಇಲ್ಲ. ಇದರಿಂದಾಗಿ ಭಾರತ ರಫ್ತು ಮಾಡುತ್ತಿದ್ದ ಔಷಧಿಗಳಿಗೆ ಯಾವ ತೊಂದರೆಯೂ ಇರುವುದಿಲ್ಲ.

**ಪೇಟೆಂಟ್ ಕೊಡುವುದಕ್ಕಿಂತ ಮೊದಲು ವಿರೋಧಿಸಬಹುದಾದ ಸೌಲಭ್ಯ**

ಔಷಧಿ ಗುಣವಿಲ್ಲದ ಔಷಧಿಗಳಿಗೆ ಪೇಟೆಂಟ್ ಕಛೇರಿ ಪೇಟೆಂಟ್ ಹಕ್ಕನ್ನು ಕೊಡುವುದು ಸಾಧ್ಯವಿದೆ. ಪೇಟೆಂಟ್ ಅಧಿಕಾರಿಗೆ ಔಷಧಿ ಮಾಹಿತಿ ಇರದೇ ಇರುವುದರಿಂದಲೇ ಈ ತರಹದ ಸಮಸ್ಯೆ ಉಂಟಾಗಬಹುದು. ಆದರೆ ಅದು ಜಾರಿಗೆ ಬರುವುದಕ್ಕಿಂತ ಮೊದಲೇ ಆ ಪೇಟೆಂಟನ್ನು ವಿರೋಧಿಸಬಹುದಾಗಿದೆ.

ಯಾವುದೇ ಸ್ಥಳದಲ್ಲಿ ಸಾಂಕ್ರಾಮಿಕ ರೋಗ ಹರಡಿದರೆ, ಅಗತ್ಯ ಔಷಧಿಗಳು ಲಭ್ಯವಿಲ್ಲದಿದ್ದಲ್ಲಿ ಆ ರೋಗವನ್ನು ಹತೋಟಿಗೆ ತರಲು ಅಗತ್ಯ ಔಷಧಿಗಳನ್ನು ತಯಾರಿಸಲು ಸರಕಾರ, ಆ ಔಷಧಿ ಪೇಟೆಂಟ್ ಪಡೆದವನ ಒಪ್ಪಿಗೆ ಇಲ್ಲದೇ ಬೇರೊಂದು ಔಷಧಿ ಕಂಪನಿಗೆ ತುರ್ತಾಗಿ ಔಷಧಿ ತಯಾರಿಸಲು ಪರವಾನಗಿ ನೀಡಬಹುದಾಗಿದೆ. ಈ ಸವಲತ್ತು ಭಾರತೀಯ ಪೇಟೆಂಟ್ ಕಾನೂನು ೭೦ರಲ್ಲಿತ್ತು. ಆದರೆ ಇಲ್ಲಿಯವರೆಗೆ ಭಾರತದಲ್ಲಿ ವಿಧಾನ ಪೇಟೆಂಟ್ ಇದ್ದುದರಿಂದ ಇದರ ಉಪಯೋಗ ಕಂಡುಬಂದಿರಲಿಲ್ಲ. ಆದರೆ ಈಗ ವಸ್ತು ಪೇಟೆಂಟ್ ಜಾರಿಗೆ ಬರುವುದರಿಂದ ಈ ಸವಲತ್ತಿನ ಅಗತ್ಯತೆ ಇದೆ.

ಈ ತಿದ್ದುಪಡಿಯಲ್ಲೂ ಸಾಕಷ್ಟು ನ್ಯೂನತೆಗಳಿವೆ. ಅದಕ್ಕೆ ಕಾರಣ ಸರಕಾರ ಅದರ ಬಗ್ಗೆ ತೋರಿಸಿದ ದಿವ್ಯ ನಿರ್ಲಕ್ಷ್ಯ. ಈ ವಿಷಯವನ್ನು ಜನಪ್ರತಿನಿಧಿಗಳೊಂದಿಗೆ ಚರ್ಚೆ ಮಾಡಿಲ್ಲ. ಆದರೆ ಈ ತಿದ್ದುಪಡಿ ಹಿಂದಿನ ಎರಡೂ ತಿದ್ದುಪಡಿ ಹಾಗೂ ಸುಗ್ರೀವಾಜ್ಞೆಗಳಿಗಿಂತ ಪ್ರಗತಿಪರವಾಗಿದೆ ಹಾಗೂ ಇದು ಸಾಧ್ಯವಾಗಿರುವುದು ಎಡಪಕ್ಷಗಳ ಒತ್ತಡ ಹಾಗೂ ಸರಿಯಾದ ಮಾರ್ಗದರ್ಶನದಿಂದಲೇ. ಎಡಪಕ್ಷಗಳ ಒತ್ತಡವಿಲ್ಲದಿದ್ದರೆ ಪೇಟೆಂಟ್ ಕಾನೂನು ಜನಾರೋಗ್ಯಕ್ಕೆ ಶಾಪವಾಗಿ ಪರಿಣಮಿಸುತ್ತಿತ್ತು ಎಂಬುದು ಈಗ ಸ್ಪಷ್ಟ. ಈ ತಿದ್ದುಪಡಿಯಿಂದ ಹೆಚ್ಚಿನ ಔಷಧಿಗಳ ಬೆಲೆಗಳು ಸ್ವಲ್ಪ ಪ್ರಮಾಣದಲ್ಲಿ (ಶೇ.೪ರಷ್ಟು ರಾಯಧನದಿಂದಾಗಿ) ಹೆಚ್ಚಾಗಬಹುದಾಗಿದೆ. ಆದರೆ ಔಷಧಿ ದೊರಕುವಿಕೆಗೆ ತೊಂದರೆ ಆಗುವುದಿಲ್ಲ. ಬಹುರಾಷ್ಟ್ರೀಯ ಕಂಪನಿಗಳಿಗೆ ಕಳಪೆ ಪೇಟೆಂಟ್ ಪಡೆದು ಔಷಧಿ ತಯಾರಿಸಲು ಸಾಧ್ಯವಾಗುವುದಿಲ್ಲ.

ಆರೋಗ್ಯದ ಹಕ್ಕು ಎಂದೆಂದಿಗೂ ಸ್ವಾಮ್ಯ ಹಕ್ಕಿಗಿಂತ ಹೆಚ್ಚಿನದು. ಮೊದಲಿಗೆ ಪೇಟೆಂಟ್ ಬದಲಿಸುವುದಾಗಿ ಭಾರತ ಒಪ್ಪಿಕೊಂಡಿದುದೇ ತಪ್ಪು. ಒಪ್ಪಿಕೊಂಡ ನಂತರ ಪೇಟೆಂಟ್ ಬದಲಾವಣೆಯಿಂದ ಜನಾರೋಗ್ಯಕ್ಕೆ ಆಪತ್ತು ಬರದಂತೆ ನೋಡಿಕೊಳ್ಳುವುದು ಸರ್ಕಾರದ ಜವಾಬ್ದಾರಿ. ಹಿಂದೆ ಸಂಭವಿಸಿದ ತಪ್ಪುಗಳನ್ನು ಸಾರ್ವಜನಿಕವಾಗಿ ಮಾಜಿ ಕೇಂದ್ರ ವಾಣಿಜ್ಯ ಸಚಿವರೇ ೨೦೦೦ (ಜೂನ್ ೧೫) ಇಸವಿಯಲ್ಲಿ ಒಪ್ಪಿಕೊಂಡಿದ್ದಾರೆ. ''ಡಬ್ಲ್ಯೂ.ಟಿ.ಓ.ಗೆ ನಾವು ತಗ್ಗಿ ಬಗ್ಗಿದೆವು. ಅದರ ಒತ್ತಡಕ್ಕೆ ಮಣಿದೆವು, ಕಣ್ಣುಮುಚ್ಚಿ ಸಹಿ ಹಾಕಿದೆವು''. ಆದರೆ ಈಗಿರುವ ವಾಣಿಜ್ಯ ಹಾಗೂ ಕೈಗಾರಿಕಾ ಮಂತ್ರಿಗಳು ಕಣ್ಣುಮುಚ್ಚಿ ಮಿಥ್ಯೆಗಳನ್ನು ಹರಡುತ್ತಿದ್ದಾರೆ.

ಡಂಕಲ್ ಪ್ರಸ್ತಾವನೆಯ (೧೯೮೬) ಸಮಯದಲ್ಲಿದ್ದ ಅನಿಶ್ಚಿತತೆ ಈಗ ಕೊನೆಗೊಂಡಿದೆ. ಈ ತಿದ್ದುಪಡಿಯ ನ್ಯೂನತೆಗಳನ್ನು ಡಬ್ಲ್ಯೂ.ಟಿ.ಓ.ದ ಮುಂದಿನ ಸಭೆಗಳಲ್ಲಿ ನಮ್ಮ ಸರಕಾರ ಮಂಡಿಸಿ ಸರಿಪಡಿಸಿಕೊಳ್ಳಬಹುದಾಗಿದೆ. ಆದರೆ ನಮ್ಮ ಮುಖ್ಯ ಗುರಿ ಟ್ರಿಪ್ಸ್ ಒಪ್ಪಂದದಲ್ಲಿ ಕೆಲವು ಬದಲಾವಣೆ ತರುವುದರ ಬದಲು, ಟ್ರಿಪ್ಸ್ ಒಪ್ಪಂದವನ್ನೇ ವ್ಯಾಪಾರ ಒಪ್ಪಂದದಿಂದ ತೆಗೆದುಹಾಕುವುದಾಗಬೇಕು. ಬೌದ್ಧಿಕ ಆಸ್ತಿ ವ್ಯಾಪಾರದ ವಿಷಯವಲ್ಲ.

ಡಾ|| ಪ್ರಕಾಶ್ ಸಿ. ರಾವ್
ನಂ. ೬೩/೨, ಮೊದಲನೇ 'ಆರ್' ಬಡಾವಣೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦




# ಶ್ರೀಮಂತರ ಮತ್ತೊಂದು ಶೃಂಗಸಭೆ

# ಬಡವರಿಗೆ ಪರಿಹಾರ ಮೊಲದ ಕೊಂಬು !

**ನಾ**ನು ಹಿಂದೊಮ್ಮೆ 'ಹೊಸತು'ವಿನ ಲೇಖನವೊಂದರಲ್ಲಿ ಒಂದು ಉದ್ಗಾರವೆತ್ತಿದ್ದೆ: ಆಫ್ರಿಕಾದಲ್ಲಿ ಏಡ್ಸ್ ರೋಗದಿಂದ ಅಲ್ಲಿಯ ಜನರೆಲ್ಲಾ ಸತ್ತರೆ, ಪಶ್ಚಿಮದವರಿಗೆ ಅದನ್ನು ಸಂಪೂರ್ಣವಾಗಿ ಆಕ್ರಮಿಸಿಕೊಳ್ಳಲು ಸುಲಭವಾಗುತ್ತದೆ, ಎಂದು. ಅದಕ್ಕೆಂದೇ ಅವರಿಗೆ ನಾಗರಿಕತೆಯ ಲೋಕದಿಂದ ಉದ್ಭವವಾದ ಏಡ್ಸ್ ಎಂಬ ರೋಗದ ಬಳುವಳಿಯನ್ನು ಕೊಟ್ಟು ಅವರಿಗೆ ಬೇಕಾದ ಔಷಧಿಯ ಬೆಲೆಯನ್ನು ಅವರಿಗೆ ನಿಲುಕದಂತೆ ಏರಿಸಿರುವುದು ಎಂದೆನಿಸಿದರೆ ಅದು ನನ್ನ ತಪ್ಪಲ್ಲ. ಆಸ್ಟ್ರೇಲಿಯಾ ಮತ್ತು ಉತ್ತರ ಅಮೆರಿಕಾದಲ್ಲಿ ಹಾಗೂ ದಕ್ಷಿಣ ಅಮೆರಿಕಾದಲ್ಲಿ ಮೂಲನಿವಾಸಿಗಳನ್ನು ಅವರು ಬೇಟೆಯಾಡಿದ್ದನ್ನು ಹೇಗೆ ಮರೆಯುವುದು ? ಬೊಲಿವಿಯಾದಲ್ಲಿ ಅದು ಹೇಗೋ ಕೈತಪ್ಪಿ, ಮೂಲನಿವಾಸಿಗಳ ಸಂಖ್ಯೆ ಹೆಚ್ಚಿದೆ ಮತ್ತು ಓಟಿನ ಪ್ರಜಾತಂತ್ರವೂ ಇದೆ. ಕಳೆದ ತಿಂಗಳು ಆ ದೇಶದ ಬಹುಸಂಖ್ಯಾತರು ರಾಷ್ಟ್ರದ ಸಂಪತ್ತಾದ ಅನಿಲ ಮತ್ತು ಎಣ್ಣೆಯನ್ನು ತಮ್ಮ ಬಡತನ ಹರಿಸುವ ರೀತಿಯಲ್ಲಿ ಬಳಸಬೇಕೆಂದು ಸಂಪು ಹೂಡಿದರು. ವಲಸೆ ಬಂದು ನೆಲೆಸಿದವರೇ ಹೆಚ್ಚಿರುವ ಅಲ್ಪಸಂಖ್ಯಾತ ಪೂರ್ವ ಪ್ರದೇಶದವರು ಅನಿಲಕ್ಕೆ ಸಂಬಂಧಪಟ್ಟ ಉದ್ಯಮವನ್ನು ನಡೆಸುತ್ತಾರಾಗಿ, ಅವರು ಪ್ರಜಾ ಅಭಿಪ್ರಾಯವನ್ನು ಮನ್ನಣೆ ಮಾಡುವ ಬದಲು, ದೇಶ ವಿಭಜನೆಗೇ ಸನ್ನದ್ಧರಾದರು ! ಸದ್ಯಕ್ಕೆ ಮತ್ತೊಂದು ಚುನಾವಣೆಯನ್ನು ನಡೆಸುವುದಾಗಿ, ಹೊಸ ರಾಜ್ಯಾಂಗ ರಚಿಸುವುದಾಗಿ ಹೇಳಿ ಅಲ್ಲಿಯ ಬಿಕ್ಕಟ್ಟು ಮುಂದೂಡಲ್ಪಟ್ಟಿದೆ. ಆಫ್ರಿಕಾದ ಬಡತನದ ಬೇಗೆ ಎಷ್ಟು ಹೆಚ್ಚಿದೆಯೆಂದರೆ ಅಲ್ಲಿಯ ಜನಸಂಖ್ಯೆಯ ಬಹುಭಾಗ ಏಡ್ಸ್ ರೋಗಕ್ಕಿಂತ ಹೆಚ್ಚಾಗಿ ಹಸಿವಿನಿಂದ ಸಾಯುವ ಸ್ಥಿತಿ ತಲುಪಿದ್ದಾರೆ. ಅದಕ್ಕೆಂದೇ ದಕ್ಷಿಣ ಆಫ್ರಿಕಾದ ಅಧ್ಯಕ್ಷ ಎಂಬೆಕಿ, ಏಡ್ಸ್‌ಗಿಂತ ಮುಂಚೆ ಆರ್ಥಿಕ ಬೆಳವಣಿಗೆಗೆ ಆದ್ಯತೆ ಅಗತ್ಯ ಅಂದಿದ್ದು. ಏಡ್ಸ್, ಬಿಳಿಯರು ಕರಿಯರು ಎಂಬ ತಾರತಮ್ಯವಿಲ್ಲದೆ ಹರಡುತ್ತಿದ್ದು ಬಿಳಿಯರಿಗೆ ಅದು ನಿಜಕ್ಕೂ ಗಾಬರಿ ತರುವಂಥದು. ಬೆಂಗಳೂರಿನಲ್ಲಿ ಓಕಳೀಪುರದ ಸ್ಲಂಗಳಲ್ಲಿ ಕಾಲರಾ ಬಂದರೆ ಸದಾಶಿವನಗರದವರೂ ನಡುಗಬೇಕಾಗುತ್ತದೆ. ಕಳೆದ ತಿಂಗಳೆಲ್ಲಾ ಆಫ್ರಿಕಾದ ಬಡತನದ ಚರ್ಚೆ ಹಾಗೂ ವಿಶ್ವ ಪರಿಸರದ ಬಗೆಗಿನ ಕಾಳಜಿಯದೇ ಚರ್ಚೆ. ಇವೆರಡೂ ಬೇರೆ ಬೇರೆ ಸಮಸ್ಯೆ ಎಂದೀರಿ ! ಪರಿಸರ ಕೆಡುತ್ತಿರುವುದರ ಮುಖ್ಯ ಕಾರಣ ವಿಶ್ವದ ಅಲ್ಪಸಂಖ್ಯಾತರು; ಅವರು ವಿಶ್ವದ ಬಹುಭಾಗ ಇಂಧನ ಮೂಲಗಳನ್ನು ಅತಿ ವೇಗವಾಗಿ, ಪರಿಸರ ರಕ್ಷಿಸುವ ಯಾವ ರಕ್ಷಣಾ ವಿಧಾನಗಳನ್ನೂ ಅನುಸರಿಸದೆ ಬಳಸುತ್ತಿರುವುದರಿಂದ. ಅಮೆರಿಕವೊಂದೇ ವಿಶ್ವದ ಶೇ. ೨೫ರಷ್ಟು ಇಂಧನವನ್ನು ಕಬಳಿಸುತ್ತದೆ. ಆದರೆ ಅದರಿಂದಾಗಿ ಆಗುವ ಪರಿಸರ ನಾಶದ ಪರಿಣಾಮ ನಿಷ್ಪಕ್ಷಪಾತವಾಗಿ ವಿಶ್ವದ ಬಡಜನರ ಮೇಲೂ ಸಿರಿವಂತರ ಮೇಲೂ ಬೀಳುತ್ತದೆ. ಸಿರಿವಂತರು ಸ್ವಲ್ಪಕಾಲ ತಮ್ಮನ್ನು ತಾವು ರಕ್ಷಿಸಿಕೊಳ್ಳಬಲ್ಲರು. ಆದರೆ ಬಡವರ ಗತಿ ಏನು ? ಪರಿಸರ ನಾಶದ ಪರಿಣಾಮವಾಗಿ ಕಳೆದ ನಾಲ್ಕು ಋತುಮಾನದಲ್ಲೂ ಮಳೆ ಬರದೆ ವಿಶ್ವದೆಲ್ಲೆಡೆ ಕೃಷಿ ಕುಗ್ಗಿ ಬಡವರು ಇನ್ನಷ್ಟು ಬಡವರಾಗಿದ್ದಾರೆ. ನಮ್ಮ ದೇಶದ ಜನರಿಗೂ ಇದರ ಅನುಭವ ಆಗಿದೆ. ಅಮೆರಿಕದಲ್ಲೂ ಮಳೆಯಿಲ್ಲದೆ ಕ್ಷಾಮ ಪರಿಸ್ಥಿತಿ ಉಂಟಾಗಿತ್ತು. ಆದರೆ ಈಗಾಗಲೇ ಸೊರಗಿ ಸೋತುಹೋಗಿರುವ ಆಫ್ರಿಕಾ ದೇಶದ ಜನತೆ ಈ ಹೊಡೆತ ತಡೆದುಕೊಂಡು ಬದುಕಲಾರದೆ ಲಕ್ಷಗಟ್ಟಲೆ ಹುಳುಗಳಂತೆ ಸಾಯುತ್ತಿದ್ದಾರೆ. ಅವರಿಗೆ ಸಹಾಯ ನೀಡುವ ಚರ್ಚೆ ಮಾತ್ರ ನಿರಂತರ ನಡೆಯುತ್ತಲೇ ಇದೆ. ಕಿಯೋಟೋ ನಗರದಲ್ಲಿ ಒಪ್ಪಂದವಾದ ಪರಿಸರ ಸಂರಕ್ಷಣೆಯ ಘೋಷಣೆಗೆ ಅಮೆರಿಕಾ ಇನ್ನೂ ಸಹಿ ಹಾಕಿಲ್ಲ. ಏಡ್ಸ್ ರೋಗದ ಪರಿಹಾರ ಎನ್ನಿ, ಬಡತನ ನಿವಾರಿಸಲು ಸಹಾಯ ಎನ್ನಿ, ಪರಿಸರ ರಕ್ಷಿಸಲು ಕ್ರಮ ಎನ್ನಿ, ಎಲ್ಲವೂ ಒಂದೇ ಸಮಸ್ಯೆಯ ವಿವಿಧ ಮುಖಗಳು. ಇದಕ್ಕೆ ಮತ್ತೂ ಒಂದು ಮುಖ ಸೇರಿಸಬೇಕು. ಅದು ವ್ಯಾಪಾರದ್ದು. ಅಮೆರಿಕಾ ಮತ್ತು ಪಶ್ಚಿಮ ಯೂರೋಪ್ ದೇಶಗಳು ನಾನ್ನೂರು ಬಿಲಿಯನ್ ಡಾಲರ್‌ಗಳಷ್ಟು ಹಣವನ್ನು ತಮ್ಮ ರೈತರಿಗೆ ಸಹಾಯಧನವಾಗಿ ನೀಡುತ್ತವೆ. ಅವರ ಕೃಷಿ ಪದಾರ್ಥಗಳು ತೀರ ದುಬಾರಿ. ಆದರೆ ಈ ಅಪಾರ ನೆರವಿನಿಂದಾಗಿ ಅವರು ತಮ್ಮ ಸರಕುಗಳನ್ನು ಸುಲಭ ದರದಲ್ಲಿ ಹಿಂದುಳಿದ ರಾಷ್ಟ್ರಗಳ ಒಳಗೂ ನುಗ್ಗಿ ಮಾರುತ್ತಾರೆ. ಮಾಲಿಯಂಥ ಅತಿ ಬಡ ದೇಶದೊಳಗೆ ಹೋಗಿ ಹತ್ತಿ ಮಾರುವ ವ್ಯಾಪಾರವೂ ಇವರಿಗೆ ಬೇಕು. ಆದರೆ ಮಾಲಿಯಲ್ಲೇ ಅತಿ ಕಡಿಮೆ ಬೆಲೆಯಲ್ಲಿ ಹತ್ತಿ ಉತ್ಪತ್ತಿಯಾಗುತ್ತದೆ. ಆದರೂ ಅದಕ್ಕಿಂತ ಕಡಿಮೆ ಬೆಲೆಗೆ ವಿದೇಶಿ ಹತ್ತಿ ಮಾರಿದರೆ, ಆ ಕೃಷಿಕರ ಬದುಕೇನಾಗಬೇಕು ? ಆ ಬಡದೇಶ ತನ್ನ ದೇಶದ ಬದುಕನ್ನು ರಕ್ಷಿಸಿಕೊಳ್ಳಲು ವ್ಯಾಪಾರದ ಕಟ್ಟೆಗಳಲ್ಲಿ ರಕ್ಷಣಾ ತೆರಿಗೆಗಳನ್ನು ಹಾಕುವುದು ಜಾಗತೀಕರಣ-ಉದಾರೀಕರಣ ವಾದಿಗಳ ದೃಷ್ಟಿಯಿಂದ ಮಹಾ ಅಪರಾಧ ಮತ್ತು ಅವರ ಅರ್ಥಶಾಸ್ತ್ರದ ಪ್ರಕಾರ ತಪ್ಪು ! ಈ ಎಲ್ಲಾ ಹಿನ್ನೆಲೆಯಲ್ಲಿ ಇಂಗ್ಲೆಂಡಿನಲ್ಲಿ ಜಗತ್ತಿನ ಅತಿ ಶ್ರೀಮಂತವೆನಿಸಿದ ಎಂಟು ರಾಷ್ಟ್ರಗಳು (ಜಿ-೮) ಸಭೆ ಸೇರಿದವು. ಅವರು ಈ ಎಲ್ಲ ಸಮಸ್ಯೆಗಳಿಗೆ ತುರ್ತು ಪರಿಹಾರ ನೀಡಬೇಕೆಂದು ಪ್ರಪಂಚದಾದ್ಯಂತ ಹಲವು ರೀತಿಯ ಒತ್ತಡಗಳು ಉಂಟಾದುವು. ಟೋನಿ ಬ್ಲೇರ್ ಮತ್ತು ಆತನ ಹಣಕಾಸು ಮಂತ್ರಿ ಆಫ್ರಿಕಾ ಖಂಡವನ್ನೆಲ್ಲಾ ಸುತ್ತಿ ಪ್ರಚಾರ ಮಾಡಿದರು. ಆಫ್ರಿಕಾದ ನಾಯಕರುಗಳು ತಮ್ಮದೇ ಶೃಂಗಸಭೆ ಸೇರಿ ತಾವು ಏನನ್ನು ಬಯಸುತ್ತೇವೆ ಎಂದು ಪಟ್ಟಿ ಮಾಡಿದರು. ಒಂದು ಸ್ವಾರಸ್ಯದ ಪ್ರಸಂಗವೆಂದರೆ ಲಕ್ಷಗಟ್ಟಲೆ ಶ್ರೋತೃಗಳನ್ನು ಆಕರ್ಷಿಸುವ ರಾಕ್ ಸಂಗೀತ ಪಟುಗಳು ವಿಶ್ವದ ಹತ್ತು ಮಹಾನ್ ನಗರಗಳಲ್ಲಿ ಏಕಕಾಲಕ್ಕೆ ಸಂಗೀತ ಸಮಾವೇಶ ನಡೆಸಿ, ಅಲ್ಲೆಲ್ಲಾ ಈ ಶ್ರೀಮಂತ ರಾಷ್ಟ್ರಗಳ ಮೇಲೆ ಪ್ರಭಾವ ಮತ್ತು ಒತ್ತಡ ಬೀರುವ ಪ್ರಚಾರ ಮಾಡಿದರು. ಲಂಡನ್ ನಗರದಲ್ಲಿ ನಡೆದ ಭಯೋತ್ಪಾದಕರ ಬಾಂಬಿನ ಧಾಳಿ ಸ್ವಲ್ಪ ಈ ಸಭೆಯ ವೈಭವಕ್ಕೆ ಧಕ್ಕೆ ತಂದಿತು. ಲಂಡನ್ ನಗರ ೨೦೧೨ರ ಒಲಿಂಪಿಕ್ ನಗರವಾಗುವ ಸಂತಸದ ಹಬ್ಬವನ್ನು ಆಚರಿಸಲಾಗಲಿಲ್ಲ. ಪಾಪ ! ಆದರೇನು ಮಾಡುವುದು ? ನೀವೇನು ಬಿತ್ತುತ್ತೀರೋ ಅದನ್ನೇ ಕುಯ್ಯಬೇಕು. ಅಮೆರಿಕನ್ ಸೈನ್ಯದ ಆರು ವಾರಗಳ ಧಾಳಿಯಲ್ಲಿ ಇರಾಕಿನ ಫಲೂಜಾ ನಗರದವರು ಏನೆಲ್ಲಾ ಕಷ್ಟಪಟ್ಟಿದ್ದರು ಎಂಬುದು ವರದಿಯಾಗಲಿಲ್ಲ. ಆದರೆ ಅದರ ಒಂದು ತುಣುಕು ಲಂಡನ್‌ನಲ್ಲಿ ಅನುಭವವಾಯಿತೇನೋ ! ಆದರೂ ಬ್ರಿಟಿಷರು ಯಾವಾಗಲೂ ಹೇಳುವಂತೆ ''ಬಿಸಿನೆಸ್ ಆ್ಯಸ್ ಯೂಷುಯಲ್'' ಎಂಬಂತೆ ನಡೆಯಲೇಬೇಕು. ಧಾಳಿ ನಡೆದ ದಿನ ಷೇರುಪೇಟೆ ಸ್ವಲ್ಪ ಕುಸಿಯಿತು. ಮಾರನೆಯ ದಿನವೇ ಕುಸಿದದ್ದಕ್ಕಿಂತ ಹೆಚ್ಚು ಜಿಗಿಯಿತು !

ಕೊನೆಗೂ ಜಿ-೮ರ ಸಭೆಯಲ್ಲಿ ನಡೆದದ್ದೇನು ? ತಮ್ಮೊಂದಿಗೆ ಇರಲು ಭಾರತ, ಚೀನಾ ಎರಡೂ ರಾಷ್ಟ್ರಗಳ ಪ್ರಧಾನಿಗಳೇ ಅಲ್ಲದೆ ಲ್ಯಾಟಿನ್ ಅಮೆರಿಕಾದ, ಆಫ್ರಿಕಾದ ಕೆಲವು ನಾಯಕರುಗಳನ್ನೂ ಆಹ್ವಾನಿಸಿದ್ದರೂ, ಅವರೇನೂ ಜಿ-೮ರ ಆಂತರಿಕ ಚರ್ಚೆಯಲ್ಲಿ ಭಾಗವಹಿಸಿದ್ದಂತೆ ಕಾಣುವುದಿಲ್ಲ. ಸಭೆ ನಡೆದ ಗ್ಲೆನ್‌ಈಗಲ್ಸ್ ವಿಶ್ವವಿಖ್ಯಾತ ಗಾಲ್ಫ್ ಮೈದಾನ ! ಬಹುಶಃ ಇವರೆಲ್ಲಾ ಆ ಸಭೆಯ ಚರ್ಚೆ ನಡೆಯುತ್ತಿದ್ದಾಗ ಗಾಲ್ಫ್ ಆಡುತ್ತಿದ್ದಿರಬಹುದು. ಪ್ರಾರಂಭ ಮತ್ತು ಮುಕ್ತಾಯ ಸಮಾರಂಭಗಳಲ್ಲಿ ಮಾತ್ರ ಭಾಗವಹಿಸಿರಲೂ ಸಾಕು. ಬ್ಲೇರ್ ಯಾವಾಗಲೂ ಏನು ಹೇಳಿದರೂ ಬ್ಲೇರ್ ಮಾಡಿ ಹೇಳುತ್ತಾನೆ. ಅಂದರೆ ಅನಗತ್ಯವಾಗಿ ಸಾಧಾರಣ ವಿಷಯವನ್ನು ಏರುಧ್ವನಿಯಲ್ಲಿ ಘೋಷಿಸುತ್ತಾನೆ, ಕೇಳುತ್ತಿರುವವರಿಗೆ ಅವನು ಹೇಳುತ್ತಿರುವುದು ನೂರಕ್ಕೆ ನೂರು ಸತ್ಯಎಂದೆನಿಸಿಬಿಡುವಂತೆ. ಆದರೆ ವಿರಾಮವಾಗಿ ವಿಮರ್ಶಿಸಿದರೆ ಅದರಲ್ಲಿ ಬೊಗಳೆ ಎಷ್ಟು ಎಂದು ಸ್ಪಷ್ಟವಾಗುತ್ತದೆ. ಶೃಂಗಸಭೆ ನಡೆಯುವುದಕ್ಕೆ ಮುಂಚೆ ಕೊನೆಯಪಕ್ಷ ಆಫ್ರಿಕಾಕ್ಕೆ ವರ್ಷ ವರ್ಷವೂ ೫೦ ಬಿಲಿಯನ್ ಡಾಲರ್ ಸಹಾಯ ದೊರೆಯಬೇಕೆಂದಿದ್ದ. ಈಗ ವಿಶ್ವದ ಬಡದೇಶಗಳಿಗೆ ೨೦೧೦ರ ವೇಳೆಗೆ ಕ್ರಮಕ್ರಮವಾಗಿ ಒಟ್ಟು ೫೦ ಬಿಲಿಯನ್ ಡಾಲರ್ ಸಹಾಯ ದೊರಕಿಸುವುದಾಗಿ ತೀರ್ಮಾನಿಸಿದರು. ಇದರಲ್ಲಿ ಆಫ್ರಿಕಾಕ್ಕೆ ಆ ವೇಳೆಗೆ ದೊರಕುವುದು ಕೇವಲ ೨೫ ಬಿಲಿಯನ್ ಡಾಲರ್‌ಗಳು ಮಾತ್ರ. ಇದಕ್ಕೂ ಹಿಂದೆ ಅತ್ಯಂತ ಬಡದೇಶಗಳ ಸಾಲ ಮನ್ನಾ ಮಾಡುವುದಾಗಿ ಹೇಳಿದ್ದರು. ಅದು ಸ್ವಲ್ಪಮಟ್ಟಿಗೆ ಸಾಧ್ಯವಾಗಿದ್ದರೂ, ಬಡತನ ನಿವಾರಣೆಯ ದೃಷ್ಟಿಯಿಂದ ಅದು ಅರ್ಥಹೀನವಾದುದು. ಅವರೇನೂ ಈ ಸಾಲವನ್ನು ಹಿಂದಿರುಗಿಸುತ್ತಿರಲಿಲ್ಲ ! ಇಲ್ಲಿ ಬಡವರೆಂದೆನಿಸಿಕೊಂಡವರ ಆದಾಯ ದಿನಕ್ಕೆ ಒಂದು ಡಾಲರೂ ಇಲ್ಲ. ಆಫ್ರಿಕಾದಲ್ಲಿ ಸುಮಾರು ೨೫೦ ದಶಲಕ್ಷ ಮಂದಿ ಇಂಥವರು ಇದ್ದರೆ,

ಕೆ. ಎಸ್. ಪಾರ್ಥಸಾರಥಿ

ಏಷ್ಯಾದಲ್ಲಿ ಈ ಸಂಖ್ಯೆ ಸುಮಾರು ೫೦೦ ದಶಲಕ್ಷ ಮಂದಿ. ಆಫ್ರಿಕಾದ ರಾಜ್ಯಗಳು ಈಗಷ್ಟೇ ಆಧುನಿಕತೆಗೆ ತೆರೆದುಕೊಳ್ಳುತ್ತಿದ್ದು, ಯಾಜಮಾನ್ಯ ಪದ್ಧತಿಯ ಸರ್ವಾಧಿಕಾರದ ದುರಾಡಳಿತಕ್ಕೆ ಒಳಗಾಗಿ ವಿದೇಶಿ ಸಾಲಗಳೆಲ್ಲಾ ಸ್ವಿಸ್ ಬ್ಯಾಂಕ್ ಸೇರಿಬಿಟ್ಟಿವೆ. ಈ ಸರ್ವಾಧಿಕಾರಿಗಳನ್ನು ಇಷ್ಟು ವರ್ಷ ಪಶ್ಚಿಮದ ಸರ್ಕಾರಗಳು ತಮ್ಮದೇ ರಾಜಕೀಯ ಕಾರಣಕ್ಕಾಗಿ ಪೋಷಿಸುತ್ತಾ ಬಂದಿವೆ. ಈಗ ಏಕಾಏಕಿ ಅವರನ್ನೆಲ್ಲಾ ಪಶ್ಚಿಮದ ಮಾದರಿಯ ಮುಂದುವರಿದ ಪ್ರಜಾಪ್ರಭುತ್ವವಾಗಬೇಕೆಂದೂ, ಉತ್ತಮ ಆಡಳಿತ ನಿರ್ವಹಣೆ ನಡೆಸುವುದಾದರೆ ಮಾತ್ರ ಸಹಾಯಧನ ನೀಡುವುದಾಗಿಯೂ ಹೇಳುತ್ತಾರೆ. ಅಷ್ಟೇ ಅಲ್ಲ, ಅದಕ್ಕೆ ಸ್ಥಳೀಯ ಸರ್ಕಾರೇತರ ಸೇವಾ ಸಂಸ್ಥೆಗಳನ್ನು, ಸಾರ್ವಜನಿಕರನ್ನು ಆಹ್ವಾನಿಸದೆ, ಪಶ್ಚಿಮದ ಬಹುರಾಷ್ಟ್ರೀಯ ಕಂಪನಿಗಳಿಗೆ ಆ ಕೆಲಸ ವಹಿಸಲು ಮುಂದಾಗಿದ್ದಾರೆ. ಈ ವ್ಯಾಪಾರಿ ಸಂಸ್ಥೆಗಳೇ ಆಫ್ರಿಕಾವನ್ನು ಇಲ್ಲಿಯವರೆಗೆ ಕೊಳ್ಳೆ ಹೊಡೆಯುತ್ತಿದ್ದದ್ದು! ಇದರ ಜತೆಜತೆಗೇ ವ್ಯಾಪಾರದ ಕರಾರುಗಳನ್ನು ಸಡಿಲಗೊಳಿಸಿ, ತಮ್ಮ ದೇಶದೊಳಗೆ ಕೃಷಿಕರಿಗೆ ಸಹಾಯಧನ ನೀಡುವುದನ್ನು ನಿಲ್ಲಿಸಿ, ಬಡ ದೇಶಗಳು ಒಂದಿಷ್ಟು ವ್ಯಾಪಾರ ಮಾಡಿ ಲಾಭ ಪಡೆದುಕೊಳ್ಳಲಿ ಎಂದರೆ, ಅದಕ್ಕೆ ಮುಂಚೆ ಬಡದೇಶಗಳು ತಮ್ಮ ಸುಂಕದ ಕಟ್ಟೆಯನ್ನು ಪಶ್ಚಿಮದ ವ್ಯಾಪಾರಿಗಳಿಗೆ ಮುಕ್ತವಾಗಿ ತೆರೆದಿಡಬೇಕೆಂದು ವಾದಿಸುವ ಈ ಸಾಮ್ರಾಜ್ಯಶಾಹಿಗಳ ದೂರದೃಷ್ಟಿಯ ಹುನ್ನಾರ ಬಯಲಾಗಿದೆ. ನಿನ್ನೆಯ ಶೃಂಗ ಸಭೆಯಲ್ಲಿ ಈ ಗಲಾಟೆಯಲ್ಲಿ ಏಷ್ಯಾದ ಬಡಜನರ ಗೋಳನ್ನು ಇವರು ಗಮನಿಸದೇ ಇರುವುದು ಸ್ಪಷ್ಟವಾಗಿದೆ. ಹಾಗೂ ಪರಿಸರ ಸಂರಕ್ಷಣೆಯ ವಿಷಯದಲ್ಲಿ ಅಮೆರಿಕಾ, ''ಹೌದು, ಅಂಥ ಗಂಭೀರ ಸಮಸ್ಯೆ ಇದೆ ಎಂದು ಒಪ್ಪಿಕೊಳ್ಳುತ್ತೇವೆ'' ಎಂದು ಹೇಳಿ, ''ಪರಿಹಾರ ಮಾರ್ಗ ಕಿಯೋಟೋ ಪ್ರಣಾಳಿಕೆಯಲ್ಲೇ ಇಲ್ಲ, ಬೇರೆ ಮಾರ್ಗವನ್ನು ನಾವು ಹುಡುಕುತ್ತೇವೆ, ತಡೆಯಿರಿ'' ಎಂಬ ಹಾರಿಕೆಯ ಮಾತನಾಡಿದೆ. ಪರಿಸರವಾದಿಗಳು ೨೦೧೨ರೊಳಗೆ ಕಿಯೋಟೋ ಕಾರ್ಯಕ್ರಮ ಪ್ರಾರಂಭವಾಗದಿದ್ದರೆ, ಪರಿಸರಕ್ಕೆ ತುಂಬಲಾರದ, ದುರಸ್ತಿಯಾಗದ ನಷ್ಟವಾಗುತ್ತದೆ ಎಂದು ಎಚ್ಚರಿಕೆ ನೀಡಿದ್ದಾರೆ.

ಬಡ ಮತ್ತು ಹಿಂದುಳಿದ ದೇಶಗಳಿಗೆ ಸುಗಮವಾದ ಲಾಭಪೂರ್ಣ ವ್ಯಾಪಾರಕ್ಕೆ ಅವಕಾಶ ಮಾಡಿ ಕೊಡುವುದೇ ನಿಜವಾದ ಆರ್ಥಿಕ ನೆರವು ಎಂದು ವಿಶ್ವ ಸಂಸ್ಥೆಯ ಪ್ರಾರಂಭದ ದಿನಗಳಿಂದ ಹೇಳಿಕೊಂಡು ಬರಲಾಗಿದೆ. ಶ್ರೀಮಂತ ರಾಷ್ಟ್ರಗಳ ರಾಷ್ಟ್ರಾದಾಯದ ಶೇ.೦.೭ರಷ್ಟು ಮಾತ್ರ ನೆರವು ನೀಡಿದರೂ ಈ ರಾಷ್ಟ್ರಗಳು ಅಭಿವೃದ್ಧಿಯತ್ತ ತಿರುಗಬಹುದೆಂಬ ಅಂದಾಜಿದೆ. ಯುದ್ಧ ಮತ್ತು ನೆರವು ಎಂಬ ಶಸ್ತ್ರಾಸ್ತ್ರಗಳಿಗಾಗಿ ಇವರು ಖರ್ಚು ಮಾಡುವ ಹಣ ಇದಕ್ಕೆ ಹತ್ತಿಪ್ಪತ್ತರಷ್ಟು ಹೆಚ್ಚಿನದು. ಆದರೆ ವಿಶ್ವ ವ್ಯಾಪಾರ ಸಂಸ್ಥೆ ಬಂದಂದಿನಿಂದ ವ್ಯಾಪಾರ ಸಡಿಲವಾಗುವುದಿರಲಿ, ವ್ಯಾಪಾರದ ಮೂಲಕ ಬಡ ರಾಷ್ಟ್ರಗಳ ಶೋಷಣೆ ನೂರುಪಟ್ಟು ಹೆಚ್ಚುವ ಎಲ್ಲ ಸೂಚನೆಯೂ ಇದೆ. ಒಟ್ಟಾರೆ ಈ ಶೃಂಗಸಭೆಯು ಗಿಟ್ಟಿಸಿದ ಪ್ರಚಾರ ನೋಡಿದರೆ ಅದು ಸಾಧಿಸಿದ್ದು ಏನೇನೂ ಇಲ್ಲ ಎಂದು ಸ್ಪಷ್ಟವಾಗಿದೆ. ಲಂಡನ್ನಿನಲ್ಲಿ ಪುನಃ ಜ್ಞಾಪಿಸಿಕೊಳ್ಳಬೇಕಾಗಿ ಬಂದ ಭಯೋತ್ಪಾದಕ ಸಮಸ್ಯೆಯ ಹಿಂದೆ ವಿಶ್ವದಾದ್ಯಂತ ಶೋಷಣೆಯ ರೌದ್ರ ನರ್ತನ ಹುದುಗಿರುವುದು ಎಲ್ಲರಿಗೂ ಕಾಣುವಂಥ ವಿಷಯ. ಅಮೆರಿಕಾದ ಆಂತರ್ಯದಲ್ಲೇ ಒಂದು ಹೊಸ ಚಳುವಳಿ ಪ್ರಾರಂಭವಾಗಿದೆ. ಶ್ರೀಮಂತ ರಾಷ್ಟ್ರಗಳು, ಅದರಲ್ಲೂ ಅಮೆರಿಕಾ, ಇತಿಹಾಸದಲ್ಲಿ ಕರಿಯರನ್ನು ಶೋಷಿಸಿದ್ದು, ಈಗ ಅವರು ಕರಿಯರಿಗೆ ಪರಿಹಾರ ಧನ ನೀಡಬೇಕೆಂದು ಬೃಹತ್ ಪ್ರಮಾಣದ ಆಂದೋಲನ ನಡೆಯುತ್ತಿದ್ದು, ಅದು ನ್ಯಾಯಾಸ್ಥಾನದ ಕಟಕಟೆ ಹತ್ತುವ ಸ್ವಾರಸ್ಯದ ಘಟ್ಟ ತಲುಪುತ್ತಿದೆ. ಶೃಂಗಸಭೆ ಏಡ್ಸ್‌ರೋಗ ಪರಿಹಾರಕ್ಕೆ ಆದಷ್ಟು ಸುಲಭ ದರದ ಔಷಧಿಯನ್ನು ೨೦೧೦ರ ವೇಳೆಗೆ ಒದಗಿಸುವುದಾಗಿ ಹೇಳಿ ಆ ಸಮಸ್ಯೆಯ ಗಂಭೀರತೆಯನ್ನು ಕಡೆಗಾಣಿಸಿ, ವ್ಯಾಪಾರಿಗಳ ಮತ್ತು ಸಾಮ್ರಾಜ್ಯಶಾಹಿಗಳ ಅಮಾನವೀಯತೆಯನ್ನು, ಅವರ ಚಿಂತನೆಯಲ್ಲಿ ದಿವಾಳಿತನವನ್ನು ಹೊರಗೆಡಹಿರುವುದು ಮತ್ತೊಮ್ಮೆ ಸ್ಪಷ್ಟವಾಗಿದೆ.

ನಮ್ಮ ಸ್ವಂತ ಹಿತಾಸಕ್ತಿಗಳಿಗೆ ಮಾರಕವಾಗುವಂತೆ ಹಲವು ಷರತ್ತುಗಳನ್ನು ವಿಧಿಸಿ ಪಶ್ಚಿಮದವರು ನೀಡುವ ನೆರವು (AID), ನಮ್ಮ ಅರ್ಥವ್ಯವಸ್ಥೆಯನ್ನು ನಿರ್ವೀರ್ಯಗೊಳಿಸಿ ಸ್ವಾವಲಂಬನೆಯ ಮಾರ್ಗವನ್ನು ನಾಶಮಾಡುವ ಏಡ್ಸ್ (AIDS) ರೋಗವಾಗಿ ಪರಿಣಮಿಸಿರುವುದನ್ನು ಕಳೆದ ಐದು ದಶಕಗಳ ಆಗುಹೋಗುಗಳು ಸಾಬೀತು ಪಡಿಸಿವೆ. ಅಭಿವೃದ್ಧಿಶೀಲ ರಾಷ್ಟ್ರಗಳು ಹಿಂದುಳಿದ ರಾಷ್ಟ್ರಗಳ ಸಹಾಯಕ್ಕೆ ಹೋಗಬೇಕೆಂಬ, ಅಲಿಪ್ತ ನೀತಿಯನ್ನು ಹಿಂದೆಯೇ ಸಾರಿದ್ದು, ದಕ್ಷಿಣ-ದಕ್ಷಿಣದವರ ನಡುವಿನ ಪರಸ್ಪರ ಸಹಾಯಕ್ಕೆ ಸಜ್ಜಾಗಬೇಕಾದ ಕಾಲ ಈಗ ಒದಗಿಬಂದಿದೆ. ಭಾರತ ಶ್ರೀಮಂತರ ಕ್ಲಬ್ ಸೇರುವ ಅವಕಾಶವಾದ ಬಿಟ್ಟು, ತನ್ನ ಮೂಲ ಸ್ರೋತವಾದ ಅಲಿಪ್ತರಾಷ್ಟ್ರಗಳ ನಾಯಕತ್ವ ವಹಿಸಲು ಸಂದರ್ಭ ಈಗ ತೆರೆದುಕೊಂಡಿದೆ.

**ಕೆ. ಎಸ್. ಪಾರ್ಥಸಾರಥಿ**
ನಂ. ಸಿ-೦೦೧, 'ನಾಗಾರ್ಜುನ ಎನ್‌ಕ್ಲೇವ್', ೭೬/ಎ, ೧೫ನೇ ಕ್ರಾಸ್,
೧ನೇ ಹಂತ ಜೆ.ಪಿ.ನಗರ, ಬೆಂಗಳೂರು - ೫೬೦ ೦೭೮

ಎಜುಸ್ಯಾಟ್ ಕಾರ್ಯಕ್ರಮ
ಎಂಥಾ ವೇಗದ ವೈಜ್ಞಾನಿಕತೆ
ಅದ್ವಿತೀಯ ತಾಂತ್ರಿಕತೆ
ವಿಜ್ಞಾನದ ಪ್ರಖರತೆ
ಆದರೆ,
ಚಾಮರಾಜನಗರಕ್ಕೋಗದೆ
ಹೆದರಿ ಬೆಂಗಳೂರಿನಿಂದಲೇ
ಉದ್ಘಾಟಿಸಿದ್ದು
ಎಂಥಾ ಅವೈಜ್ಞಾನಿಕತೆ
ಅದ್ವಿತೀಯ ಮಾಂತ್ರಿಕತೆ –
ಅಜ್ಞಾನದ ಅನನ್ಯತೆ

ಜೆ. ಬಿ. ಮಂಜುನಾಥ
ವಿನಾಯಕ ಕೃಪ, ಶಾಂತಿನಗರ, ಪಾಂಡವಪುರ

**ನೆನಪು-ನಮನ**



# ಹೂವು ಚೆಲ್ಲಿದ ಹಾದಿಯಲ್ಲಿ ಹೊರಟುಹೋದ

# ಕೆ. ವಿ. ಸುಬ್ಬಣ್ಣ

ಕನ್ನಡ ಸಾಹಿತ್ಯ ಹಾಗೂ ರಂಗಭೂಮಿ ಕ್ಷೇತ್ರಗಳಲ್ಲಿ ಅರ್ಧ ಶತಮಾನಕ್ಕೂ ಹೆಚ್ಚುಕಾಲ ಅವಿಶ್ರಾಂತವಾಗಿ ದುಡಿದು, ಅಪ್ರತಿಮ ಸೇವೆ ಸಲ್ಲಿಸಿ, ಅನೇಕ ಪ್ರಶಸ್ತಿ-ಪುರಸ್ಕಾರಗಳಿಂದ ಸನ್ಮಾನಿತರಾಗಿದ್ದ ಕೆ. ವಿ. ಸುಬ್ಬಣ್ಣನವರು ತೀರಿಹೋಗಿ ಕನ್ನಡ ಸಾಂಸ್ಕೃತಿಕ ಲೋಕಕ್ಕೆ ಅಪಾರ ನಷ್ಟ ಉಂಟಾಗಿದೆ. ವಿದ್ಯಾರ್ಥಿ ದೆಸೆಯಿಂದಲೂ ಅವರೊಡನೆ ನಿಕಟ ಸಂಪರ್ಕವಿರಿಸಿಕೊಂಡಿದ್ದ ನನಗಂತೂ ಅವರಿಲ್ಲವಾಗಿ ಹೋದುದು ಸಹಿಸಲಾಗದಷ್ಟು ನೋವಿನ ಸಂಗತಿಯಾಗಿದೆ.

೧೯೫೧-೧೯೫೪ರಲ್ಲಿ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಓದಲು ಹೋದಾಗ ನನಗೆ ಕೆ. ವಿ. ಸುಬ್ಬಣ್ಣ ಮತ್ತು ಯು. ಆರ್. ಅನಂತಮೂರ್ತಿಯವರ ನಿಕಟ ಸ್ನೇಹ-ಸಹವಾಸ ದೊರೆತುದು ನನ್ನ ಬೌದ್ಧಿಕ ಹಾಗೂ ಶೈಕ್ಷಣಿಕ ಬೆಳವಣಿಗೆಗೆ ತುಂಬ ನೆರವಾಯಿತು. ಓದುತ್ತಿರುವಾಗಲೇ ಸುಬ್ಬಣ್ಣನವರು 'ಹೂವು ಚೆಲ್ಲಿದ ಹಾದಿಯಲ್ಲಿ' ಎಂಬ ಶೀರ್ಷಿಕೆಯಲ್ಲಿ ಜಾನಪದ ಸಾಹಿತ್ಯ ಕುರಿತು ಅನೇಕ ಸೊಗಸಾದ ಗೀತ-ಲೇಖನಗಳನ್ನು ಬರೆದುದು, ಅದು ಮೈಸೂರು ಆಕಾಶವಾಣಿಯಲ್ಲಿ ಅನೇಕ ವಾರಗಳ ಕಾಲ ಪ್ರಸಾರಗೊಂಡು ಭಾರಿ ಜನಪ್ರಿಯತೆ ಗಳಿಸಿದುದು ನನಗಿನ್ನೂ ನೆನಪಿದೆ. ಅದೇ ರೀತಿ ಸುಬ್ಬಣ್ಣನವರು ಮಹಾರಾಜ ಕಾಲೇಜಿನಲ್ಲಿ ಹಿಂದೆಂದೂ ಜರುಗದಿದ್ದಂಥ ಒಂದು ಘಟನೆಗೆ ಕಾರಣವಾದರು – 'ವಿದೂಷಕ' ಎಂಬ ಭಿತ್ತಿಪತ್ರಿಕೆಯನ್ನು ಪ್ರಾರಂಭಿಸಿದರು. ವಾರ ವಾರವೂ ಅನೇಕ ಸ್ವಾರಸ್ಯಕರ ಸುದ್ದಿ ಸಮಾಚಾರಗಳನ್ನು ಆಕರ್ಷಕ ಚಿತ್ರ ರೇಖಾಚಿತ್ರಗಳೊಂದಿಗೆ ಅನೇಕ ಹಾಳೆಗಳಲ್ಲಿ ಬರೆದು ಅವನ್ನು ದೊಡ್ಡ ರಟ್ಟಿಗೆ ಅಂಟಿಸಿ ಅದನ್ನು ಗೋಡೆಯ ಮೇಲೆ ತೂಗುಹಾಕುತ್ತಿದ್ದರು. ಅದನ್ನು ಓದಲು ವಿದ್ಯಾರ್ಥಿಗಳು ಮುಗಿಬಿದ್ದು ಗುಂಪು ಗುಂಪಾಗಿ ಧಾವಿಸಿ ಬರುತ್ತಿದ್ದರು.

ಅದೇ ಹೊತ್ತಿನಲ್ಲಿ ಸುಬ್ಬಣ್ಣನವರು ರಂಗಭೂಮಿಯಲ್ಲೂ ತಮಗಿದ್ದ ಪ್ರತಿಭೆಯ ಪ್ರದರ್ಶನ ಮಾಡುತ್ತಿದ್ದರು. ಕಾಲೇಜಿನಲ್ಲಿ ಸಾಂಸ್ಕೃತಿಕ ಸಮಾರಂಭಗಳಾದಾಗಲೆಲ್ಲ ಸುಬ್ಬಣ್ಣನವರ 'ಷಾಜಹಾನ' ಏಕಪಾತ್ರಾಭಿನಯ ಕಾರ್ಯಕ್ರಮವೊಂದು ಇರುತ್ತಿದ್ದಿತು. ಸುಮಾರು ಅರ್ಧ ಗಂಟೆ ಕಾಲ ನಡೆಯುತ್ತಿದ್ದ ಈ ಕಾರ್ಯಕ್ರಮವನ್ನು ಸಭಿಕರು ಮಂತ್ರಮುಗ್ಧರಾದಂತೆ ತಲ್ಲೀನರಾಗಿ ವೀಕ್ಷಿಸುತ್ತಿದ್ದರು. ಅವರ ಈ ಕಾರ್ಯಕ್ರಮವನ್ನು ಪ್ರಿನ್ಸಿಪಾಲ್ ಡಿಸೋಜಾ, ಪ್ರಾಧ್ಯಾಪಕರುಗಳಾದ ಎಸ್. ವಿ. ರಂಗಣ್ಣ, ಡಿ. ಎಲ್. ಎನ್., ಪರಮೇಶ್ವರ ಭಟ್ಟ, ಕೆ. ವಿ. ರಾಘವಾಚಾರ್ ಮುಂತಾದವರು ಮುಕ್ತಕಂಠದಿಂದ ಶ್ಲಾಘಿಸುತ್ತಿದ್ದುದು ನನಗಿನ್ನೂ ಜ್ಞಾಪಕವಿದೆ. ಇಂಥ ಪ್ರತಿಭಾವಂತ ವ್ಯಕ್ತಿ ಮುಂದೆ ಹೆಗ್ಗೋಡಿನಲ್ಲಿ 'ನೀನಾಸಮ್' ಸಂಸ್ಥಾಪಿಸಿ, ಅತ್ಯಂತ ಸುಸಜ್ಜಿತ ರಂಗಮಂದಿರವೊಂದನ್ನು ನಿರ್ಮಿಸಿದುದಲ್ಲದೆ ಪ್ರತಿವರ್ಷವೂ ಹತ್ತಾರು ರಂಗಕರ್ಮಿಗಳಿಗೆ ತರಬೇತು ನೀಡುವ ವ್ಯವಸ್ಥೆಯನ್ನೂ ಕಲ್ಪಿಸಿ ಆ ಪುಟ್ಟಗ್ರಾಮವು ಅಂತಾರಾಷ್ಟ್ರೀಯ ಗಮನಕ್ಕೆ ಪಾತ್ರವಾಗುವಂತೆ ಮಾಡಿದುದರಲ್ಲಿ ಆಶ್ಚರ್ಯವೇನಿಲ್ಲ.

ಸುಬ್ಬಣ್ಣನವರು ರಂಗಕ್ಷೇತ್ರದಲ್ಲಿ ಅನೇಕ ಹೊಸ ಹೊಸ ಆಚರಣೆಗಳನ್ನು ಜಾರಿಗೆ ತಂದರು. ತರಬೇತು ಪಡೆಯುವವರೆಲ್ಲರಿಗೂ ಕೇಂದ್ರದಲ್ಲೇ ವಸತಿ ಊಟೋಪಚಾರಗಳ ವ್ಯವಸ್ಥೆ ಮಾಡಿದರು. ತರಬೇತು ಪಡೆಯುವವರೆಲ್ಲ ಬೆಳಿಗ್ಗೆ ೬ ಗಂಟೆಗೇ ತಾಲೀಮಿಗೆ ಸಿದ್ಧರಾಗಬೇಕು. ಯೋಗಾಭ್ಯಾಸ, ಅಂಗಸಾಧನೆ ಅಭ್ಯಾಸಗಳ ನಂತರ, ಉಪಾಹಾರ, ಊಟಗಳಿಗೆ ವಿರಾಮ ಕಾಲ ಬಿಟ್ಟರೆ ರಾತ್ರಿ ೧೦ರವರೆಗೂ ನಿರಂತರವಾಗಿ ರಂಗ ಕಾರ್ಯಕ್ರಮಗಳಲ್ಲಿ ತೊಡಗಿರುತ್ತಾರೆ. ಎಲ್ಲವೂ ಸುವ್ಯವಸ್ಥಿತ, ಅಚ್ಚುಕಟ್ಟು. ಶಿಬಿರದ ವಿದ್ಯಾರ್ಥಿಗಳಿಗೆ ಆಗಾಗ್ಗೆ ಹಿಂದಿನ ಕಮಲಾದೇವಿ ಚಟ್ಟೋಪಾಧ್ಯಾಯ, ಶಿವರಾಮ ಕಾರಂತ, ಬಿ. ವಿ. ಕಾರಂತ ಮೊದಲಾದವರಿಂದ ಹಿಡಿದು ಇಂದಿನ ಅನಂತಮೂರ್ತಿ, ಪ್ರಸನ್ನ, ರೊಡ್ಡಮ್ ನರಸಿಂಹಮ್‌ರವರೆಗೆ ಅನೇಕ ಜ್ಞಾನವಂತರಿಂದ ಉಪನ್ಯಾಸ ಸಲಹಾ ಕೂಟಗಳನ್ನೂ ಏರ್ಪಡಿಸಲಾಗುತ್ತಿತ್ತು.

ಇದರ ಜೊತೆಗೆ ಸುಬ್ಬಣ್ಣನವರು ಇನ್ನೊಂದು ಹೊಸ ಪ್ರಯೋಗವನ್ನೂ ನಡೆಸಿದರು. ನವಕರ್ನಾಟಕ ಪ್ರಕಾಶನವು ಪುಸ್ತಕಗಳನ್ನು ಓದುಗರ ಬಳಿಗೇ ಒಯ್ಯುವಂತೆ, ಪ್ರಾಂತದಾದ್ಯಂತ ಪುಸ್ತಕ ಪ್ರದರ್ಶನಗಳನ್ನು ಏರ್ಪಡಿಸುತ್ತಿರುವಂತೆಯೇ, ಸುಬ್ಬಣ್ಣನವರು 'ತಿರುಗಾಟ' ತಂಡ ಸ್ಥಾಪಿಸಿ ನಾಟಕವನ್ನು ಪ್ರೇಕ್ಷಕರ ಬಳಿಗೇ ಒಯ್ಯುವ ಕಾರ್ಯಕ್ರಮ ರೂಪಿಸಿದರು.

ಸುಬ್ಬಣ್ಣನವರು ಯಾವುದೇ ಪಂಥಕ್ಕೆ ಸೇರದ ಸ್ವತಂತ್ರ ಮನೋಪ್ರವೃತ್ತಿಯ ವ್ಯಕ್ತಿಯಾಗಿದ್ದರು. ವಿದ್ಯಾರ್ಥಿಯಾಗಿದ್ದಾಗಲೇ ಅವರು ಎಸ್. ವಿ. ರಂಗಣ್ಣನವರ ಗೌರವಾರ್ಥ ಸಂಪಾದಿಸಿದ 'ಬಾಗಿನ' ಸಂಭಾವನ ಗ್ರಂಥದಲ್ಲಿ ನನ್ನಿಂದ ರಷ್ಯನ್ ಕವಿ ಮಯಕೋವಸ್ಕಿಯ ಬಗೆಗೆ ಲೇಖನ ಬರೆಯಿಸಿ ಅದರಲ್ಲಿ ಸೇರಿಸಿದುದು ಅವರ ಮುಕ್ತ ಚಿಂತನೆಗೆ ಹಾಗೂ ಯಾವುದೇ ಪೂರ್ವಗ್ರಹ ಪೀಡಿತವಲ್ಲದ ಪ್ರಗತಿಪರ ವಿಚಾರ ಧೋರಣೆಗೆ ಸಾಕ್ಷಿಯಾಗಿದೆ. ಜೊತೆಗೆ ಅವರು ಆ ಕಾಲದಲ್ಲೇ 'ಜನಶಕ್ತಿ' ಪ್ರಕಾಶನಕ್ಕೆ ರಷ್ಯನ್ ಸಾಹಿತಿ ಗೋರ್ಕಿಯವರ ಸಣ್ಣಕಥೆಗಳ ಸಂಗ್ರಹವೊಂದನ್ನು ಅನುವಾದಿಸಿಕೊಟ್ಟಿದ್ದರು. ಈ ಕೃತಿಗೆ 'ಸೋವಿಯತ್ ಲ್ಯಾಂಡ್' ನೆಹರೂ ಪ್ರಶಸ್ತಿ ಕೂಡ ಲಭಿಸಿತು.

ರಷ್ಯದ ಹೆಸರಾಂತ ಚಲಚ್ಚಿತ್ರ ಕಲಾವಿದ ಐಸೆನ್‌ಸ್ಟೈನ್‌ರವರ 'ಬ್ಯಾಟಲ್‌ಷಿಪ್ ಪೊಟೆಮ್ಕಿನ್' ಗ್ರಂಥವನ್ನು 'ಚಲನಚಿತ್ರದ ಮಹಾನೌಕೆ' ಎಂದು ಅನುವಾದಿಸಿ ಪ್ರಕಟಿಸಿದುದಲ್ಲದೆ ಸುಬ್ಬಣ್ಣನವರು ಸ್ಟಾನಿಸ್ಲಾವ್‌ಸ್ಕಿಯವರ ಗ್ರಂಥವೊಂದನ್ನೂ 'ರಂಗದಲ್ಲಿ ಅಂತರಂಗ' ಎಂದು ಅನುವಾದಿಸಿ ಪ್ರಕಟಿಸಿದರು. ಅದೇ ರೀತಿ ಭಾರತದ ಹಿರಿಯ ಕಮ್ಯುನಿಸ್ಟ್

೬೩ನೇ ಪುಟಕ್ಕೆ



ಚಿತ್ರದಲ್ಲಿ (ಎಡದಿಂದ) ಕೆ. ವಿ. ಅಕ್ಷರ, ಲೇಖಕರು, ಸುಬ್ಬಣ್ಣ, ಸಿ. ಆರ್. ಕೃಷ್ಣರಾವ್

**ಕೆ. ಎಲ್. ಗೋಪಾಲಕೃಷ್ಣ ರಾವ್**

ಕುಮಾರವ್ಯಾಸನ 'ಭಾರತ'ದ ಸಭಾಪರ್ವದಲ್ಲಿ ರಾಜಸತ್ತೆಯು ವಿವಿಧ ಆಯಾಮಗಳಲ್ಲಿ ವಿವಿಧ ವೇಷ ಧರಿಸುವುದನ್ನು ಖಚಿತವಾಗಿ ಗ್ರಹಿಸಬಹುದು. ಹೀಗೆ ಗ್ರಹಿಸುವ ಮುನ್ನ ಸಹಜವಾಗಿಯೇ ಹುಟ್ಟುವ ಕುತೂಹಲವೆಂದರೆ, ರಾಜಸತ್ತೆಯ ವಿರುದ್ಧದ ಇನ್ನೊಂದು ಧ್ರುವವಾದ ಸಾಮಾನ್ಯ ಮನುಷ್ಯರು ಇಲ್ಲಿ ಎಲ್ಲಿದ್ದಾರೆ ಎಂಬ ಹುಡುಕಾಟ. ಸಾಮಾನ್ಯ ಜನರ ಬದುಕಿನ ಸಮರ್ಪಕತೆಗೆ ಕಾರಣರಾಗಬೇಕಾದ ರಾಜಸತ್ತೆಯವರಿಗೆ, ಸ್ವಂತ ವೈಭವದಲ್ಲಿ ಮುಳುಗಿರುವ ಸನ್ನಿವೇಶದಲ್ಲಿ ಸಾಮಾನ್ಯರು ಕಾಣಿಸುವುದಿಲ್ಲ. ಹೀಗಾಗಿ ಸಭಾಪರ್ವದಲ್ಲಿ ಸಾಮಾನ್ಯರು ಗೈರುಹಾಜರಾಗಿರುವುದು ಆಶ್ಚರ್ಯವೇನೂ ಅಲ್ಲ.

ಇಂತಹ ರಾಜರನ್ನು ವರ್ಣನೆ ಮಾಡುವ ಕವಿ ಅವರನ್ನು ಅಥವಾ ಅವರ ಕಥೆಯನ್ನು ಯಾವ ನಿಲುವಿನಿಂದ ನೋಡಬಲ್ಲ ಎಂಬುದು ಕುತೂಹಲದ ಸಂಗತಿ. ಕೃಷ್ಣಕಥೆ ಹೇಳ ಹೊರಟ ಕುಮಾರವ್ಯಾಸ 'ಭಾಗವತ'ವನ್ನು ಆಯ್ಕೆ ಮಾಡಿಕೊಳ್ಳದೆ, ಮಹಾಭಾರತದಂತಹ ಜನಪ್ರಿಯ ಕಾವ್ಯವನ್ನೇ ಆಯ್ದುಕೊಳ್ಳುತ್ತಾನೆ. ಇದನ್ನು ಬಿಟ್ಟರೆ ರಾಮಾಯಣ ಬರೆಯಬೇಕು, 'ರಾಮಾಯಣದ ಭಾರ'ದಲ್ಲಿ ಫಣಿರಾಯ ತಿಣುಕುತಿದ್ದಾನೆ ಎನ್ನುತ್ತಾನೆ ಕವಿ. ಸರಿ, ಈ ಆಯ್ಕೆಯ ನಂತರ ಅದನ್ನು ಅವನು ನೋಡುವ ಕ್ರಮ ಎಂತಹದು ಎಂಬುದರ ಮೇಲೆ ಕವಿಯ ನಿಲುವನ್ನೂ ಅರ್ಥೈಸಿಕೊಳ್ಳುವ ಅವಕಾಶವಿದೆ. 'ಸಭಾಪರ್ವ'ವಂತೂ ಇದಕ್ಕೆ ವಿಪುಲ ಅವಕಾಶ ನೀಡುತ್ತದೆ. ಈ ಭಾಗದಲ್ಲಿ ರಾಜರ 'ವರ್ತನೆ'ಗಳು ಢಾಳಾಗಿ ತೋರ್ಪಡುವ ಪ್ರಸಂಗಗಳಿವೆ. ಈ ಪ್ರಸಂಗಗಳಲ್ಲಿ ಕವಿ ಮೈಮರೆತು ರಾಜರ ಬಗೆಗೆ ಹಾಡುತ್ತಾನೆ. ಅಂದರೆ, ಕವಿಯ ಪ್ರಕಾರ ಇವುಗಳನ್ನು ಸ್ವೀಕೃತ ಅಂಶಗಳೆಂದೇ ನಾವು ಭಾವಿಸಬೇಕಾಗುತ್ತದೆ. ಹೀಗೆ ಭಾವಿಸಲು ಇನ್ನೊಂದು ಕಾರಣವೆಂದರೆ, ಮಹಾಭಾರತವನ್ನೇ ಹಾಡುವ ಜನಪದರ ನಿರೂಪಣೆಗೂ ಪಂಡಿತ ಪರಂಪರೆಯ ಕುಮಾರವ್ಯಾಸನಂಥವರಿಗೂ ಕಂಡುಬರುವ ವ್ಯತ್ಯಾಸ. ಕುಮಾರವ್ಯಾಸನಿಗೆ ಯಾವುದು ಮುಖ್ಯವೆಂದು ಕಾಣುತ್ತದೋ ಅದು ಜನಪದರಿಗೆ ಅಮುಖ್ಯವಾಗುತ್ತದೆ. ಮಾತ್ರವಲ್ಲ ಜನಪದರು 'ಜೀವಪರ' ನಿಲುವಿನವರಾದರೆ ಪಂಡಿತ ಪರಂಪರೆಯವರು 'ಯುದ್ಧಪರ' ನಿಲುವಿನವರಾಗಿ ಕಾಣುತ್ತಾರೆ. ಹೀಗಾಗಿ ರಾಜರ ವೈಭವಗಳನ್ನು ಹಾಡುತ್ತಾ ಮೈಮರೆಯುತ್ತಾರೆ. ಜನಪದ ಭಾರತ ಮತ್ತು ಕುಮಾರವ್ಯಾಸ ಭಾರತದ ಹೋಲಿಕೆಯಲ್ಲಿ ಮುಂದೆ ಇದನ್ನು ಗಮನಿಸಲಾಗುವುದು.

ಅತ್ಯಂತ ವಿರಳವಾಗಿ ಬರುವ ಜನಸಾಮಾನ್ಯರ ಉಲ್ಲೇಖಗಳಲ್ಲಿ ಕುಮಾರವ್ಯಾಸ ಭಾರತದ ಆರಂಭದ (ಪೀಠಿಕಾ ಭಾಗದಲ್ಲಿ) ಮಂಗಳಗೀತೆಯಲ್ಲಿನ ಉಲ್ಲೇಖವು ಒಂದು. ''ವೀರನಾರಾಯಣನೆ ಕವಿ ಲಿಪಿ/ಕಾರ ಕುಮಾರವ್ಯಾಸ ಕೇಳುವ/ಸೂರಿಗಳು ಸನಕಾದಿಗಳು/ಜಂಗಮ ಜನಾರ್ದನರು'' ಎಂಬುದು ಆ ಉಲ್ಲೇಖ. ಇಲ್ಲಿ ಗಮನಿಸಬೇಕಾದದ್ದೇನೆಂದರೆ, ಈ ಜಂಗಮ ಜನಾರ್ದನರ ಕೆಲಸ – ಓದುತ್ತಿರುವ (ಹಾಡುತ್ತಿರುವ) ಕಾವ್ಯವನ್ನು ಅವರು ಕೇಳಬೇಕು. ಹೀಗೆ ಅವರು ಕೇಳಿದರೆ, ಅವರಿಗೆ :

ವೇದ ಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನ ಫಲ ಕೃ
ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮಯಾಗ ಫಲ
ಮೇದಿನಿಯನೊಲಿದಿತ್ತ ಫಲ ವ
ಸ್ತ್ರಾದಿ ಕನ್ಯಾದಾನ ಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ (೧:೨೦ ಸಂ : ಪ್ರಸನ್ನ ; ೨೦೦೧)

ಈ ಫಲಗಳನ್ನು ಪಡೆಯುವುದಕ್ಕೆ ಮಾಡಬೇಕಾಗಿರುವ ವೇದಪಾರಾಯಣ ಇತ್ಯಾದಿಗಳನ್ನು ಮಾಡುವ ಅವಕಾಶವಾಗಲೀ/ಸಾಧ್ಯತೆ/ಶಕ್ತಿಗಳಾಗಲೀ ಇಲ್ಲದ ಜನ ಕುಮಾರವ್ಯಾಸನ ಭಾರತದ ಒಂದು ಅಕ್ಷರ ಕೇಳಿದರೆ ಸಾಕು – ಅವುಗಳನ್ನೆಲ್ಲಾ ಪಡೆದುಕೊಂಡುಬಿಡುತ್ತಾರೆ. ಅಂದರೆ, ಕವಿ ಪರೋಕ್ಷವಾಗಿ ಸ್ಥಾಪಿತ ಸಾಮಾಜಿಕ ವ್ಯವಸ್ಥೆಯನ್ನೇ ಇನ್ನೊಂದು ರೀತಿಯಲ್ಲಿ ಗಟ್ಟಿಗೊಳಿಸುತ್ತಿದ್ದಾನೆ. ಇವರುಗಳು ಅದಕ್ಕಾಗಿ ಯಾವ ಪ್ರಯತ್ನವನ್ನಾಗಲೀ, ಹೋರಾಟವನ್ನಾಗಲೀ ಮಾಡುವುದು ಬೇಕಾಗಿಲ್ಲ. ಕುಮಾರವ್ಯಾಸ ಹೀಗೇಕೆ ಮಾಡುತ್ತಿದ್ದಾನೆ? ಬಹುಶಃ ಇದರ ಅರಿವು ಆತನಿಗೂ ಇರುವಂತಿಲ್ಲ. ಆತ ತಾನು ಜನೋಪಕಾರವನ್ನೇ ಮಾಡುತ್ತಿದ್ದೇನೆ ಎಂಬ ಭಾವನೆಯಿಂದಲೇ ಹಾಗೆ ಹಾಡುತ್ತಿದ್ದಾನೆ. ಯಾಕೆಂದರೆ, ಸ್ವತಃ ಕುಮಾರವ್ಯಾಸನು ಈ ವ್ಯವಸ್ಥೆಯನ್ನು ತನ್ನರಿವಿಗೇ ಬಾರದಂತೆ ಸಮ್ಮತಿಸುವ ಜನಸಮೂಹದ ಪ್ರತಿನಿಧಿಯಾಗಿದ್ದಾನೆ. ಪ್ರಭುತ್ವ ಅಥವಾ ರಾಜಸತ್ತೆಯು ಸಾಹಿತ್ಯವನ್ನೂ ಕೂಡ ತನ್ನ ಅಧಿಕಾರಕ್ಕೆ ಜನ ಸಮ್ಮತಿಯನ್ನು ಗಳಿಸಿಕೊಳ್ಳುವ ಸಾಧನವನ್ನಾಗಿ ಬಳಸಿಕೊಳ್ಳುತ್ತಿರುತ್ತದೆ.

ಕುಮಾರವ್ಯಾಸನು ರಾಜಾಶ್ರಯದಲ್ಲಿ ಇದ್ದವನಲ್ಲವಾದರೂ, ಆತ ಕೃಷ್ಣನನ್ನೇ ಕಥಾನಾಯಕನನ್ನಾಗಿ ಆರಿಸಿಕೊಂಡಿದ್ದರೂ ಕುಮಾರವ್ಯಾಸನಲ್ಲೂ ಈ ಛಾಯೆ ಕಾಣಿಸಿಕೊಳ್ಳುತ್ತದೆ. ಏಕೆಂದರೆ, ಭಕ್ತಿಯೇ, ಕೃಷ್ಣಪಾರಮ್ಯವನ್ನು ಹಾಡುವುದೇ ಅವನಿಗೆ ಮುಖ್ಯವಾಗಿದ್ದರೂ – ಕೃಷ್ಣಭಕ್ತರಾದ ಪಾಂಡವರು ರಾಜಸತ್ತೆಯ ಪ್ರತಿನಿಧಿಗಳೇ ಆಗಿದ್ದಾರೆ. ಕೃಷ್ಣ ಬೆಂಬಲಿತ ಪಾಂಡವರು ರಾಜಸತ್ತೆಯ ಅಗತ್ಯಕ್ಕಾಗಿ ಮಾಡುವ ಯಾವ ಕಾರ್ಯಗಳೂ ಕುಮಾರವ್ಯಾಸನಿಂದ ಪ್ರಶ್ನಿಸಲ್ಪಡುವುದಿಲ್ಲ. (ಇದಕ್ಕೆ ಲೋಕಹಿತಾರ್ಥಾಯ ಎಂಬ ಸುಂದರ ಆವರಣವಿದೆ. ಪ್ರಶ್ನಿಸಬೇಕೆಂದು ಆತನಿಗೆ ಅನ್ನಿಸದೇ ಇರುವುದು ಬಹಳ ಸಹಜವೂ ಆಗಿದೆ. ಇಷ್ಟಾಗಿಯೂ ಕುಮಾರವ್ಯಾಸನಿಗೆ ಈ ರಾಜರುಗಳ ಬಗೆಗಿರುವ ನೈರಾಶ್ಯಭಾವ ಗದಾಪರ್ವದಲ್ಲಿ ಪ್ರಕಟವಾಗುತ್ತದೆ. ಪಾಂಡವರು ಗೆದ್ದ ನಂತರ ಅರಮನೆ

# ಸಭಾಪರ್ವವೆಂಬ ಕಿಟಕಿಯೊಳಗಿಂದ ಕಂಡ ರಾಜಸತ್ತೆ



ಪ್ರವೇಶ ಮಾಡುವ ಸಂದರ್ಭದಲ್ಲಿ ಇದು ವ್ಯಕ್ತವಾಗಿದೆ.

ಆ ಸುಯೋಧನನರಮನೆಯನವ
ನೀಶ ಹೊಕ್ಕನು ಪವನಸುತ ದು
ಶ್ಯಾಸನನ ಸದನವನು ಪಾರ್ಥಗೆ... (೧೩ : ೧೧)
......................................
ಮುನ್ನಿನವರೇ ಮಂತ್ರಿ ಸಚಿವರು
ಮುನ್ನದಾವಂಗಾವ ಪರುಠವ
ಭಿನ್ನವಿಲ್ಲದೆ ಪೌರಜನವೆಸೆದಿರ್ದುದಿಭಪುರಿಯ
(೧೩ : ೧೨)

ಇದು ರಾಜ ಬದಲಾದರೂ ವ್ಯವಸ್ಥೆ ಬದಲಾಗದೇ ಇರುವುದರ ಸಮರ್ಥ ಅಭಿವ್ಯಕ್ತಿಯಾಗಿದೆ. ಬಹುಶಃ ಪಾಂಡವರು ಜನಸಾಮಾನ್ಯರಿಗೆ ಕ್ಷೇಮ ತರಬಲ್ಲ ರಾಜರಾಗುತ್ತಾರೆ ಎಂಬುದು ಆತನ ಊಹೆಯೋ ಅಭಿಲಾಷೆಯೋ ಆಗಿರಬಹುದು. ಹೀಗಾಗಿ ಆತ ಮೂಲ ಭಾರತದಲ್ಲಿರುವ ''ಅರಸು ರಾಕ್ಷಸ ಮಂತ್ರಿಯೆಂಬುವ/ ಮೊರೆವ ಹುಲಿ ಪರಿವಾರ ಹದ್ದಿನ/ನೆರವಿ ಬಡವರ ಬಿನ್ನಪವನಿನ್ನಾರು ಕೇಳುವರು'' ಎಂಬ ಪದ್ಯವನ್ನು ಹಾಗೆಯೇ ಮರು ಸೃಷ್ಟಿ ಮಾಡುತ್ತಾನೆ. ಇಷ್ಟಾಗಿಯೂ ಪಾಂಡವರ ಶೌರ್ಯವನ್ನು ಹಾಡುವುದೇ ಅವನಿಗೆ ಹೆಚ್ಚು ಪ್ರಿಯವಾದಂತಿದೆ. ಅದರಲ್ಲೂ ಸಭಾಪರ್ವದಲ್ಲಿ ಇದು ಇನ್ನಷ್ಟು ಪ್ರಖರವಾಗಿ ಕಂಡುಬರುತ್ತದೆ.

ಕಾವ್ಯರಚನೆಯ ಬಗೆಗೆ ಕುಮಾರವ್ಯಾಸನಿಗೆ ನಿರ್ದಿಷ್ಟ ಉದ್ದೇಶವಿದ್ದು ಆತ ಅದನ್ನು 'ಅರಸುಗಳಿಗಿದು ವೀರ...' ಎಂಬ ಪದ್ಯದಲ್ಲಿ ಹೇಳಿಕೊಂಡಿದ್ದಾನೆ. ಇಲ್ಲಿನ ಈ ಸಾಲು, ರಾಜಸತ್ತೆಯನ್ನು ವೀರತ್ವದ ಜೊತೆಗೆ ಸಮೀಕರಿಸುವ ಮಾತಾಗಿದೆ. ಆದ್ದರಿಂದ ಪಾಂಡವರು ಕೈಗೊಳ್ಳುವ ಎಲ್ಲಾ ಕಾರ್ಯವೂ ವೀರಕಾರ್ಯಗಳ ದ್ಯೋತಕವಾಗಿಯೇ ಉದ್ದಕ್ಕೂ ಪ್ರತಿಫಲಿತವಾಗಿವೆ. ಹೀಗಾಗಿ ಖಾಂಡವವನ ದಹನ, ರಾಜಸೂಯಯಾಗ, ದ್ಯೂತಪ್ರಸಂಗಗಳೆಲ್ಲವೂ ಕ್ಷತ್ರಿಯರ ಶೌರ್ಯಪ್ರದರ್ಶನದ ಅಖಾಡಾಗಳಾಗುತ್ತವೆ. ಸಭಾಪರ್ವ ಆರಂಭವಾಗುವುದೇ ಖಾಂಡವವನವನ್ನು ದಹಿಸಿ ಬಂದ ಅರ್ಜುನನ ವಿಜಯದ ಪರಿತೋಷದ ಆಚರಣೆಯಲ್ಲಿ:

ತಳಿತ ಗುಡಿಗಳ ಸಾಲ ಕಲಶದ
ನಿಳಯ ನಿಳಯದ ಬೀದಿ ಬೀದಿಯ
ತಳಿರ ತೋರಣದೋರಣದ ನವ ಮಕರ ತೋರಣದ
ತಳಿಗೆದಂಬುಲದಾರತಿಯ ಮಾಂ
ಗಲಿತ ರಭಸದ ತಳಿವ ಲಾಜಾ
ವಳಿಗಳೊಸಗೆಯಲಿವರು ಹೊಕ್ಕರು ರಾಜಮಂದಿರವ
(೨ : ೩)

(ಇಲ್ಲಿಂದ ನಂತರದ ಉಲ್ಲೇಖಗಳು ಸಂ : ತ. ಸು. ಶಾಮರಾಯರ ಸಭಾಪರ್ವ ಸಂಗ್ರಹದಿಂದ)

ಇದು ಅರ್ಜುನನಿಗೆ ಪ್ರಜೆಗಳಿಂದ ಸಿಕ್ಕಿದ ಸ್ವಾಗತವನ್ನು ಹೇಳುವಂಥದ್ದು. ಪ್ರಜೆಗಳು ರಾಜನ ವಿಜಯವನ್ನು ಸಂಭ್ರಮಿಸುತ್ತಿದ್ದಾರೆ. ರಾಜನ ಸಂತೋಷವೇ ತಮ್ಮ ಸಂತೋಷ ಎಂಬ ನಂಬಿಕೆಯನ್ನು ಅವರಲ್ಲಿ ತುಂಬಿ ಒಂದು ಭ್ರಾಮಕ ವಿಜಯದ ಕಲ್ಪನೆಯನ್ನು ಅವರಿಗೆ ಉಣಿಸಲಾಗಿದೆ. ಹೀಗಾಗಿ ತಮಗೆ ಇದರಿಂದ ನೇರವಾದ ಪ್ರಯೋಜನಗಳಿಲ್ಲದಿದ್ದಾಗ್ಯೂ ಅವರು ಸಂತಸಪಡುತ್ತಾರೆ. ಆ ವಿಜಯದ ಯುದ್ಧದಲ್ಲಿ ಒಂದು ವೇಳೆ ಅವರ ಸಂಬಂಧಿ ಸತ್ತಿದ್ದರೆ 'ವೀರಸ್ವರ್ಗ' ಸೇರಿದ ಭಾವುಕತೆಗೆ, ಒಂದು ಸಾರ್ಥಕ ಕೆಲಸ ಮಾಡಿದ ಹುಸಿ ನೆಮ್ಮದಿಗೆ ಅವರು ಒಳಗಾಗುತ್ತಾರೆ. ಇದು ರಾಜಸತ್ತೆಯು ತನ್ನ ಭದ್ರತೆಗೆ ಮಾಡಿಕೊಂಡಿರುವ ಒಂದು ತಂತ್ರ ಎಂಬ ಅರಿವು ಅವರಿಗಿರುವುದಿಲ್ಲ.

ಈ ಕಾರಣದಿಂದಾಗಿಯೇ ಖಾಂಡವವನ ದಹನದ ಸಂದರ್ಭದಲ್ಲಿ ಆಹುತಿಯಾದ ನಿಷ್ಪಾಪಿ ಪ್ರಾಣಿ ಸಮೂಹಕ್ಕಾಗಲೀ, ಸಸ್ಯ ಸಮೂಹಕ್ಕಾಗಲೀ, ಒಂದು ವೇಳೆ ಅಲ್ಲಿ ವಾಸಿಸುತ್ತಿರಬಹುದಾದ ಬುಡಕಟ್ಟು ಜನರ ಬಗೆಗಾಗಲೀ ಯಾರ ಕನಿಕರವೂ ದೊರೆಯುವುದಿಲ್ಲ. ಯಾಕೆಂದರೆ, ಹಸ್ತಿನಾವತಿಯ ನಾಗರಿಕ ಜನರಿಗೆ, ರಾಜಸತ್ತೆಗೆ ಅದೊಂದು ಅನಾಗರಿಕ ಪ್ರಪಂಚವಾಗಿ ಗೋಚರಿಸುತ್ತಿರುತ್ತದೆ. ಆ ಅನಾಗರಿಕರು (?) ಹೋರಾಡುವ ಬದಲು ಶರಣಾಗಿದ್ದರೆ – ಅರ್ಜುನ ಅವರಿಗೆ ನಾಗರಿಕ ಥಳುಕಿನ ಬದುಕಿನಲ್ಲಿ ಎಲ್ಲೋ ಒಂದೆಡೆ ಜಾಗ ಕಲ್ಪಿಸುತ್ತಿದ್ದ – ಅದು ಜೂ ಆಗಿರಬಹುದು, ಉದ್ಯಾನವನ ಆಗಿರಬಹುದು, ತೊತ್ತುಗಳ ರೂಪದ್ದೇ ಆಗಿರಬಹುದು.

ಹೀಗೆ ದಾಳಿಮಾಡಿ ಪಡೆದ ಸಂಪತ್ತಿನಿಂದ ಪಾಂಡವರು ತಮಗಾಗಿ ಒಂದು ಅದ್ಭುತ ಸೌಧವನ್ನು ನಿರ್ಮಿಸಿದರು. ಹೀಗೆ ಸಂತೋಷಗೊಂಡಿರುವಾಗ ಅವರಿಗೊಂದು ವಿಪತ್ತು ವಿಷಯ ನಾರದನಿಂದ ಬರುತ್ತದೆ. ಪ್ರಭುತ್ವದ ಈ ವೈಭೋಗದ ಜೊತೆಗೆ ಎಲ್ಲೋ ಒಂದು ಜಾಗವನ್ನು ಪುರೋಹಿತಶಾಹಿ ಗಿಟ್ಟಿಸಿಕೊಳ್ಳುತ್ತದೆ. ಇಲ್ಲಿ ಅದು ರಾಜಸೂಯ ಯಾಗದ ರೂಪದಲ್ಲಿ ಬರುತ್ತದೆ. ಇಲ್ಲೇನೋ ಪಾಂಡವರು ಸುಖವಾಗಿದ್ದಾರೆ. ಆದರೆ, ಸ್ವರ್ಗದಲ್ಲಿ ಪಾಂಡುವಿಗೆ ಇಂದ್ರನ ಸಮಾನಸ್ಥಾನ ಸಿಗದೆ ಖಿನ್ನವಾಗಿದ್ದಾನೆ ಎಂದು ಹೇಳುವುದರ ಮೂಲಕ ನಾರದ ಅವರ ಸುಖದ ಬೆಲೂನನ್ನು ಮುಳ್ಳಿನಿಂದ ಚುಚ್ಚುತ್ತಾನೆ.

> **ರಾಜಸತ್ತೆ ಎಂಬುದು ಪ್ರಭುತ್ವದ ವ್ಯಕ್ತರೂಪ. ರಾಜಸತ್ತೆಯು ಪ್ರಭುತ್ವವನ್ನು ಉಳಿಸಿಕೊಳ್ಳಲು ಸದಾ ಎರಡು ವಿಷಯಗಳಲ್ಲಿ ಮಗ್ನವಾಗಿರುತ್ತದೆ. ಒಂದು ಇಡೀ ಸಂಸ್ಥಾನದ ಮೇಲೆ ಪ್ರಭುತ್ವದ ಹಿಡಿತವನ್ನು ಕಾಪಾಡಿಕೊಳ್ಳುವುದು, ಇನ್ನೊಂದು ಶತ್ರುರಾಜರ ಮೇಲೆ ವಿಕ್ರಮ ಸಾಧಿಸುವುದು. ರಾಜಸತ್ತೆಯು ಇಂದು ಸಂವಿಧಾನಾತ್ಮಕ ಸ್ವರೂಪವನ್ನು ಪಡೆದುಕೊಂಡಿದ್ದರೂ ಇಂದೂ ಈ ಎರಡು ವಿಷಯಗಳೇ ಆದ್ಯತೆಗಳಾಗಿ ಉಳಿದಿವೆ.**

ಸ್ವರ್ಗದಲ್ಲಿರುವ ಪಾಂಡುವಿನ ಸುಖಕ್ಕಾಗಿ ಭೂಮಿಯಲ್ಲಿ ಯುದ್ಧವಾಗಬೇಕಾಗುತ್ತದೆ. ಮತ್ತೆ ಇವರು ದೇಶದ ನಾಲ್ಕೂ ದಿಕ್ಕುಗಳಿಗೆ ದಿಗ್ವಿಜಯಕ್ಕೆ ಹೋಗುತ್ತಾರೆ. ಆಗ ಧರ್ಮರಾಯನಿಗೆ ಕೃಷ್ಣ ನೀಡುವ ಅಭಯ ಹೀಗಿದೆ :

ಎಮಗೆ ಭೀಮಾರ್ಜುನರ ಕೊಡು ರಿಪು
ರಮಣಿಯರ ಸೀಮಂತ ಮಣಿಗಳ
ನಿಮಿಷದಲಿ ತರಿಸುವೆನು ಹರಿಸುವೆನಹಿತ ಭೂಮಿಪರ
(೨ : ೫೦)

ಶತ್ರುಗಳ ಮಡದಿಯರನ್ನು ವಿಧವೆಯರನ್ನಾಗಿಸುವ ಈ ಮಾತು ನಿರ್ಭಾವುಕವಾಗಿ, ಶೌರ್ಯದ ಪ್ರತೀಕವಾಗಿ ಬರುವುದೇ ರಾಜಸತ್ತೆಯ ಕ್ರೌರ್ಯವನ್ನು ಹೇಳುವಂಥದಾಗಿದೆ. ಇದು ಹೆಂಗಳೆಯರ ವಿಷಯದಲ್ಲಿ ಮಾತ್ರವಲ್ಲ, ನಿರ್ಬಲರ, ಬುಡಕಟ್ಟು ಜನರ ವಿಷಯದಲ್ಲೂ ವ್ಯಕ್ತವಾಗುತ್ತದೆ.

ಜೇನಕರ ಬೇಟರ ಕಿರಾತರ
ನೂನ ಬಲಸಹಿತಾ ಮಹೀಪತಿ
ಸೂನು ಕಾದಿದನೀತನಲಿ ಭಗದತ್ತನೆಂಬವನು
(೪: ೧೩)

ಒಡೆಯರವದಿರ ವಂಗಡವ ಹುಡಿ
ಹುಡಿಯ ಮಾಡಿ ನಿಷಾದ ವರ್ಗವ
ಕೆಡಹಿ ನಿಷಧನ ಹೊಯ್ದು ಸೆಳೆದನು ಸಕಲ ವಸ್ತುಗಳ
(೪ : ೨೧)

ಸೆಱೆವಿಡಿದು ತನಿಸೂಱೆಯಲಿ ಪಡೆ
ನೆಱೆದಣಿಯಲಾ ಮ್ಲೇಚ್ಛವರ್ಗವ
ತಱಿದು ಶೋಧಿಸಿ ತೆಗೆದನಗ್ಗದ ವಸ್ತು ಸಂತತಿಯ
(೪ : ೨೩)

ಗಿರಿಚರರ ವನಚರರ ಬಿಂಕವ
ನೊರಸಿ ಕಿಷ್ಕಿಂಧಾದ್ರಿಯಲಿ ಸಂ
ಚರಿಸಿ ಬಿಟ್ಟುದು ಕಟಕ ಬಹುವಿಧ ವಾದ್ಯ ರಭಸದಲಿ
(೪ : ೨೬)

ಈ ಎಲ್ಲಾ ವರ್ಣನೆಗಳೂ ಪಾಂಡವರ ಶೌರ್ಯ ವರ್ಣನೆಗಳಾಗಿ ಕಾವ್ಯದಲ್ಲಿ ಭೋರ್ಗರೆಯುತ್ತವೆ. ಹೀಗೆ ಕೈಗೆ ಸಿಕ್ಕವರನ್ನೆಲ್ಲಾ ಕಪ್ಪ ನೀಡದಿದ್ದಲ್ಲಿ ಮಣಿಸಿ ಸಂಪತ್ತನ್ನು ದೋಚುತ್ತಾರೆ.

ಅಲ್ಲಿಗಲ್ಲಿಗೆ ನಡೆದು ಸೋದಿಸಿ
ಕೆಲ್ಲೆ ಕುಹರದ ಕೋಣೆ ಬಾಗುಗ
ಳೆಲ್ಲವನು ಹೊಕ್ಕರಿಸಿ ತೆರಳಿಚಿದನು ಮಹಾಧನವ
(೪ : ೧೫)

ಸೂಱೆಗೊಂಡಲ್ಲಿಂದ ನಡೆದನು
ಮೀಱೆ ಗಂಗಾಸಾಗರಕೆ ಕೈ
ಮೀಱಿಲಱಿಯದೆ ಸಂಧಿಗವನೀಶ್ವರರು ವಶವಾಯ್ತು
ಹೇಱಿಸಿದನನುಪಮದ ವಸ್ತುವ
ನಾಱುಸಾವಿರ ಬಂಡಿಯಲಿ ನಡೆ
ದೇಱೆ ಹೊಯ್ದನು ವಾಸುದೇವನ ಪೌಂಡ್ರಕಾಹ್ವಯನ
(೪ : ೨೨)

ಹೀಗೆ ದೋಚುವ ಸಂಪತ್ತಿನಿಂದ ರಾಜಸೂಯ ಯಾಗವನ್ನು ವೈಭವದಿಂದ ಮಾಡುವ [illegible]

# ಪಿ. ಕೆ. ವಾಸುದೇವನ್ ನಾಯರ್

**(೧೯೨೬-೨೦೦೫)**



ಭಾರತ ಕಮ್ಯುನಿಸ್ಟ್ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿ ಐದು ದಶಕಗಳ ಕಾಲ ದುಡಿದವರು. ಕೆಲಕಾಲ ಕೇರಳದ ಮುಖ್ಯಮಂತ್ರಿಗಳಾಗಿದ್ದರು. ಎಡಪಕ್ಷಗಳ ಐಕ್ಯತೆಗಾಗಿ ತಮ್ಮ ಮುಖ್ಯಮಂತ್ರಿ ಪದವಿಯನ್ನು ತ್ಯಾಗಮಾಡಿದರು. ಕಳೆದ ಚುನಾವಣೆಯಲ್ಲಿ ಲೋಕಸಭಾ ಸದಸ್ಯರಾಗಿ ಕೇರಳದಿಂದ ಚುನಾಯಿತರಾಗಿದ್ದರು. ಹಲವಾರು ಜನಪರ ಹೋರಾಟಗಳಲ್ಲಿ ಭಾಗವಹಿಸಿದ್ದರು. ೨೦೦೩ರಲ್ಲಿ 'ಹೊಸತು'ಗೆ ನೀಡಿದ್ದ ಸಂದರ್ಶನದಲ್ಲಿ ಹಲವಾರು ಪ್ರಚಲಿತ ವಿಷಯಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡಿದ್ದರು. ೧೨.೭.೨೦೦೫ರಂದು ನಿಧನರಾದ ಇವರ ನೆನಪಿಗೆ 'ಹೊಸತು' ಶ್ರದ್ಧಾಂಜಲಿ ಅರ್ಪಿಸುತ್ತದೆ.

ಕಾವ್ಯವಾದುದಕ್ಕೆ ವಿಸ್ತೃತವಾಗಿ ಬರುತ್ತದೆ. ರಾಜಸತ್ತೆಯ ಕ್ಷೇಮಕ್ಕಾಗಿ ನಡೆಯುವ ಈ ದಾಳಿಗೆ ಶ್ರೀಕೃಷ್ಣನ ಅಭಯವಿದೆ. ಇದು ರಾಜಸತ್ತೆಯ ಒಳಿತಿಗಾಗಿ ನಡೆಯುವ ಕೆಲಸಕ್ಕೆ ಸಾಮಾನ್ಯರಿಂದ ಯಾವುದೇ ರೀತಿಯ ಪ್ರತಿಭಟನೆ/ಮಾರ್ನುಡಿ ಬರದಂತೆ ವ್ಯವಸ್ಥೆಯನ್ನು ಸ್ಥಾಪಿಸುವ ಒಂದು ತಂತ್ರವಾಗುತ್ತದೆ. ಧಾರ್ಮಿಕ ಕಾವ್ಯಗಳು ಧರ್ಮ ಪ್ರಚಾರದ ಜೊತೆಗೇ ಪ್ರಭುತ್ವಕ್ಕೂ ನೆರವಾಗುವ ಅಲಿಖಿತ ಶಾಸನಗಳಾಗುವುದು ಹೀಗೆ. ಇದಲ್ಲದೆ, ಇದರಲ್ಲಿ ಬರುವ ಜರಾಸಂಧ ಮತ್ತು ಶಿಶುಪಾಲ ವಧೆಗಳು ಈ ನೀತಿಗೆ ನೀರೆರೆಯಲು ಪೂರಕವಾಗುತ್ತವೆ. ಉಳಿದುದು ಹಿನ್ನೆಲೆಗೆ ಸರಿದು ಈ ಕ್ರೂರ ರಾಜರ ಹತ್ಯೆ ಮುನ್ನೆಲೆಗೆ ಬಂದು ಜನರ ಮೆಚ್ಚುಗೆ ಗಳಿಸುವಲ್ಲಿ ಸಫಲವಾಗುತ್ತದೆ.

- ೨ -

ರಾಜಸತ್ತೆಯ ಅಧಿಕಾರದ ಅಹಂಕಾರದ ಛಾಪು 'ಸಭಾಪರ್ವ'ದಲ್ಲಿ ಮತ್ತೆ ಕಾಣಿಸಿಕೊಳ್ಳುವುದು ದ್ಯೂತ ಪ್ರಸಂಗದಲ್ಲಿ. ದ್ಯೂತ, ಬೇಟೆ ಇತ್ಯಾದಿಗಳು ಸಮಗೆ ವ್ಯಸನವಾಗಿ ಕಂಡರೂ ರಾಜರಿಗೆ ಇದು ಅವರ ಶೌರ್ಯದ ರಾಜಚಿಹ್ನೆಗಳು. ಇದು ವ್ಯಸನವೇ ಆದರೂ ವ್ಯಸನವಲ್ಲ ಎಂದು ಸ್ಥಾಪಿಸುವಲ್ಲಿ ಈ ರಾಜಸತ್ತೆಗಳು ಸಫಲವಾದುದರ ಫಲವೇ ದ್ಯೂತಪ್ರಸಂಗ.

*ಅರಸ ಕೇಳ್ಕಾಳಗಕೆ ಜೂಜಿಗೆ*
*ಕರೆದರೋಸರಿಸಿದರೆ ಬಳಿಕವ*
*ಗರುವನೇ ಕ್ಷತ್ರಿಯರೊಳಗೆ ಸ್ವಪಧರ್ಮ ನೀನರಿಯ* (೮ : ೨೦)

ಎನ್ನುತ್ತಾನೆ ಶಕುನಿ. ಹೀಗಿದ್ದೂ ಧರ್ಮರಾಯ ನಿರಾಕರಿಸಬಹುದಿತ್ತು. ಆದರೆ ನಿರಾಕರಿಸುವುದಿಲ್ಲ. ಅದಕ್ಕೆ ಗುರುತರ ಕಾರಣ ಅವನ ವ್ಯಸನವೇ ಹೊರತು ಕ್ಷಾತ್ರವಲ್ಲ. ಜೂಜಿಗೆ ಕ್ಷಾತ್ರದ ರಕ್ಷಾಕವಚವಿರುವುದರಿಂದಲೇ ಧರ್ಮರಾಯನ ತಪ್ಪುಗಳಿಗೆ 'ಅಸಹಾಯಕ'ನೆಂಬ ಕರುಣೆ ದಕ್ಕಿಬಿಡುತ್ತದೆ. 'ಅಯ್ಯೋ ಪಾಪ' ಎಂದು ಜನರು, ರಾಜನಿಗಾಗಿ ಮರುಗುತ್ತಾ ತಮ್ಮ ನೋವುಗಳನ್ನೇ ಮರೆತುಬಿಡುತ್ತಾರೆ.

ಪ್ರಭುತ್ವ (ರಾಜಸತ್ತೆ) ಪುರುಷ ರೂಪದಲ್ಲಿದ್ದರೆ, ಆಗ ಸ್ತ್ರೀ ಶೋಷಿತ ಕೆಳಸ್ತರದವಳಾಗುತ್ತಾಳೆ. ಈ ಮಾತನ್ನು ಇಲ್ಲಿ ಹೇಳುತ್ತಿರುವುದಕ್ಕೆ ಕಾರಣ, ರಾಜನ ಮಡದಿಯು ರಾಣಿಯೇ ಆದರೂ ಅವಳು ರಾಜನ ಅಧೀನ. ಧ್ವನಿ ಇಲ್ಲದವಳಾದಾಗ ಪ್ರಭುವಾದ ರಾಜನ ಪುರುಷಾಹಂಕಾರಕ್ಕೆ ಆಕೆ ಬಲಿಯಾಗುತ್ತಾಳೆ. ಆಗ ಅವಳಿಗೂ ತೊತ್ತಿಗೂ ಯಾವ ವ್ಯತ್ಯಾಸವೂ ಇರುವುದಿಲ್ಲ ಎಂಬುದು ದ್ರೌಪದಿ ಪ್ರಸಂಗದಲ್ಲಿ ಕಂಡುಬರುತ್ತದೆ.

ಧರ್ಮರಾಯನು ಜೂಜಿಗೆ, ಮೊದಲು ಭಂಡಾರವನ್ನು ಒತ್ತೆಯಾಗಿ ಇಡುತ್ತಾನೆ. (ಈ ಭಂಡಾರ ತುಂಬಿ ಹರಿದದ್ದು ರಾಜಸೂಯದ ದಿಗ್ವಿಜಯದಿಂದ). ಭಂಡಾರವನ್ನು ಕಳೆದುಕೊಂಡ ತಕ್ಷಣವೇ ಆತ ಒಡ್ಡುವುದು ಆತನ ನಾರಿಯರ ವಿವಿಧ ಆಭರಣಗಳನ್ನು. ಈ ನಾರಿಯರನ್ನು ಕೇಳದೇ ಒತ್ತೆ ಒಡ್ಡುವುದಕ್ಕೆ ಅವನಿಗೆ ಪ್ರಶ್ನಾತೀತ ಅಧಿಕಾರವಿದೆ ಎಂಬುದು ಗ್ರಹೀತ. ಅನಂತರ ತಮ್ಮಂದಿರ ಆಭರಣಗಳನ್ನೂ ಮುಂದೆ ತನ್ನನ್ನೂ, ಅನಂತರದಲ್ಲಿ ಒಬ್ಬರಾದ ಮೇಲೆ ಒಬ್ಬರು (ನಕುಲನಿಂದ ಆರಂಭಿಸಿ) ತಮ್ಮಂದಿರನ್ನೂ, ಕೊನೆಯಲ್ಲಿ ದ್ರೌಪದಿಯನ್ನೂ ಒತ್ತೆ ಇಡುತ್ತಾನೆ.

ದ್ರೌಪದಿಗೆ ಆಗುವ ಅವಮಾನಗಳ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆಗಳಾಗಿವೆ. 'ಪಾಂಡು ಪುತ್ರರ ಮಡದಿ ತೊತ್ತಹಳೆ ಶಿವಾಯೆಂದಳಲಿದನು' ವಿದುರ ಎಂಬಾಗ ಇತರ ತೊತ್ತುಗಳ ಬಗೆಗೆ ಯಾರಿಗೂ ಚಿಂತೆ ಇಲ್ಲವಾದರೂ, ಪಾಂಡುಪುತ್ರರ ಮಡದಿ 'ತೊತ್ತಾ'ಗುವ ಬಗೆಗೆ ಖೇದವಿದೆ. ಜೊತೆಗೆ ಈಕೆ 'ಪತಿವ್ರತಾ ಶಿರೋಮಣಿ' (೯:೮). ಈ ಬಗೆಗೆ ದುಃಖವಿದ್ದರೂ ಯಾರೂ ಇದನ್ನು ತಡೆಯುವ ಪ್ರಯತ್ನವನ್ನೂ ಮಾಡುವುದಿಲ್ಲ – ವಿಕರ್ಣನೊಬ್ಬನನ್ನು ಹೊರತುಪಡಿಸಿ. ಇದಕ್ಕೆ ಕಾರಣವೇನು, ಎಂಬ ಪ್ರಶ್ನೆ ಮೂಡದೇ ಇರದು.

ಇದಕ್ಕೆ ಅತ್ಯಂತ ಪ್ರಮುಖ ಕಾರಣವು ರಾಜಸತ್ತೆಯು ಹೆಣ್ಣನ್ನು ನೋಡುವ ದೃಷ್ಟಿಕೋನದಲ್ಲಿದೆ. ಇಲ್ಲಿ ಮತ್ತೆ ಮತ್ತೆ ಪ್ರಸ್ತಾಪಿತವಾಗುವ 'ತೊತ್ತು' ಎನ್ನುವ ಶಬ್ದ ರಾಜಸತ್ತೆಗೆ ಆಪ್ಯಾಯಮಾನವಾದುದು. ಮಾತ್ರವಲ್ಲ, ರಾಜಸತ್ತೆಯ ಅಧಿಕಾರದ ಚಾವಟಿಗೆಗೆ ಗಾಳಿಯಂತೆ ಒದಗಿಬರುವಂಥದು. ಹೆಣ್ಣು ರಾಜಸತ್ತೆಗೆ ಭೋಗದ ಒಂದು ಅಂಗ ಮಾತ್ರ. 'ಹೆಣ್ಣು, ಹೊನ್ನು, ಮಣ್ಣು'ಗಳ ಸಮೀಕರಣ ಅನೂಚಾನವಾಗಿ ನಮ್ಮ ಪರಂಪರೆಯೊಳಗೆ ಪುನರಾವರ್ತಿತವಾಗುತ್ತಿರುತ್ತದೆ. ಇವು ಮೂರೂ ವ್ಯಕ್ತಿಯ ಸಾಮಾಜಿಕ ಸ್ಥಾನಮಾನಗಳ ಏರಿಕೆಗೆ ಒತ್ತಾಸೆಯಾಗಿ ಬರುವಂಥವು. ಭಕ್ತಿಪಂಥಗಳು ಇವು ಮೋಕ್ಷಕ್ಕೆ ತೊಡಕು ಎಂದಾಗಲೂ ರಾಜಸತ್ತೆಗಳು ಸಂಪತ್ತಿನ ಅಂಗ ಎಂದಾಗಲೂ ಇವು 'ಭೋಗ' ಸೂಚಕಗಳಾಗಿಯೇ ಕಂಡುಬರುತ್ತವೆ.

ಹೆಣ್ಣೆಂಬ ಒಡವೆಯ ಮೇಲಿನ ಸಂಪೂರ್ಣ ಅಧಿಕಾರವು ಅದರ ಒಡೆಯನಾದ ಪುರುಷನದು. ಹೀಗಾಗಿ ದ್ರೌಪದಿಗೆ ಈ ದುರ್ಗತಿ ಬರುತ್ತದೆ. ಮಾತ್ರವಲ್ಲ, ರಾಜಸತ್ತೆಯು ರಾಜನಿಗೆ ಪರಮಾಧಿಕಾರ ಕೊಡುವಾಗ ಆತನ ಕೈಕೆಳಗಿನ ಎಲ್ಲವನ್ನೂ, ಎಲ್ಲರನ್ನೂ ಅವನಿಗೆ ಅಧೀನಗೊಳಿಸುತ್ತದೆ. ಹೀಗಾಗಿ ಧರ್ಮರಾಜನ ಮಡದಿ, ತಮ್ಮಂದಿರು ಅವನ ಅಧೀನವಾದರೆ, ಜೂಜಿನಲ್ಲಿ ಸೋತ ನಂತರ ಧರ್ಮಜನ ಪರಿವಾರದವರೆಲ್ಲಾ ಕೌರವನ ಅಧೀನರಾಗುತ್ತಾರೆ. ರಾಜನ ಈ ಪರಮಾಧಿಕಾರವನ್ನು ಭೀಷ್ಮ, ದ್ರೋಣರೂ ಪ್ರಶ್ನಿಸದೆ ಮೂಕರಾಗುವುದು ರಾಜಸತ್ತೆಯು ಹೊಂದಿರುವ ಪ್ರಶ್ನಾತೀತ ಪ್ರಭುತ್ವದ ಪರಾಕಾಷ್ಠೆಯಾಗಿ ಗೋಚರಿಸುತ್ತದೆ.

ಭೀಷ್ಮನೂ ಇಲ್ಲಿ ಮೌನವಾಗಿರುವುದರ ಅತಿಮುಖ್ಯ ಕಾರಣವೆಂದರೆ, ದ್ರೌಪದಿ ಮೊದಲು ಧರ್ಮರಾಯನ ಸೊತ್ತಾದರೆ, ನಂತರ ದುರ್ಯೋಧನನ ಸೊತ್ತಾಗಿ ಪರಿವರ್ತಿತಳಾಗುವುದರ ಬಗೆಗೆ ಅವನಿಗೆ ಯಾವುದೇ ಗೊಂದಲ ಇಲ್ಲದೇ ಇರುವುದು. ಅವರ ಸೊತ್ತುಗಳ ಬಗ್ಗೆ ಮಾತನಾಡಲು ಇವನಿಗಾದರೂ ಯಾವ ಅಧಿಕಾರವಿದೆ, ಎಂಬುದೇ ಇಲ್ಲಿನ ಪ್ರಮೇಯವಾಗಿದೆ. ಅರ್ಜುನನು ಭೀಮನಿಗೆ ಹೇಳುವ ಮಾತಿನಲ್ಲಿ ಇದರ ಸುಳಿವಿದೆ:

*ಏನಿದೇನೈ ಭೀಮ ನಿಲು ಯಮ*
*ಸೂನು ಶಿವ ಶಿವ ಗುರುವಲಾ ನಮ*
*ಗೀ ನಿತಂಬಿನಿಯಾದಿಯಾದ ಸಮಸ್ತ ವಸ್ತುಗಳು*
*ಈ ನರೇಂದ್ರಗೆ ಸರಿಯೆ ಕುಂತೀ*
*ಸೂನುವೇ ಪ್ರಾಣಾರ್ಥದಿಂದ ಸ*
*ಘಾನನೈ ನಮಗೀತನೇ ಗತಿಯೆಂದನಾ ಪಾರ್ಥ* (೯ : ೩೭)

ಅರ್ಜುನನಂತಹ ಲೋಕೋತ್ತರ ವೀರ 'ತಮ್ಮ ಗತಿ'ಯ ಬಗ್ಗೆ ಯೋಚಿಸಿ, ದ್ರೌಪದಿಯ ಕೈ ಬಿಡುವ ದುರ್ಗತಿಗೆ ಬರುವುದು ಅವಳು ದುರ್ಯೋಧನನ ತೊತ್ತಾಗಿರುವುದನ್ನು ಒಪ್ಪಿಕೊಂಡಿರುವುದಕ್ಕೇ ಆಗಿದೆ.

ಹೀಗಿದ್ದೂ ದ್ರೌಪದಿಯಂತಹ ತಿಳಿವಳಿಕೆಯುಳ್ಳ ಹೆಣ್ಣು ತರ್ಕವನ್ನು ಮಂಡಿಸಿ ಗೆಲ್ಲುವ

ಪ್ರಯತ್ನ ಮಾಡುತ್ತಾಳೆ. 'ತನ್ನನ್ನು ಸೋತವನು ನನ್ನನ್ನು ಹೇಗೆ ಸೋಲುತ್ತಾನೆ' ಎಂದು ಕೇಳುತ್ತಾಳೆ. ಲೋಕದಲ್ಲಿ 'ಒಬ್ಬ ಪತಿಗೆ ಹಲವು ಸತಿಯರಿರುವುದು' ಸಮ್ಮತ, ಹಲವು ಪತಿಯರಿಗೆ ಒಬ್ಬ ಸತಿ' ಇರುವುದು ಹೇಗೆ ಸಮ್ಮತವಾಗುತ್ತದೆ ಎಂದು ಅವಳನ್ನು ಚುಚ್ಚಿ ನೋಯಿಸುವುದರ ಮೂಲಕ ಕರ್ಣ ಅವಳ ಬಾಯಿಯನ್ನು ಮುಚ್ಚಿಸುತ್ತಾನೆ. ಹೆಣ್ಣಿನ ಶೀಲವನ್ನು ಶಂಕಿಸಿ ಅವಳ ಮನಃಸ್ಥೈರ್ಯ ಕುಸಿಯುವಂತೆ ಮಾಡುವ ಒಂದು ತಂತ್ರದಂತೆ ಇದು ಕಾಣುತ್ತದೆ. ಕೊನೆಗೂ ಅವಳಿಗೆ ದೇವರಿಂದ ರಕ್ಷೆ ದೊರಕುವುದು ಅವಳು 'ಪತಿವ್ರತೆ'ಯಾದದ್ದರಿಂದ ಮತ್ತು 'ಭಕ್ತೆ'ಯಾದದ್ದರಿಂದಲೇ ಹೊರತು ಹೆಣ್ಣಿಗೆ ನ್ಯಾಯ ಸಮ್ಮತವಾಗಿ ದೊರಕಬೇಕಾದ ಹಕ್ಕಿನಿಂದಲ್ಲ ಎಂಬುದೂ ಕೂಡ – ಹೆಣ್ಣನ್ನು ಪುರುಷನ ಕೃಪಾಕಟಾಕ್ಷ ಎಂಬ ಭಿಕ್ಷಾಪಂಜರದೊಳಗೇ ಬಂಧಿಸುತ್ತದೆ.

ಹೀಗೆ ರಾಜಸತ್ತೆಯು ಅಧಿಕಾರದ ದ್ಯೋತಕವಾಗಿ, ಆ ಅಧಿಕಾರವು ನೇರ ಆಳ್ವಿಕೆಯ ಮುಖಾಂತರ ಮತ್ತು ಜನರು ಅದನ್ನು ಒಪ್ಪಿಕೊಂಡು ಅವರ ಅಧಿಕಾರ ಚಲಾವಣೆಗೆ ದಾರಿ ಮಾಡಿಕೊಡಲು ಪೂರಕವಾದ ಸಂದರ್ಭವನ್ನು ನಿರ್ಮಿಸುವುದರ ಮೂಲಕ ಪ್ರಶ್ನಾತೀತವಾಗಿ ಕಂಗೊಳಿಸುತ್ತಿರುತ್ತದೆ. ರಾಜಸತ್ತೆಯ ಈ ಹಿತಾಸಕ್ತಿಗೆ ಪುರೋಹಿತಶಾಹಿಯ ಬೆಂಬಲ, ಶಾಸ್ತ್ರಗಳ ಆಧಾರ ಮತ್ತು ಅರಿವಿಲ್ಲದೇ ಭಾರತದಂತಹ ಕೃತಿಗಳು ಅಡಿಪಾಯಗಳಾಗಿ ಕೆಲಸ ಮಾಡುತ್ತಿರುತ್ತವೆ. ಕುಮಾರವ್ಯಾಸನ ಅದ್ಭುತ ಪ್ರತಿಭೆಯು ಹೀಗೆ ಜನಮಾನಸದಲ್ಲಿ ಹರಿಯುತ್ತಾ ವ್ಯವಸ್ಥೆಯನ್ನು ಗಟ್ಟಿಗೊಳಿಸುತ್ತಾ ಹೋಗುತ್ತದೆ.

- ೩ -

ಇದುವರೆಗೂ ಮಂಡಿಸಲಾದ ವಾದಗಳನ್ನು ಜನಪದ 'ಭಾರತ'ಗಳ ಅವಲೋಕನವು ಇನ್ನಷ್ಟು ದೃಢೀಕರಿಸುತ್ತದೆ. ಸಿ. ಎನ್. ರಾಮಚಂದ್ರನ್ ಅವರು ಉಲ್ಲೇಖಿಸುವ, 'ಭಿಲ್ಲೋಂಕಾ ಭಾರತ್' ಎಂಬ ಗುಜರಾತಿನ ಮೌಖಿಕ ಕಾವ್ಯದಲ್ಲಿ ಬರುವ ವಿಚಾರಗಳು ಕುತೂಹಲಕರವಾಗಿವೆ. ಶಿಷ್ಟಭಾರತಗಳಲ್ಲಿ ಕಂಡುಬರುವ ಅನೇಕ ಮುಖ್ಯ ಭಾಗಗಳು ಇದರಲ್ಲಿ ಇಲ್ಲವಾಗಿವೆ. ''ಇದರಲ್ಲಿ ಇಲ್ಲದಿರುವ ಮುಖ್ಯ ಕಥಾಂಶಗಳೆಂದರೆ : ನಿಯೋಗ, ಲಾಕ್ಷಾಗೃಹ ಪ್ರಕರಣ, ಖಾಂಡವವನ ದಹನ, ದ್ರೌಪದಿ ಸ್ವಯಂವರ, ದ್ಯೂತ ಪ್ರಸಂಗ, ವನವಾಸ, ಅಜ್ಞಾತವಾಸ, ಕುರುಕ್ಷೇತ್ರ ಯುದ್ಧ (ಅಭಿಮನ್ಯು ಕಾಳಗವನ್ನು ಹೊರತು ಪಡಿಸಿ) ಇತ್ಯಾದಿ.'' (ಸಿ. ಎನ್. ರಾಮಚಂದ್ರನ್, ಸಂ : ರಹಮತ್ ತರೀಕೆರೆ : ೨೦೦೪ : ಪು. ೫೬).

ಹಾಗೆಯೇ 'ಭಿಲ್ಲಭಾರತ'ದಲ್ಲಿ ಇರುವ ಮತ್ತು ಇತರ ಶಿಷ್ಟ ಭಾರತಗಳಲ್ಲಿ ಇಲ್ಲದಿರುವ ಮುಖ್ಯ ಘಟನೆಗಳೆಂದರೆ : ವಾಸುಕಿ ದ್ರೌಪದಿಯನ್ನು ಭೋಗಿಸುವುದು, ದ್ರೌಪದಿ ಕಾಡಿನಲ್ಲಿ ಪಾಂಡವರಿಗೆ ಸಿಗುವುದು, ಸತ್ತ ಪಾಂಡು ಮಹಾರಾಜನಿಗೆ ಸದ್ಗತಿ ದೊರಕಲು ಪಾಂಡವರು ಮಾಡುವ ಕ್ರಿಯೆಯ ವರ್ಣನೆ, ಇಂದ್ರಾಣಿ-ಅಭಿಮನ್ಯು ಪ್ರಸಂಗ ಮತ್ತು ಕೊನೆಯಲ್ಲಿ ಬರುವ ಧರಮಾಬಾಯಿ (ಸ್ತ್ರೀಗೆ ಸಹೋದರರ ಅವಶ್ಯಕತೆಯನ್ನು ದಾಖಲಿಸುವ ಕಥೆ) ಮತ್ತು ರಾಧೆಯ ಚಂಚಲ ಮನಸ್ಸನ್ನು ಚಿತ್ರಿಸುವ ರಾಧಾ-ಕೃಷ್ಣ ಪ್ರಸಂಗ.'' (ಅದೇ : ಪುಟ ೫೬)

ಅಂದರೆ, ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ, ಪ್ರಭುತ್ವದ ಅಧಿಕಾರ ಸ್ಥಾಪನೆಗೆ ಅವಶ್ಯಕ ಎನಿಸುವ ಖಾಂಡವದಹನ, ದ್ಯೂತ, ಕುರುಕ್ಷೇತ್ರ ಯುದ್ಧಗಳು ಇಲ್ಲಿ ಸ್ಥಾನವನ್ನೇ ಪಡೆದುಕೊಂಡಿಲ್ಲ. ಯಾಕೆಂದರೆ, ಅದು ಅವರ ತುರ್ತಾಗಲೀ, ಅಗತ್ಯವಾಗಲೀ ಅಲ್ಲ. ಹೀಗಾಗಿ ಮೌಖಿಕ ಕವಿಗಳು ಆ ಪ್ರಸಂಗಗಳನ್ನು ಬಿಟ್ಟುಬಿಡುವುದಕ್ಕೆ ಯಾವ ತೊಂದರೆಯೂ ಇಲ್ಲ. ಮಾತ್ರವಲ್ಲ, ದ್ರೌಪದಿಯ ಪಾತಿವ್ರತ್ಯವು ಇವರಿಗೆ ಒಂದು ಪ್ರಮುಖ ವಿಷಯವಾಗಿ ಕಾಣುವುದಿಲ್ಲ. ಆ ಕಾರಣಕ್ಕೆ ಆಕೆ ಪ್ರಭುತ್ವದ ತೊತ್ತಾಗಬೇಕಾದ ಅಪಾಯದಿಂದ, ಸಾರ್ವಜನಿಕ ಅಪಮಾನದಿಂದ ಪಾರಾಗುತ್ತಾಳೆ.

ಇನ್ನು ಕನ್ನಡದ ಮೌಖಿಕ ಮಹಾಭಾರತದಲ್ಲೂ ಇಂತಹ ವ್ಯತ್ಯಾಸಗಳನ್ನು ಕಾಣಬಹುದು. ಎಲ್. ಆರ್. ಹೆಗಡೆಯವರು ಸಂಗ್ರಹಿಸಿದ ಜನಪದ ಮಹಾಭಾರತದಲ್ಲಿ ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಾಶನದ ಕರಾಕೃ ಸಂಪಾದಿಸಿರುವ ಜನಪದ ಮಹಾಭಾರತ ಭಾಗ - ೧ರಲ್ಲಿ ದ್ರೌಪದಿಯೇ ಪಗಡೆ ಆಡಿ ಕುಟಿಲೋಪಾಯದಿಂದ ಗೆಲ್ಲುವ ಸನ್ನಿವೇಶಗಳಿವೆ. (ಅದೇ : ಅನುಬಂಧ -೨; ಪುಟ ೭೧-೭೨). ಹಾಗೆಯೇ ''ದ್ರೌಪದಿ ಪಗ್ಡಿ ಆಟ ಆಡಿದ್'' ಎಂಬ ಜನಪದ ಕಾವ್ಯದಲ್ಲಿ ದ್ರೌಪದಿಯು ದುರ್ಯೋಧನನನ್ನು ಪಗಡೆಯಲ್ಲಿ ಸೋಲಿಸಿ, ತನ್ನ ಗಂಡಂದಿರನ್ನು ಕಾಪಾಡಿಕೊಳ್ಳುವ ಸನ್ನಿವೇಶ ಚಿತ್ರಿತವಾಗಿರುವುದನ್ನು ಗಾಯತ್ರೀ ನಾವಡ ಅವರು ಉಲ್ಲೇಖಿಸುತ್ತಾರೆ. (ನೋಡಿ : ಕರಾವಳಿ ಜನಪದದಲ್ಲಿ ಸ್ತ್ರೀವಾದೀ ನೆಲೆಗಳು)

ಇಲ್ಲಿ ದ್ರೌಪದಿ ಗೆಲ್ಲಲು ಸಾಧ್ಯವಾಗಿರುವುದು, ಹೆಣ್ಣನ್ನು ಪ್ರಭುತ್ವವು ನೋಡುವ ದೃಷ್ಟಿಕೋನಕ್ಕೂ, ಸಾಮಾನ್ಯ – ಮುಖ್ಯವಾಗಿ ಅಂಚಿನ – ಜನರು ನೋಡುವ ದೃಷ್ಟಿಕೋನಕ್ಕೂ ಇರುವ ವ್ಯತ್ಯಾಸದಿಂದ. ಆಕೆ ಇಲ್ಲಿ ಸರಕಾಗಿರದೆ, ಸ್ವತಂತ್ರ ವ್ಯಕ್ತಿತ್ವ ಉಳ್ಳವಳಾಗಿ, ಜೀವನಾನುಭವದ ಮೂಲಕ ಬದುಕನ್ನು ನೋಡುವ ರಕ್ತ-ಮಾಂಸ ತುಂಬಿದ ಮನುಷ್ಯಳಾಗಿರುತ್ತಾಳೆ ಮತ್ತು ಜನಪದರಿಗೆ ಯಾವ ಅಧಿಕಾರವನ್ನೂ ಸ್ಥಾಪಿಸುವ ಇರಾದೆ ಇರದ ಕಾರಣ, ಪರಮಾಧಿಕಾರದ ಕುರುಹಾಗಿ ಇತರರು ತೊತ್ತುಗಳಾಗುವ ಹಾಗೆ ತೊತ್ತುಗಳಾಗಿ ರಾಜಸತ್ತೆಯನ್ನು ಅಂಗೈಯಲ್ಲಿಟ್ಟು ಪೋಷಿಸುವ ವಾಹಕಗಳಾಗುವ ಅಗತ್ಯ ಇರುವುದಿಲ್ಲ.

ಆದರೆ, ರಾಜಸತ್ತೆಯನ್ನು ಒಪ್ಪಿರುವ, ನಂಬಿರುವ ನಾಗರಿಕ ಜಗತ್ತು ತಮ್ಮ 'ಅನಾಗರಿಕ' ನಡವಳಿಕೆಗಳನ್ನೆಲ್ಲ 'ಶೌರ್ಯ'ವೆಂಬ ಪ್ರಶಸ್ತಿ ಫಲಕಗಳ ಹಿಂದೆ ಮರೆಮಾಡುವ ನಿರಂತರ ಕಾಯಕಗಳಲ್ಲಿ ಮೈಮರೆಯುತ್ತಾ, ಕಾವ್ಯಾತ್ಮಕತೆಯ ಮತ್ತನ್ನು ಕುಡಿಯುವವರಿಗೆಲ್ಲಾ ಕುಡಿಸುತ್ತಾ ಸಂತೃಪ್ತವಾಗುತ್ತದೆ. ಇಷ್ಟಾಗಿಯೂ ಇವು, ತೆರೆಯನ್ನು ಸರಿಸಿ ನೋಡುವವರಿಗೆ, ರಾಜಸತ್ತೆಯ ನಿಜಮುಖವನ್ನು ಅನಾವರಣ ಮಾಡುವ ದಾಖಲೆಗಳೂ ಆಗುತ್ತವೆ. ಅಷ್ಟರಮಟ್ಟಿಗೆ ಕುಮಾರವ್ಯಾಸ ಇಲ್ಲಿಯೂ ತನಗರಿವಿಲ್ಲದೇ, ಚರಿತ್ರೆಯ ಬೀಜವೊಂದನ್ನು ಹುದುಗಿಸಿಟ್ಟಿದ್ದಾನೆ.

ಸಬಿತಾ
ಶಿಕ್ಷಕ ಸಂಶೋಧಕರು, ಕನ್ನಡಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ

---

*೪೯ನೇ ಪುಟದಿಂದ (...ಕೆ. ವಿ. ಸುಬ್ಬಣ್ಣ)*

ಧುರೀಣ ಎಸ್. ಎ. ಡಾಂಗೆಯವರ 'ಇಂಡಿಯ ಫ್ರಮ್ ಪ್ರಿಮಿಟಿವ್ ಕಮ್ಯುನಿಸಮ್ ಟು ಸ್ಲೇವರಿ' ಎಂಬ ಗ್ರಂಥದ 'ಭಾರತ : ಸಂಘಜೀವನದಿಂದ ಗುಲಾಮಗಿರಿಗೆ' ಎಂಬ ಕನ್ನಡ ಅನುವಾದದಲ್ಲಿ ಸುಬ್ಬಣ್ಣನವರು ವಿಶೇಷ ಆಸಕ್ತಿ ತೋರಿ, ಅದಕ್ಕೊಂದು ಮುನ್ನುಡಿ ಬರೆದುಕೊಟ್ಟು ಅದರ ಪ್ರಕಟಣೆಯಲ್ಲೂ ನೆರವಾದುದು ಅವರ ಮುಕ್ತ ಚಿಂತನೆಯ ಸ್ವಭಾವಕ್ಕೆ ಮತ್ತೊಂದು ನಿದರ್ಶನವಾಗಿದೆ.

ಪುಸ್ತಕ ಪ್ರಕಾಶನ ಕ್ಷೇತ್ರದಲ್ಲೂ ಸುಬ್ಬಣ್ಣನವರ ಸಾಧನೆ ಅಮೋಘವಾಗಿದೆ. 'ಅಕ್ಷರ ಪ್ರಕಾಶನ' ಸಂಸ್ಥೆಯನ್ನು ಸ್ಥಾಪಿಸಿ ಕನ್ನಡದ ಅನೇಕ ಅತ್ಯಂತ ಶ್ರೇಷ್ಠ ಕವಿ ಸಾಹಿತಿಗಳ ನೂರಾರು ಉತ್ಕೃಷ್ಟ ಕೃತಿಗಳನ್ನು ಪ್ರಕಟಿಸಿದ್ದಾರೆ. ನವಕರ್ನಾಟಕ ಪ್ರಕಾಶನದೊಂದಿಗೂ ನಿಕಟ ಸಂಪರ್ಕವಿರಿಸಿಕೊಂಡಿದ್ದು ತಮಗೆ ಮೆಚ್ಚಿಗೆಯಾದ ಅದರ ಪ್ರಕಟಣೆಗಳನ್ನು ಕೊಂಡು 'ನೀನಾಸಮ್' ಸಂಕೀರ್ಣದಲ್ಲಿ ತಾವೇ ನಿರ್ಮಿಸಿರುವ ಬೃಹತ್ ಗ್ರಂಥಾಲಯದಲ್ಲಿ ಅಳವಡಿಸಿ ಇರಿಸಿರುವುದನ್ನು ಗೆಳೆಯ ಸೀಯಾರ್ಕೆಯೊಂದಿಗೆ ನಾನು ಕಳೆದ ಕೆಲವು ತಿಂಗಳುಗಳ ಹಿಂದಷ್ಟೆ ಅವರಲ್ಲಿಗೆ ಹೋಗಿದ್ದಾಗ ನಮಗೆ ತೋರಿಸಿಕೊಟ್ಟರು.

ಇತ್ತೀಚೆಗೆ ಅವರಿಗೆ ರಾಷ್ಟ್ರದ 'ಪದ್ಮಶ್ರೀ' ಪ್ರಶಸ್ತಿ ದೊರೆತಾಗ ನನಗಾದ ಸಂತೋಷವನ್ನು ಅವರೊಂದಿಗೆ ಹಂಚಿಕೊಳ್ಳುತ್ತ ನಾನು ಅವರಿಗೆ ಪತ್ರ ಬರೆದಾಗ ಅದಕ್ಕೆ ಅವರು ಎರಡೇ ಮಾತಿನ 'ನಾನೇನು ಹೇಳಲಿ' ಎಂದು ಉತ್ತರ ಬರೆದುದು ಅವರ ಸುಸಂಸ್ಕೃತ ಹಾಗೂ ತುಂಬು ಮನಸ್ಸಿನ ದ್ಯೋತಕವಾಗಿದೆ.

ಇಷ್ಟು ಕ್ರಿಯಾಶೀಲರಾಗಿದ್ದ ಸುಬ್ಬಣ್ಣನವರು ಇಷ್ಟು ಬೇಗ ನಮಗೆಲ್ಲ ವಿದಾಯ ಹೇಳಿ ಹೊರಟುಹೋಗುವರೆಂದು ನಾವು ಕನಸು ಮನಸಿನಲ್ಲೂ ಎಣಿಸಿರಲಿಲ್ಲ. ಅವರ ಮಗ ಕೆ. ವಿ. ಅಕ್ಷರ ಅವರು ತಮ್ಮ ತಂದೆಯವರು ನಿರ್ಮಿಸಿದ ಈ ಬೃಹತ್ ವ್ಯವಸ್ಥೆಯನ್ನು ತುಂಬ ಅಚ್ಚುಕಟ್ಟಾಗಿ ಹಾಗೂ ವ್ಯವಸ್ಥಿತವಾಗಿ ನಿರ್ವಹಿಸಿಕೊಂಡುಹೋಗುತ್ತಿರುವುದು ಒಂದು ಸಮಾಧಾನದ ಸಂಗತಿ.

ಜಾನಪದ ಕಥನಗೀತಗಳ ಸಂಕಲನ ಮತ್ತು ಅಧ್ಯಯನಗಳನ್ನೊಳಗೊಂಡ 'ಅವರು ನೀಡಿದ ದೀಪ' ಎಂಬ ಕೃತಿಗೆ ಬರೆದ ಮುನ್ನುಡಿಯಲ್ಲಿ ಸುಬ್ಬಣ್ಣನವರು ಹೇಳಿದ್ದಾರೆ :

*ಮುಳ್ಳಾಗೆ ಕಲ್ಲಾಗೆ ಬಂದೇವಯ್ಯ*
*ತಂದೆವೀ ದೀಪಾನ ಕೊಳ್ಳೀರಯ್ಯ.*

ಅವರೇನೋ ದೀಪ ಹಚ್ಚಿ ನಮಗೆಲ್ಲ ಕೊಟ್ಟು ಹೋಗಿದ್ದಾರೆ. ಆ ದೀಪ ನಿತ್ಯಜ್ಯೋತಿಯಂತೆ ಬೆಳಗುತ್ತ ಇರುವಂತೆ ಮಾಡಿಕೊಳ್ಳುವುದು, ಅದರ ಬೆಳಕಿನಲ್ಲಿ ಮುಂದೆ ನಡೆಯುತ್ತ ಹೋಗುವುದು ಮುಂದಿನ ತಲೆಮಾರಿಗೆ ಸೇರಿದ ವಿಷಯವಾಗಿದೆ.

ಕೆ. ಎಲ್. ಗೋಪಾಲಕೃಷ್ಣ ರಾವ್
ನಂ. ೨೬೧, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್, ೨ನೇ ಕ್ರಾಸ್, ಸಿ.ಟಿ. ಬೆಡ್, ತ್ಯಾಗರಾಜನಗರ, ಬೆಂಗಳೂರು - [illegible]



# ಜ್ಯೇಷ್ಠಾದೊಡನೆ ಚಂದ್ರನ ಕಣ್ಣುಮುಚ್ಚಾಲೆ

೧೯೯೯ರಲ್ಲಿ ನಭಾವಲೋಕನದ ಮೊದಲ ಲೇಖನ ಪ್ರಕಟವಾದಾಗ ಪ್ರಕಟವಾದ ನಕ್ಷೆಯನ್ನೂ ಈಗಿನ ನಕ್ಷೆಯನ್ನೂ ಹೋಲಿಸಿದಾಗ ಎದ್ದುಕಾಣುವ ಅಂಶಗಳೆಂದರೆ ಎರಡೇ – ಮೊದಲನೆಯದು ಗ್ರಹಗಳ ಸ್ಥಾನದ ಬದಲಾವಣೆ, ಎರಡನೆಯದು ನಕ್ಷತ್ರಪುಂಜಗಳ ಸ್ಥಾನದ ಸಾಮ್ಯ. ಆದ್ದರಿಂದ ಪ್ರತಿ ಆಗಸ್ಟ್‌ಗೂ ಈ ನಕ್ಷೆ ಉಪಯೋಗವಾಗುತ್ತದೆ ಎಂದಾಯಿತು. ಈಗ ಸಂಜೆ ಕಾಣುತ್ತಿರುವ ಗುರು ಮತ್ತು ಶುಕ್ರಗಳನ್ನು ಗಮನಿಸಿ. ತಿಂಗಳ ಕೊನೆಗೆ ಹಸ್ತಲಾಘವ ಆರಂಭವಾಗುವುದು. ದುರ್ಬೀನಿನಲ್ಲಿ ಎರಡೂ ಒಟ್ಟಿಗೇ ಕಾಣುವುವು.

ಮಳೆಮೋಡ ಬಿಡುವು ಕೊಟ್ಟರೆ ಮುಖ್ಯವಾಗಿ ಗಮನಿಸಬೇಕಾದದ್ದು ಆಕಾಶಗಂಗೆಯ ವೈಭವವನ್ನು. ದಕ್ಷಿಣದ ಅಂಚಿನಲ್ಲಿಯೇ ಕಾಣುವುದಾದರೂ ವೃಶ್ಚಿಕ-ಧನುಗಳ ಆಸುಪಾಸು ಬಹಳ ರಮ್ಯ. ವೃಶ್ಚಿಕ ರಾಶಿಯಲ್ಲಿ ಚೇಳಿನ ಬದಲು ಗಣಪತಿಯನ್ನು ಊಹಿಸಿಕೊಳ್ಳಬಹುದೆಂದು ಆಗ ಸೂಚಿಸಿದ್ದೆ. ಈಗಲೂ ಅದು ಪ್ರಸ್ತುತ. ಅದರ ಹಣೆಯಲ್ಲಿ ಕೆಂಪು ಕುಂಕುಮದಂತೆ ರಾರಾಜಿಸುವ ಕೆಂಪು ನಕ್ಷತ್ರವೇ ಜ್ಯೇಷ್ಠಾ. ನಿದ್ರಿಸುತ್ತಿರುವಂತೆ ಕಾಣುವ ಗಣಪತಿಯನ್ನು ಚಂದ್ರ ಹಾದುಹೋಗುವುದು ೧೪-೧೫ ತಾರೀಖುಗಳಲ್ಲಿ. ಆಗ ''ಕುಂಕುಮ''ವನ್ನು ಮರೆ ಮಾಡುತ್ತಾನೆ. ಜ್ಯೇಷ್ಠಾದ 'ಗ್ರಹಣ' ೧೪ರ ಸಂಜೆ ಇದೆ. ೬:೨೨ಕ್ಕೆ ಸರಿಯಾಗಿ ಗ್ರಹಣ ಮುಗಿದು ಜ್ಯೇಷ್ಠಾ ಹೊರಗೆ ಇಣುಕುತ್ತದೆ. ಈ ನೋಟ ಬಹಳ ಚೆನ್ನ. ಈಗ್ಗೆ ಎರಡು ತಿಂಗಳ ಹಿಂದೆಯೂ ಇಂತಹದೊಂದು ಅವಕಾಶವಿತ್ತು. ಆದರೆ ಅದು ನಡುರಾತ್ರಿಯಲ್ಲಿತ್ತು. ಮೋಡವೂ ಕವಿದು ಯಾರಿಗೂ ನೋಡಲು ಅವಕಾಶವೇ ಸಿಗಲಿಲ್ಲ. ಈ ಬಾರಿ ಮೋಡಗಳ ಮಧ್ಯೆ ಕಿಟಕಿಯಂತೆ ಕಿಂಡಿ ಮೂಡಿದರೂ ಸಾಕು ಸಂಜೆಯೇ ನೋಡಬಹುದು. ನಕ್ಷತ್ರವನ್ನು ಸುಮಾರು ಒಂದೂವರೆ ಗಂಟೆ ಮುಚ್ಚಿಹಿಡಿದ ಮೇಲೆ ಚಂದ್ರ ಮುನ್ನಡೆಯುತ್ತದೆ. ಜ್ಯೇಷ್ಠಾ ಚಂದ್ರನ ಪಶ್ಚಿಮದ ಅಂಚಿನಲ್ಲಿ ಇಣುಕುತ್ತದೆ.

ಚಂದ್ರ ಇಂತಹ ಚೇಷ್ಟೆಗಳನ್ನು (ಆಚ್ಛಾದನೆ ಎಂಬುದು ವೈಜ್ಞಾನಿಕ ಹೆಸರು) ಪ್ರತಿದಿನವೂ ಮಾಡುತ್ತಲೇ ಇರುತ್ತಾನೆ. ಎಂಟರಂದು ಶುಕ್ರಗ್ರಹವನ್ನು ಮುಚ್ಚುವ ದೃಶ್ಯ ಕೆನಡಾದವರಿಗೆ ಮಾತ್ರ ಕಾಣುತ್ತದೆ ನಮಗಿಲ್ಲ. ಹಾಗೆಯೇ ೧೦ರಂದು ಗುರುಗ್ರಹವನ್ನೂ ಆಚ್ಛಾದಿಸುತ್ತಾನೆ. ಇದು ವಾಸ್ತವವಾಗಿ ದಕ್ಷಿಣ ಭಾಗಕ್ಕೆ ಅಂದರೆ ಹಿಂದೂಮಹಾಸಾಗರ ಮತ್ತು ಅಂಟಾರ್ಕ್ಟಿಕಾಗೆ ಕಾಣುವುದು. ನಮಗೆ ಇಲ್ಲಿಂದ ಎರಡೂ ಅಂಟಿಕೊಂಡಂತೆ ಕಾಣುವುವು. ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ.

೧೯ರಂದು ಹುಣ್ಣಿಮೆ ರಾತ್ರಿ ೧೧:೨೬ಕ್ಕೆ. ಕೆಲವು ಗಂಟೆಗಳ ಮುಂಚೆ ಅಂದರೆ ೧೮:೦೬ಕ್ಕೆ ಚಂದ್ರ-ಭೂಮಿ ಅಂತರ ಕನಿಷ್ಠ. ಆದ್ದರಿಂದ ಆ ಸಂಜೆ ಕಡಲತೀರದಲ್ಲಿ ಪ್ರತಿ ಹುಣ್ಣಿಮೆಗಿಂತ ಹೆಚ್ಚಿನ ಎತ್ತರದ ಅಲೆಗಳು ಅಪ್ಪಳಿಸುವುವು. ಆದರೆ ಮಳೆಗಾಲದ ಆರ್ಭಟದಲ್ಲಿ ಈ ಸಣ್ಣ ವ್ಯತ್ಯಾಸವನ್ನು ಗಮನಿಸಲು ಸಾಧ್ಯವಾಗುವುದೋ? ಕರಾವಳಿಯವರು ತಿಳಿಸಿಕೊಡಬೇಕು.

ಆಗಸ್ಟ್ ೧೪ರ ಸಂಜೆ ೬:೨೨ಕ್ಕೆ ಕಾಣುವ ಜ್ಯೇಷ್ಠಾ ಮತ್ತು ಚಂದ್ರ

ಮಂಗಳಗ್ರಹ ದಿನೇ ದಿನೇ ಹೆಚ್ಚು ಪ್ರಕಾಶ ಪಡೆಯುತ್ತಿದೆ. ಬೆಳಗಿನ ಜಾವ ನೆತ್ತಿಯ ಮೇಲೆ ಕಾಣುವ ಇದು ನಡುರಾತ್ರಿಗೆ ಸುಮಾರು ಒಂದು ಗಂಟೆ ಮುನ್ನ ಉದಯಿಸುತ್ತದೆ. ೨೫ರಂದು ಚಂದ್ರನಿಗಿಂತ ಸ್ವಲ್ಪ ದಕ್ಷಿಣಕ್ಕೆ ಕಾಣುತ್ತದೆ. ಮರುದಿನ ಸುಮಾರು ಮುಕ್ಕಾಲು ಗಂಟೆ ತಡವಾಗಿ ಉದಯಿಸುವ ಚಂದ್ರ ರೋಹಿಣಿಯ ಪಕ್ಕಕ್ಕೆ ಸರಿದಿರುತ್ತದೆ. ವರ್ಷಕ್ಕೊಮ್ಮೆ ಮಾತ್ರ ರೋಹಿಣಿ, ಚಂದ್ರ ಜೊತೆಯಾಗಿ ಹೀಗೆ ನಡುರಾತ್ರಿಗೆ ಉದಯಿಸುತ್ತವೆ. (ಇದೇ ಕೃಷ್ಣ ಜನ್ಮದಿನದಂದೂ ಉಂಟಾಯಿತು.)

ಸಂಜೆಯ ಆಕಾಶದಿಂದ ಕಳೆದ ತಿಂಗಳು ಹೊರಬಿದ್ದ ಶನಿ, ಈಗ ಬೆಳಗಿನ ಜಾವ ಉದಯಿಸುತ್ತದೆ. ೪ರಂದು ಮತ್ತು ತಿಂಗಳ ಕೊನೆಯ ದಿನ ಬಾಲಚಂದ್ರನ ದಕ್ಷಿಣಕ್ಕೆ ಕಾಣುವ ಚುಕ್ಕೆಯೇ ಶನಿಗ್ರಹ. ಬುಧಗ್ರಹವೂ ಬೆಳಗಿನ ಜಾವ ಕಾಣಲಿದೆ. ೫ರಂದು ಚಂದ್ರನ ಪಕ್ಕ ಕಾಣುವ ಚುಕ್ಕೆಯೇ ಬುಧ. ಆದರೆ ಅಮಾವಾಸ್ಯೆಯಂದು ಚಂದ್ರನೂ ಇಲ್ಲ; ಬುಧವೂ ಇಲ್ಲ.

ಆಗಸ್ಟ್ ಎಂದರೆ ಉಲ್ಕಾವೃಷ್ಟಿಯ ತಿಂಗಳು ಎಂದೇ ಹವ್ಯಾಸಿಗಳ ನೆನಪು. ಕಳೆದ ತಿಂಗಳಲ್ಲೇ ಆರಂಭವಾದ ಪರ್ಸಿಯ್ಡೆಡ್‌ವೃಷ್ಟಿ ೧೨ರಂದು ಗರಿಷ್ಠ ಮುಟ್ಟುತ್ತದೆ. ಅಂದರೆ ಸ್ವಿಫ್ಟ್-ಟಟಲ್ ಎಂಬ ಧೂಮಕೇತು ಬಿಟ್ಟುಹೋದ ದೂಳಿನ ಕಣಗಳು ಆಗಷ್ಟು ಈಗಷ್ಟು ಭೂಮಿಯ ಮೇಲೆ ಬೀಳುತ್ತಿದ್ದರೂ, ೧೨ರಂದು ಭೂಮಿ ಆ ದೂಳಿನ ಉಗ್ರಾಣದ ಸಮೀಪವೇ ಹಾದುಹೋಗಲಿದೆ ಎಂದರ್ಥ. ಇದರಿಂದ ಗಂಟೆಗೆ ೫೦-೬೦ ಅಂದರೆ ನಿಮಿಷಕ್ಕೊಂದು ಉಲ್ಕೆ ಕಾಣಬಹುದು. ಒಂದೊಂದು ಉಲ್ಕೆ ಒಂದೊಂದು ದಿಕ್ಕಿಗೆ ಹಾರುತ್ತದೆ. ಆದ್ದರಿಂದ ಅಷ್ಟನ್ನೂ ನೋಡಬೇಕೆಂದರೆ ತಾರಸಿಯ ಮೇಲೆ (ದೀಪ ಆರಿಸಿಕೊಂಡು) ಚಾಪೆ ಹಾಸಿ ಮಲಗುವುದೇ ಸೂಕ್ತ. ಇದು ಬೆಳಗಿನ ಜಾವ ಮಾಡಬೇಕಾದ ಕೆಲಸ. ಆದ್ದರಿಂದ ಕಾಲುಚಾಚಿದ ಕೂಡಲೇ ಕಣ್ಣು ಮುಚ್ಚಿಕೊಂಡುಬಿಡಬಹುದು; ಅಥವಾ ಮಳೆಯಿಂದ ತಾರಸಿ ಒದ್ದೆಯಾಗಿರಬಹುದು. ಈ ಎರಡೂ ಅಡ್ಡಗಾಲುಗಳನ್ನು ತಳ್ಳಿಹಾಕಿ ವೃಷ್ಟಿ ವೀಕ್ಷಿಸಿದವರಿದ್ದಾರೆ. ಆದ್ದರಿಂದ ಬರಗಾಲವನ್ನು ಸೃಷ್ಟಿಸುವ ಪ್ರಕೃತಿಯನ್ನು ನಿಷ್ಕರುಣೆ ಎಂದು ದೂರುವಂತಿಲ್ಲ.

### ಖಗೋಳ ದಿನಚರಿ

೪ ಚಂದ್ರನ ದಕ್ಷಿಣಕ್ಕೆ ಶನಿಗ್ರಹ ಚಂದ್ರ-ಭೂಮಿ ದೂರ ಗರಿಷ್ಠ
೫ ಚಂದ್ರನ ದಕ್ಷಿಣಕ್ಕೆ ಬುಧಗ್ರಹ (ಕಾಣುವುದಿಲ್ಲ). ಅಮಾವಾಸ್ಯೆ ೮:೩೫ಕ್ಕೆ
೮ ಚಂದ್ರನ ಪಕ್ಕ ಶುಕ್ರಗ್ರಹ (ಆಚ್ಛಾದನೆ ಕಾಣುವುದಿಲ್ಲ)
೧೦ ಗುರುಗ್ರಹ ಪಕ್ಕ ಚಂದ್ರ* (ಆಚ್ಛಾದನೆ ಕಾಣುವುದಿಲ್ಲ)
೧೨ ಪರ್ಸಿಯ್ಡೆಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೧೩ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೧೪ ಜ್ಯೇಷ್ಠಾ ಆಚ್ಛಾದನೆ* (ಸಂಜೆ ೧೬:೦೩ ರಿಂದ ೧೮:೨೨ರವರೆಗೆ)
೧೯ ಚಂದ್ರ-ಭೂಮಿ ದೂರ ಕನಿಷ್ಠ. ರಾತ್ರಿ ೨೩:೨೬ಕ್ಕೆ ಹುಣ್ಣಿಮೆ
೨೩ ಬುಧಗ್ರಹದ ಗರಿಷ್ಠ ಕೋನೋನ್ನತಿ*
೨೫ ಮಂಗಳ, ಚಂದ್ರ ಮತ್ತು ಕೃತ್ತಿಕೆಯ ಪುಟ್ಟ ಸರಳರೇಖೆ*
೨೬ ಚಾಂದ್ರಮಾಸದ ಕೊನೆಯ ಪಾದ
೩೧ ಚಂದ್ರನ ದಕ್ಷಿಣಕ್ಕೆ ಶನಿಗ್ರಹ ಗುರು-ಶುಕ್ರ ಪಕ್ಕಪಕ್ಕದಲ್ಲಿ*

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಕನ್ನಡದ ಸೂಫೀ ಚಿಂತನೆ

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ಯಾವುದೇ ತತ್ತ್ವ ದರ್ಶನವು ಹುಟ್ಟುವಾಗ ಅದು ಚಲನಶೀಲವೂ ಜನಕೇಂದ್ರಿತವೂ ಆಗಿರುತ್ತದೆ. ಇದು ಆ ತತ್ತ್ವವನ್ನು ಪಾಲಿಸುವ ಮೊದಲ ತಲೆಮಾರಿನವರೆಗೆ ಸತ್ಯ. ಆದರೆ ಆ ತತ್ತ್ವದ ನಾಯಕತ್ವವು ತಾತ್ವಿಕರಿಗೆ ಬದಲಾಗಿ ಅನುವಂಶೀಯತೆಯ ಹಕ್ಕುದಾರರಿಗೆ ಅನುಸಾರವಾಗಿ ಬದುಕತ್ತೊಡಗಿದಾಗ ಕಾಲಕ್ರಮದಲ್ಲಿ ಅಲ್ಲಿ ತತ್ತ್ವದ ಸತ್ವವು ಗೌಣವಾಗಿ ಅದರ ಕರಟವು ಮಾತ್ರ ವಿಜೃಂಭಿಸುತ್ತಾ ಬರುತ್ತದೆ. ಅಂತಹ ಕಡೆಯಲ್ಲಿ ಆಚಾರವಿರುತ್ತದೆಯೇ ಹೊರತು ವಿಚಾರವಿರುವುದಿಲ್ಲ. ಆ ವಿಚಾರಹೀನ ಆಚರಣೆಯು ಮಠವನ್ನು ಕಟ್ಟಿಕೊಳ್ಳುತ್ತಾ ಮತೀಯವೂ ಮಠೀಯವೂ ಆಗುತ್ತಾ ಸಾಮಾಜಿಕ ಸಂಸ್ಥೆಯಾಗಿ ರೂಪುಗೊಳ್ಳುತ್ತದೆ. ಅಂತಹ ಒಣ ಆಚಾರದ ಅನೇಕ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದಾಗ ಸಹಜವಾಗಿಯೇ ಅವು ಪರಸ್ಪರ ಎದುರುಗೊಳ್ಳುತ್ತವೆ. ಹಾಗೆ ಎದುರುಗೊಂಡಾಗ ತತ್ತ್ವವನ್ನು ಮರೆತ ಭೌತಿಕ ಸತ್ವವು ಅಹಂಕಾರದ ಮೂಲದಲ್ಲಿ ಸಂಘರ್ಷಕ್ಕೂ ಎಳೆಸುತ್ತದೆ. ಆ ನೆಲೆಯಲ್ಲಿ ಜರುಗಿದ ಜಗತ್ತಿನ ಧರ್ಮಗಳ ಚರಿತ್ರೆಯು ವರ್ತಮಾನವೂ ಆಗಿ ನಮ್ಮ ಕಣ್ಣಮುಂದಿದೆ.

ಹೀಗೆ ಮೂಲಭೂತವಾಗಿ ಜನಪರವಾಗಿದ್ದ ಚಾರಿತ್ರಿಕ ಸ್ಥಿತ್ಯಂತರಗಳಲ್ಲಿ ಕೇವಲ ಸಾಂಸ್ಕೃತಿಕವೂ ಜಡವೂ ಅದರ ಆಶಯ ವಿದೂರವೂ ಆಗತೊಡಗಿದಾಗ ಅದಕ್ಕೆ ಪ್ರತಿಕ್ರಿಯಾತ್ಮಕ ಮತ್ತು ವಿಮರ್ಶಾತ್ಮಕ ನೆಲೆಯಲ್ಲಿ ಹೊಸ ಸುಧಾರಿತ ಚಿಂತನಧಾರೆಯೊಂದು ಪಂಥವಾಗಿ ಅದರ ಗರ್ಭದಲ್ಲಿಯೇ ಹುಟ್ಟಿಕೊಳ್ಳುತ್ತದೆ. ಬಸವಣ್ಣನ ನೇತೃತ್ವದ ಶರಣರ ಆಂದೋಳನದ ತತ್ತ್ವವು ಕ್ರಮೇಣ ಜಡ ಆಚರಣಾತ್ಮಕ ನೆಲೆಯನ್ನು ಪಡೆಯತೊಡಗಿದಾಗ ಅದರ ನಿಜದ ಆಶಯವನ್ನು ಎಚ್ಚರಿಸುವಂತೆ ಅಲ್ಲಮ ಮಾತನಾಡುತ್ತಾನೆ. ಅಂತೆಯೇ ಇವನ ಧಾರೆಯಲ್ಲಿಯೇ ಮುಂದುವರಿಯುವ ಮಂಟೇಸ್ವಾಮಿ ಇಷ್ಟಲಿಂಗ ಧಾರಣೆ ಮಾಡಿ ನಾಯಿ, ನರಿ, ಎತ್ತುಗಳಿಗೆಲ್ಲ ಇಷ್ಟಲಿಂಗ ಕಟ್ಟುವ ಬಸವಣ್ಣ ಗುರುವಿಲ್ಲದ ದೇವರ ಗುಡ್ಡ ಎಂಬ ಟೀಕೆಯನ್ನು ಮಾಡುತ್ತಾನೆ. ಹೀಗೆ ಟೀಕೆಯನ್ನು ಮಾಡಿದ್ದಲ್ಲದೇ ಲಿಂಗಾಂಗ ಸಾಮರಸ್ಯದ ಅಲ್ಲಮನ ಅನುಭಾವೀ ತತ್ತ್ವವನ್ನು ತನ್ನ ಪರಿಸರದ ಉಸಿರನ್ನಾಗಿಸಿಕೊಳ್ಳುತ್ತಾನೆ. ಇದು ಒಂದು ಉದಾಹರಣೆ ಮಾತ್ರ.

ಅಂದರೆ ತತ್ತ್ವವೊಂದು ಧರ್ಮವಾಗಿ ಜಡವಾಗತೊಡಗಿದಾಗ ಅದನ್ನು ಪುನಶ್ಚೇತನಗೊಳಿಸುವಂತೆ ಪರ್ಯಾಯ ಪಂಥವೊಂದು ಕೆಲಸ ಮಾಡುತ್ತದೆ. ಇಂತಹ ಪಂಥಗಳು ಜಗತ್ತಿನ ಅನೇಕ ಧರ್ಮಗಳ ಸಂದರ್ಭದಲ್ಲಿ ಕಂಡುಬಂದಿವೆ. ಈ ಹಿನ್ನೆಲೆಯಲ್ಲಿ ಇಸ್ಲಾಂ ಧರ್ಮವು ಕಾಲಕ್ರಮದಲ್ಲಿ ಆನುವಂಶಿಕ ಸಮುದಾಯಗಳ ಮೂಲಕವಾಗಿ ವಿಚಾರ ಗೌಣವಾದ ಆಚಾರ ರೂಢಿ ಸ್ಥಾವರವಾಗತೊಡಗಿದಾಗ ಅದಕ್ಕೆ ಪ್ರತಿಯಾಗಿ, ಪರ್ಯಾಯವಾಗಿ, ವಿಮರ್ಶಾತ್ಮಕವಾಗಿ ಸೂಫೀ ಪಂಥವು ಅಸ್ತಿತ್ವವನ್ನು ವಿಸ್ತರಿಸಿಕೊಳ್ಳುತ್ತಾ ಬಂದಿದೆ. ಇಲ್ಲಿ ಸೂಫೀ ಪಂಥವು ತನ್ನ ಅಸ್ತಿತ್ವವನ್ನು ವಿಸ್ತರಿಸಿಕೊಳ್ಳುತ್ತಾ ಬಂದಿದೆ ಎನ್ನಲು ಕಾರಣ, ಇದು ಇಸ್ಲಾಂ ಪೂರ್ವದಲ್ಲಿಯೇ ಕಿರುತೊರೆಯಾಗಿ ಅಸ್ತಿತ್ವದಲ್ಲಿತ್ತು ಎಂಬುದು ವಿದ್ವಾಂಸರ ಅಭಿಮತ. ಆದರೂ ಚರಿತ್ರೆಯಲ್ಲಿ ಇದರ ಸ್ಥಾನ ಮತ್ತು ನಿರ್ವಹಣೆ ಒಂದಿನ ಚಾಲಕ ಶಕ್ತಿಯಾಗಿ ಸ್ಥಾವರಗೊಳ್ಳುತ್ತಾ ಇಸ್ಲಾಂ ಬಂದಿರುವುದನ್ನು ಮರೆಯಲಿಕ್ಕಾಗುವುದಿಲ್ಲ. ಆದ್ದರಿಂದಲೇ ಚರಿತ್ರೆಯುದ್ದಕ್ಕೂ ಇಸ್ಲಾಂಗೂ ಮತ್ತು ಸೂಫೀ ಪಂಥಕ್ಕೂ ನಿರಂತರ ತಾತ್ವಿಕ ಸಂಘರ್ಷ ಏರ್ಪಡುತ್ತಾ ಬಂದಿರುವುದು.



> ಸೂಫೀವಾದವು ಚಾರಿತ್ರಿಕವಾಗಿ ಪ್ರಾದೇಶಿಕ ಭಿನ್ನತೆಗಳನ್ನು ಸ್ಥಾಪಿಸುತ್ತಾ ಬಂದಿದ್ದರೂ ಅದರ ಮಾನವೀಯ ಪ್ರೇಮ ಮತ್ತು ಅನುಭಾವ ತತ್ವದಲ್ಲಿ ಬಹುಪಾಲು ಸ್ಥಾಯೀ ಗುಣವನ್ನು ಉಳಿಸಿಕೊಂಡುಬಂದಿದೆ. ಇದರ ಪ್ರಕ್ರಿಯಾತ್ಮಕ ನೆಲೆಯು ಸ್ಥಾಪಿತ, ಸಾಂಸ್ಥಿಕ, ಸ್ಥಾವರ ಚಿಂತನೆಗಳಿಗೆ ಪರ್ಯಾಯವನ್ನು ಕಟ್ಟಿಕೊಡುತ್ತಾ , ಬದುಕನ್ನು ಸಹ್ಯಗೊಳಿಸುತ್ತಾ ಬಂದಿದೆ. ಅನೇಕ ಬಗೆಯ ಗಡಿಗಳನ್ನು ದಾಟಿರುವ ಇದು ದ್ವೀಪಗಳು ಅಂತರವನ್ನೇರ್ಪಡಿಸುತ್ತಿರುವ ಯಾವತ್ತಿನ ಕಾಲದಲ್ಲಿ ಅತ್ಯಂತ ಮುಖ್ಯವೂ ಆಗುತ್ತದೆ. ಅದು ಇದರ ಅನನ್ಯತೆ ಮತ್ತು ಇವತ್ತಿನ ಪ್ರಸ್ತುತತೆ.

ಕ್ರಿ.ಶ.ದ ಆರಂಭದ ಶತಮಾನಗಳಲ್ಲಿ ಸೂಫಿಸಂ ಹುಟ್ಟಿದೆಯೆಂಬ ಅಭಿಪ್ರಾಯವಿದೆ. ಇದರ ಮೂಲ ತಾಣ ಮಧ್ಯ ಏಷಿಯಾ. ಇದು ಕ್ರಮೇಣ ಪರ್ಷಿಯಾ, ಅರೇಬಿಯಾ ಮೊದಲಾದ ದೇಶಗಳಿಗೆ ಪಸರಿಸಿದ್ದಲ್ಲದೇ ಮಧ್ಯಕಾಲದಲ್ಲಿ ಭಾರತಕ್ಕೂ ಬಂದಿತು. ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು, ಆಳುವ ವರ್ಗದ ದಂಡಯಾತ್ರೆಗಳು ಸೂಫಿಗಳನ್ನು ಭಾರತಕ್ಕೆ ಕರೆತಂದವು. ಆದರೆ ಈ ಸೂಫಿಗಳು ಸಾಂಸ್ಥಿಕ ಧರ್ಮಗಳ ವಕ್ತಾರರಂತೆ ಮತಾಂತರಕ್ಕಿಳಿಯಲಿಲ್ಲ; ಬದಲಿಗೆ ತಾವು ಪ್ರಾಮಾಣಿಕವಾಗಿ ನಂಬಿದ್ದ ಮತ್ತು ಬದುಕಿನಲ್ಲಿ ಅಳವಡಿಸಿಕೊಂಡಿದ್ದ ತತ್ತ್ವವನ್ನು ಜನರ ಮುಂದಿಟ್ಟರು. ಈ 'ಮುಂದಿಟ್ಟ' ಬಗೆ ಅನುಭಾವೀ ಸ್ತರದ್ದು. ಹಾಗಾಗಿ ಪ್ರೇಮ ಮೂಲದ ಅದರ ಆಕರ್ಷಣೆಗೆ ಒಳಗಾದ ಅನೇಕ ಮಂದಿ ಅದರೊಳಗೆ ಒಂದಾದರು. ಧರ್ಮ, ಜಾತಿ ಯಾವುದೇ ಆದರೂ ಆ ತತ್ತ್ವವನ್ನು ಉಸಿರಾಗಿಸಿಕೊಂಡು, ಅದನ್ನು ಕೊಟ್ಟ ವ್ಯಕ್ತಿಯನ್ನು ಗುರುವೆಂದು ಸ್ವೀಕರಿಸಿದರು. ಆ ಗುರುವಿಗೆ ನೇಮದಿಂದ ನಡೆದುಕೊಳ್ಳತೊಡಗಿದರು. ಆತ ಸತ್ತಾಗ ಅವನ ಸಮಾಧಿಯು ಗದ್ದುಗೆಯೂ ಆಗಿ ಮಾರ್ಪಟ್ಟಿತು. ಹೀಗೆ ದೈವದ ಗೈರು ಹಾಜರಿಯಲ್ಲಿ ತತ್ತ್ವಕೇಂದ್ರಿತವಾದ ಗುರು ಶಿಷ್ಯರ ಸಂಬಂಧವು ಅಂತಿಮವಾಗಿ ಪಾರಲೌಕಿಕ ಬಯಕೆಗೆ ದೂರವಾದ 'ಇಹ'ದ ಬದುಕಿಗೆ ಮಾತ್ರ ಅಭಿಮುಖವಾಯಿತು. ಇಂತಹ ಲೌಕಿಕ ಧರ್ಮವು ಭೀತಿ ದೂರವಾದ ಪ್ರೀತಿಯನ್ನು ತೋರಿದ್ದರಿಂದ, ಆಚಾರಕ್ಕಿಂತ ವಿಚಾರವನ್ನು ಕೋರಿದ್ದರಿಂದ ದೈವ ಮತ್ತು ದೇವಾಲಯಗಳ ಕಡೆಗಣನೆಯಲ್ಲಿ ದೇಹ ಮತ್ತು ಬದುಕನ್ನು ಪವಿತ್ರೀಕರಿಸಿದ್ದರಿಂದ ಜನರಿಗೆ ಹೆಚ್ಚು ಇಷ್ಟವಾಯಿತು. ಇಲ್ಲಿ ಜಾತಿ-ಮತ-ಲಿಂಗ ಭೇದಗಳು ಇಲ್ಲವಾಯಿತು. ದೈವವೇ ತಾನಾದ ಜೀವಾತ್ಮನ ಬದುಕಿನಲ್ಲಿ ಸಂಚಲನೆಯುಂಟಾಗಿ ಅದನ್ನು ಪ್ರಾಪ್ತವಾಗಿಸಿದ ಗುರುವು ಜನಪದೀಕರಣಕ್ಕೂ ಒಳಗಾಗುವುದು ಸಾಧ್ಯವಾಯಿತು. ಆದ್ದರಿಂದಲೇ ಅನೇಕ ಸೂಫೀ ಗುರುಗಳು ದೈವಗಳಾಗಿ, ಅವರ ಗದ್ದುಗೆಗಳು ಎಲ್ಲ ಮತಧರ್ಮೀಯರ ತೀರ್ಥ ಕ್ಷೇತ್ರಗಳಾಗಿ ಮಾರ್ಪಟ್ಟಿರುವುದು. ಇದು ಕೇವಲ ಕರ್ನಾಟಕದ ಚಿತ್ರವಲ್ಲ; ಭಾರತದ್ದು ಕೂಡ.

ಇಂತಹ ಸೂಫೀ ಪಂಥದ ಅಸ್ತಿತ್ವ ಮತ್ತು ಚಿಂತನೆಯ ಸ್ವರೂಪವನ್ನು ಅರಿಯಲು ಇಸ್ಲಾಂಗೆ ತಾನು ಚರಿತ್ರೆಯ ಘಟ್ಟದಲ್ಲಿ ಮುಖಾಮುಖಿಯಾಗುತ್ತಾ ಬಂದ ಬಗೆಯನ್ನು ನಾಲ್ಕು ಮಾತುಗಳಲ್ಲಾದರೂ ತಾತ್ವಿಕವಾಗಿ ವಿವರಿಸಿಕೊಳ್ಳಬೇಕು.

ಸಿದ್ಧಲಿಂಗ ಎಂಬ ಸೂಫೀ ಕವಿಯೊಬ್ಬ ನಾ-ನೀ ಭೇದ ಅಳಿದುಹೋಗುವ ಅನುಭಾವವನ್ನು ಸಿದ್ಧಿಸಿಕೊಳ್ಳಬೇಕು ಎಂದು ತನ್ನ ಒಂದು ಪದ್ಯದಲ್ಲಿ ಆಶಿಸುತ್ತಾನೆ. ಸೂಫೀ ತತ್ವವು ಅದ್ವೈತ ರೂಪದ್ದಾಗಿದೆ ಎಂಬುದನ್ನು

ಇದು ಧ್ವನಿಸುತ್ತದೆ. ಇದನ್ನು ಸಾಧಿಸಿಕೊಳ್ಳುವುದಕ್ಕೆ ಗುರು ಮತ್ತು ಅವನ ಮಾರ್ಗದರ್ಶನದ ಅಗತ್ಯವಿದೆ ಎಂದು ಈ ಪಂಥವು ನಂಬುತ್ತದೆ. ಅದಕ್ಕಾಗಿ ಗುರು ತನ್ನ ಶಿಷ್ಯನಿಗೆ ದೀಕ್ಷೆ ಕೊಡುತ್ತಾನೆ. ಅನುಭಾವಿ ಪಂಥಗಳಲ್ಲಿ ಸಾಮಾನ್ಯವಾಗಿ ಗುರು ಶಿಷ್ಯನ ತಲೆಯ ಮೇಲೆ ಕೈಯಿಟ್ಟು ಅವನಿಂದ ಕೆಲವು ವಚನಗಳನ್ನು ಪಡೆಯುತ್ತಾನೆ. ಇದನ್ನು 'ಹಸ್ತಮಸ್ತಕ' ಎನ್ನುತ್ತಾರೆ. ಇಂತಹ ದೀಕ್ಷೆಯು ಶರಣರಲ್ಲಿ ಲಿಂಗಧಾರಣೆಯ ರೂಪದಲ್ಲಿದ್ದರೆ, ಸೂಫೀಗಳಲ್ಲಿ ಅದು ಗುರು ಶಿಷ್ಯನ ಕೈಮೇಲೆ ತನ್ನ ಕೈಯನ್ನಿಟ್ಟು, ಅವನಿಂದ ಕೆಲವು ವಚನಗಳನ್ನು ಪಡೆಯುವ ರೂಪದಲ್ಲಿರುತ್ತದೆ. ಇದರ ಮೂಲಕ ವ್ಯಕ್ತವಾಗುವ ಅಂಶವೇನೆಂದರೆ, ಸೂಫೀ ಪಂಥವು ಗುರು-ಶಿಷ್ಯ ಪರಂಪರೆಯದ್ದಾಗಿದೆ ಎಂಬುದು.

ಇಂಥ ಪಂಥದಲ್ಲಿ ಗುರುವೇ ಅಂತಿಮವಾಗಿ, ಲಿಂಗಾಂಗ ಸಾಮರಸ್ಯ ಅಥವಾ ಪ್ರಾಣಲಿಂಗವನ್ನು ದೇಹದಲ್ಲಿ ಧರಿಸಬೇಕೆಂಬ ಆಶಯವಿರುವಾಗ ಜೀವಾತ್ಮನೇ ಅಂತಿಮವಾಗಿ ಭಗವಂತನೂ ಆಗಿ ಮಾರ್ಪಡುತ್ತಾನೆ. ಹಾಗಾಗಿ ಸೂಫೀ ಪಂಥದಲ್ಲಿ ಸಾಂಸ್ಥಿಕ ದೈವಗಳಿಗೆ ಅಥವಾ ಜೀವಾತ್ಮನಿಂದ ಹೊರತಾದ ದೈವಕ್ಕೆ ಅಸ್ತಿತ್ವವಿಲ್ಲ. ಹಾಗಾಗಿ ಇಲ್ಲಿ ದೇಹವು ದೇವಾಲಯವೂ ಅನುಭಾವವು ದೈವವೂ ಆಗಿ ಮಾರ್ಪಾಡಾದಾಗ ಇಂತಹ ಅವಸ್ಥೆಯನ್ನು ಪಡೆಯಲು ಶಿಷ್ಯನಿಗೆ ಸಾಧ್ಯ. ಇವನು ಕ್ರಮೇಣ ಅನೇಕರಿಗೆ ದೀಕ್ಷೆ ಕೊಡುತ್ತಾಹೋದಾಗ ಅವನು ಸಹ ಗುರುವಾಗಿ, ಅವನ ಸಮಾಧಿಯು ಗದ್ದುಗೆಯು ಆಗಿ ಮಾರ್ಪಡುತ್ತದೆ. ಇಂತಹ ಗದ್ದುಗೆಗಳು ಬೀದರ್, ಬಿಜಾಪುರ, ಗುಲ್ಬರ್ಗ, ಶಿರಹಟ್ಟಿ, ಸಾವಳಗಿ, ಬಾಬಾಬುಡನ್ ಗಿರಿ ಮೊದಲಾದ ಕರ್ನಾಟಕದ ಅನೇಕ ತಾಣಗಳಲ್ಲಿವೆ.

ಇಲ್ಲಿ ಗುರುಗಳು ಶಿಷ್ಯರನ್ನು, ಜನರನ್ನು ಅರಸುತ್ತಾ ಅವರ ನಡುವೆ ಹೋಗುತ್ತಾರೆ; ಅವರ ನಡುವೆ ಬದುಕುತ್ತಾರೆ. ಅವರ ಕಷ್ಟ-ಸುಖಗಳಲ್ಲಿ ಬೆರೆತು ಆಪ್ತರೂ ಆಗುತ್ತಾರೆ. ಆ ನೆಲೆಯಲ್ಲಿ ಹಾಡು, ಸಂಗೀತ, ಉಪದೇಶ ಮೊದಲಾದ ಅನೇಕ ಅಭಿವ್ಯಕ್ತಿಗಳು ಸಾಧ್ಯವಾಗುತ್ತವೆ. ಹೀಗೆ ಜನರ ನಡುವೆ ತಮ್ಮ ಅಸ್ತಿತ್ವವನ್ನು ಪ್ರೇಮದ ಮೂಲದಲ್ಲಿ ಏರ್ಪಡಿಸಿಕೊಂಡಾಗ ಅಲ್ಲಿ ಸಹಜವಾಗಿ ಜಾತಿ, ಧರ್ಮಗಳ ಸೂತಕ ಕಳಚಿಕೊಳ್ಳಲು ಚಿಂತಿಸದ ಜನರನೇಕರು ಸೇರುತ್ತಾರೆ. ಅವರ ತತ್ವದ ಬೆಳಕಿನಲ್ಲೊಂದಾಗುತ್ತಾರೆ. ಅವರಲ್ಲಿ ಕೆಲವರು ತೀವ್ರ ನಿಷ್ಠರೂ ಅನುಯಾಯಿಗಳೂ ಆಗುತ್ತಾರೆ. ಹಾಗಾಗಿಯೇ ಸೂಫೀ ಪಂಥವೆಂಬುದು ಯಾವುದೋ ಒಂದು ನಿರ್ದಿಷ್ಟ ಧರ್ಮ ಅಥವಾ ಜಾತಿಗಳಿಗೆ ಸೀಮಿತವಾಗದ ಜಾತ್ಯತೀತ ಪಂಥವಾಗಿ ನೆಲೆಯನ್ನು ಪಡುವುದು. ಇಲ್ಲಿ ಕೋಮು ಸಾಮರಸ್ಯವಿರಬಹುದು. ಆದರೆ ಅದು ಅತ್ಯಂತ ಬಾಲಿಶ ಸಂಗತಿ. ಕಾರಣ, ಇಲ್ಲಿ ಹಲವು ನದಿಗಳ ನೀರು ಒಂದೆಡೆ ಬೆರೆತಿರುವುದು ಕೋಮು ಸಾಮರಸ್ಯದ ಕಾರಣಕ್ಕಾಗಿ ಅಲ್ಲ. ಇವತ್ತಿನ ಚಾರಿತ್ರಿಕ ಒತ್ತಡದ ಹಿನ್ನೆಲೆಯಲ್ಲಿ ಅದನ್ನು ಗುರುತಿಸುವುದು ನಮಗೆ ಅನಿವಾರ್ಯವಿರಬಹುದು. ಆದರೆ ಆ ಒಂದೇ ಆಶಯದಿಂದ ನಾವು ಈ ಸಂಗಮವನ್ನು ಗಮನಿಸಿದರೆ ಅದನ್ನು ತಾತ್ವಿಕವಾಗಿ ಭ್ರಷ್ಟಗೊಳಿಸಿದಂತೆ ಆಗುತ್ತದೆ.

ಈ ಹಿನ್ನೆಲೆಯಲ್ಲಿ ಸೂಫಿಸಂ ಅಥವಾ ಸೂಫೀಪಂಥವೆಂಬುದು ತತ್ವಕೇಂದ್ರಿತ ನೆಲೆಯಲ್ಲಿ ಒಂದಾದ ಯಾವುದೇ ಸಾಮಾಜಿಕ ಮೂಲದ ತಾತ್ವಿಕರ ಒಂದು ಸಮುದಾಯವಾಗಿದೆ. ಇದಕ್ಕೆ ತತ್ವ ಮತ್ತು ಜನ ಮುಖ್ಯ. ಬದಲಿಗೆ ಸಾಂಸ್ಥಿಕ ಧರ್ಮಗಳ ಪ್ರತೀಕಗಳಾದ ಮಸೀದಿ, ದೇವಾಲಯಗಳಾಗಲೀ ಮೌಲವಿ, ಪುರೋಹಿತರಾಗಲೀ ಮುಖ್ಯವಲ್ಲ. ಅಂತೆಯೇ ದೈವ ಕೂಡ.


ಒಂದು ಬಗೆಯ ಸೂಫೀ ಕುಣಿತ

ಹೀಗೆ ಗುರುವಿನ ಮಾರ್ಗದರ್ಶನದಲ್ಲಿ ಅನುಭಾವೀ ಪಂಥವಾಗಿ ಬೆಳೆಯತೊಡಗಿದ ಸೂಫೀಪಂಥವು ತಾತ್ವಿಕವಾಗಿ ಗಟ್ಟಿಯಾದ ವ್ಯಕ್ತಿಯನ್ನೇ ದೈವವಾಗಿಸುವ ಅಹಂಕಾರ ಮತ್ತು ವ್ಯಕ್ತಿ ವಾದವನ್ನು ಪ್ರಕಟಿಸುತ್ತದೆ. ಇಲ್ಲಿ ವ್ಯಕ್ತಿಯ ತಾತ್ವಿಕ ಬದುಕಿನ ಹುಡುಕಾಟವಿದೆ. ಇದನ್ನು ಸಾಧ್ಯವಾಗಿಸಬೇಕೆಂಬ ಹಂಬಲದಲ್ಲಿ ಸೂಫೀಗಳು ಪ್ರೀತಿಯಿಂದ ಜನರ ನಡುವೆ ತಮ್ಮ ತತ್ವಗಳನ್ನು ಪ್ರಸಾರ ಮಾಡಿದರು; ಮತಾಂತರಕ್ಕಿಳಿಯಲಿಲ್ಲ. ಅದರ ಕಲ್ಪನೆ ಕೂಡ ಇದಕ್ಕೆ ದೂರ.

ಹೀಗೆ ವಿಶಿಷ್ಟ ತತ್ವವಾಗಿ ರೂಪು ಪಡೆದ ಸೂಫೀವಾದವು ಅನೇಕ ಅಂಶಗಳಲ್ಲಿ ಇಸ್ಲಾಂ ತತ್ವಕ್ಕೂ ಅದರ ಆಚರಣಾತ್ಮಕ ಸ್ವರೂಪಕ್ಕೂ ಭಿನ್ನವಾಗಿತ್ತು. ಅವುಗಳೆಂದರೆ, ಇಸ್ಲಾಂ ತತ್ವವು ದೇವರಿಗಲ್ಲದೆ ಯಾರಿಗೂ ತಲೆ ಬಾಗಿಸಬಾರದು ಎಂದು ಹೇಳಿದರೆ, ಇದು ಗುರುವಿಗಲ್ಲದೆ ಇತರೆ ಯಾರಿಗೂ ತಲೆತಗ್ಗಿಸಬಾರದು ಎಂದು ಹೇಳುತ್ತದೆ. ಇಲ್ಲಿ ಮೌಲವಿಯಾಗಲೀ ಪ್ರವಾದಿಯಾಗಲೀ ನಗಣ್ಯರಾಗುತ್ತಾರೆ. ಅಂತೆಯೇ ವ್ಯಕ್ತಿಯೇ ಅಂತಿಮವಾಗಿ ದೈವವಾಗುವ ಅಹಂಕಾರ ಮತ್ತು ವ್ಯಕ್ತವಾದವು ಭಗವಂತನೇ ಅಂತಿಮ ಮತ್ತು ಅವನನ್ನು ಸೇರುವ ಗುರಿ ನಮಗೆ ಮುಖ್ಯ ಎನ್ನುವ ಇಸ್ಲಾಂಗೆ ಸಹಜವಾಗಿಯೇ ವಿರೋಧಿಯಾಗುತ್ತದೆ. ಇಸ್ಲಾಂ ಧರ್ಮವು ಚರಿತ್ರೆಯ ಅನೇಕ ಸಂದರ್ಭಗಳಲ್ಲಿ ಮತಾಂತರಕ್ಕೂ ಎಳೆಸಿದೆ. ಇಲ್ಲಿ ಅದರ ವಕ್ತಾರರ ವರ್ತನೆಯನ್ನು ಮಾತ್ರ ಗಮನಿಸಬೇಕು. ಆದರೆ ಸೂಫೀಪಂಥವು ಈಗಾಗಲೇ ಹೇಳಿರುವಂತೆ ಜನರ ನಡುವೆ ಅನುಭಾವದ ಪ್ರಸಾರದಲ್ಲಿ ತೊಡಗಿದ್ದವೇ ಹೊರತು ಒತ್ತಾಯದಲ್ಲಿ ಅಲ್ಲ.

ಮತಾಂತರವು ಭೀತಿ ಮೂಲದ್ದೂ ಹೌದು. ಅದರ ಸಾಂಸ್ಥಿಕ ಧರ್ಮಕ್ಕೆ ನಡೆದುಕೊಳ್ಳುವುದು ಅನೇಕ ಸಾರಿ ಒತ್ತಾಯ ಮೂಲದ್ದೂ ಹೌದು. ಆದರೆ ಸೂಫಿಗಳ ತತ್ವ ಪ್ರಸಾರ ಪ್ರೀತಿ ಮೂಲದ್ದು ಮತ್ತು ಅದರ ಆಚರಣೆಯು ಅನೈಚ್ಛಿಕವಾದುದೂ ಆಗಿದೆ. ಇಸ್ಲಾಂ ಒಂದು ನಿರ್ದಿಷ್ಟ ತತ್ವ-ಪಂಥದ ಸಾಮಾಜಿಕ ಚೌಕಟ್ಟು. ಆದರೆ ಸೂಫೀ ಪಂಥಕ್ಕೆ ಅಂತಹ ಚೌಕಟ್ಟು ಇಲ್ಲ. ಇಲ್ಲಿ ತತ್ವ ಮಾತ್ರದ ಕಾರಣಕ್ಕಾಗಿ ಗುರು-ಶಿಷ್ಯರಾಗಿ ಬದುಕನ್ನು ಅನುಭವಿಸುವ ಅನೇಕರು ಕಂಡುಬರುತ್ತಾರೆ. ಅವರಲ್ಲಿ ಸಾವಳಗಿ ಶಿವಲಿಂಗ-ಬಂದೇನವಾಜ್, ನಾಸಿರುದ್ದಿನ್-ಶಿವಲಿಂಗ, ಬಂದೇನವಾಜ್-ಶರಣ ಬಸವೇಶ್ವರ, ಕಡಕೋಳ ಮಡಿವಾಳಪ್ಪ-ಚನ್ನೂರ ಜಲಾಲಸಾಬ ಮೊದಲಾದವರು ಮುಖ್ಯರಾಗುತ್ತಾರೆ. ಅಂತೆಯೇ ಇಸ್ಲಾಂ ದ್ವೈತಿಯಾದರೆ, ಸೂಫೀತತ್ವವು ಅದ್ವೈತಿಯಾಗುತ್ತದೆ. ಇಂತಹ ಇಸ್ಲಾಂನಲ್ಲಿ ಮೌಲವಿಗಳು ದೈವಗಳಾಗುವುದಿಲ್ಲ; ಆದರೆ ಸೂಫೀ ಗುರುಗಳು ಜನಪದೀಕರಣಕ್ಕೆ ಒಳಗಾಗಿ ಅವರ ಗದ್ದುಗೆಗಳ ರೂಪದಲ್ಲಿ ದೈವಗಳೂ ಆಗಿ ಮಾರ್ಪಟ್ಟಿದ್ದಾರೆ. ಮೌಲವಿಗಳು ಜನರ ಬಳಿ ಹೋಗುವುದಿಲ್ಲ; ಜನರೇ ಅವರ ಬಳಿಗೆ ಇಷ್ಟವಿದ್ದೋ ಅನಿವಾರ್ಯವಾಗಿಯೋ ನಿಗದಿತ ಸಮಯಕ್ಕೆ ಅನುಗುಣವಾಗಿ ಹೋಗಬೇಕಾಗುತ್ತದೆ. ಆದರೆ ಸೂಫೀ ಗುರುಗಳು ಸ್ವತಃ ಜನರ ನಡುವೆ ಹೋಗುತ್ತಾರೆ. ಅವರನ್ನು ಮತೀಯ ಚೌಕಟ್ಟಿನ ಆಚೆಗೆ ಕಂಡು ಪ್ರೀತಿಯನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಆದ್ದರಿಂದಲೇ ಎಂತಹ ಮಹಮ್ಮದೀಯನಿಗೂ ಮೌಲವಿಗಿಂತ ಸೂಫಿಯೇ ಹೆಚ್ಚು ಆಪ್ತನಾಗುತ್ತಾನೆ. ಇಂತಹ ಆಪ್ತತೆ ವಿಭಿನ್ನ ಧಾರ್ಮಿಕರಿಗೂ ಸಾಧ್ಯವಾಗುತ್ತದೆ ಆದ್ದರಿಂದಲೇ ಸೂಫಿಗಳು ಅಧಿಕಾರ ಕೇಂದ್ರಗಳಾಗಿ ಹಂಚಿಹೋಗದೆ, 'ಜನ'ರಾಗಿಯೇ ಬದುಕುವುದು. ಈ ನೆಲೆಯಲ್ಲಿ ಬಹುಪಾಲು ಸೂಫಿಗಳು ಸಂತರೂ ಫಕೀರರೂ ಧರ್ಮದರ್ಶಿಗಳೂ ಆಗಿ ದೀನರಿಗಿಂತ ದೀನರಾಗಿ ಕಂಡುಬಿಡುತ್ತಾರೆ. ಆದರೆ ಕರ್ನಾಟಕದ ಇವತ್ತಿನ ಅನೇಕ ಸೂಫೀ ತಾಣಗಳು ಅಧಿಕಾರ ಮತ್ತು ಸಂಪತ್ತಿನ ಕೇಂದ್ರಗಳಾಗಿ ಸಹ ಕಾರ್ಯ ನಿರ್ವಹಿಸುತ್ತಿವೆ ಎಂಬ ವಾಸ್ತವವನ್ನು ಮರೆಯಲಿಕ್ಕಾಗುವುದಿಲ್ಲ. ಅಲ್ಲಿ ಅನೇಕ ತಾಣಗಳನ್ನು ಪ್ರಮಾಣದಲ್ಲಿ ವ್ಯತ್ಯಾಸವನ್ನು ಮಾಡಿಕೊಳ್ಳುತ್ತಾ ಗುರುತಿಸಿಕೊಳ್ಳಬಹುದಾಗಿದೆ. ಅಂತಹ ತಾಣ ಮತ್ತು ಆನುವಂಶಿಕ ಸೂಫೀಗಳ ಬಗೆಗಿನ ಮಾತು ಬೇರೆ. ಆದರೂ ಇವು ಸಾಂಸ್ಥಿಕ ಧರ್ಮಗಳಷ್ಟು ಕಟುವೂ ಜನರ ವಿದೂರವೂ ಆಗಿಲ್ಲ. ಅದನ್ನು ಇಲ್ಲಿ ವರ್ಷಕ್ಕೊಮ್ಮೆ ನಡೆಯುವ ಉರುಸ್‌ಗಳಲ್ಲಿ ವಿಶೇಷವಾಗಿ ಕಾಣಬಹುದು. ಏನೇ ಆದರೂ ಯಾವುದೇ ಧಾರ್ಮಿಕನಿಗೂ ಇಂತಹ ಸ್ಥಳಗಳಲ್ಲಿ ಆಗುವ ಪ್ರವೇಶಾನುಭವವು ಸಾಂಸ್ಥಿಕ ಧಾರ್ಮಿಕ ಕೇಂದ್ರಗಳಾದ ದೇವಾಲಯ, ಮಸೀದಿಗಳಲ್ಲಿ ಆಗುವುದಿಲ್ಲ. ಪ್ರೇಯಸಿಯ ಮನೆಯನ್ನು ಹೊಕ್ಕ ಅನುಭವ ಮೊದಲನೆಯದಾದರೆ ಜೈಲನ್ನು ಹೊಕ್ಕ ಅನುಭವ ಎರಡನೆಯದಾಗಿದೆ.

ಹೀಗೆ ಅತ್ಯಂತ ಮಾನವೀಯ ಪ್ರೇಮವನ್ನುಳ್ಳ ಸೂಫೀವಾದವು, ಕೆಲವು ಮೂಲಭೂತವಾದಿಗಳ ಪ್ರಭುತ್ವದ ಹಿಡಿತಕ್ಕೆ ಸಿಕ್ಕಿ ಕರ್ಮಠವೂ ಸಂಪ್ರದಾಯ ಶರಣ್ಯವೂ ಕೆಲವೊಮ್ಮೆ ಆಗುತ್ತಾ ಬಂದ ಇಸ್ಲಾಂನ ವಿರುದ್ಧ ಸೈದ್ಧಾಂತಿಕ ಸಮರವನ್ನು ಸಾರುತ್ತಾ ಬಂದಿದೆ. ಅಂತಹ ನೆಲೆಯಲ್ಲಿ ಸಾಂಸ್ಥಿಕ ರೂಪೀ ಇಸ್ಲಾಂನ ಮೂಲಭೂತ ತತ್ವಗಳಾದ ನಮಾಜು, ಉಪವಾಸ, ಝಕಾತ್ ಮತ್ತು ಹಜ್‌ಗಳನ್ನು ಯಾವುದೇ ಪರಿಗಣನೆಗೆ ಒಳಪಡಿಸುವುದಿಲ್ಲ. ಕಾರಣ, ಉಪವಾಸವೆಂಬುದು ವ್ರತದ ರೂಪದಲ್ಲಿ ಕಾಣುವ ಹೊಟ್ಟೆ ತುಂಬಿದವರ ಚೇಷ್ಟೆ ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಈ ನೆಲೆಯಲ್ಲಿ ನಮಾಜನ್ನು ಇಸ್ಲಾಂನ ಕುರಿತ

೫೧ನೇ ಪುಟಕ್ಕೆ

# ಐನ್‌ಸ್ಟೈನ್ ಮತ್ತು ಸಮಕಾಲೀನ ಭೌತವಿಜ್ಞಾನಿಗಳು

ಜಿ. ಟಿ. ನಾರಾಯಣರಾವ್


ಆಲ್ಬರ್ಟ್ ಐನ್‌ಸ್ಟೈನ್


ಮ್ಯಾಕ್ಸ್ ಪ್ಲಾಂಕ್


ನೀಲ್ಸ್ ಬೋರ್

**೧೯೦೫ರಲ್ಲಿ ಅಂದಿಗೆ ವಿಜ್ಞಾನ ಪ್ರಪಂಚ ಕುರಿತಂತೆ ಪೂರ್ತಿ ಅನಾಮಧೇಯರಾಗಿದ್ದ ಆಲ್ಬರ್ಟ್ ಐನ್‌ಸ್ಟೈನ್ ಭೌತವಿಜ್ಞಾನದಲ್ಲಿ ತೀರ ಹೊಸತಾದ ಒಂದು ಸಿದ್ಧಾಂತ ಮಂಡಿಸಿದರು : ವಿಶೇಷ ಸಾಪೇಕ್ಷತಾ ಸಿದ್ಧಾಂತ. $E = mc^2$ ಎಂಬ ನವಯುಗ ಪ್ರವರ್ತಕ ಸಮೀಕರಣ ಇದರ ಒಂದು ಪ್ರಮುಖ ಅಂಗ. ಎಂದೇ ೧೯೦೫-೨೦೦೫ ಅವಧಿಯನ್ನು ಐನ್‌ಸ್ಟೈನ್ ಶತಮಾನವೆಂದು ಹೆಸರಿಸಿ ೨೦೦೫ನ್ನು ಅಂತರರಾಷ್ಟ್ರೀಯ ಭೌತವಿಜ್ಞಾನ ವರ್ಷವೆಂದು ಆಚರಿಸಲಾಗುತ್ತಿದೆ. ೧೯೦೫ ಆಧುನಿಕ ಭೌತವಿಜ್ಞಾನದ ಪ್ರವೇಶವರ್ಷ, ಅಂತೆಯೇ ಭೌತವಿಜ್ಞಾನದ ವಿಕಾಸದಲ್ಲಿ ಅಭಿಜಾತ ಭೌತವಿಜ್ಞಾನದಿಂದ ಮುಂದಿನ ಮಜಲು ಕೂಡ.**

## ಆಧುನಿಕ ಭೌತವಿಜ್ಞಾನದ ತ್ರಿಮೂರ್ತಿಗಳು

೧೯೦೫ರಲ್ಲಿ ಪ್ರಕಟವಾದ ವಿಶೇಷ ಸಾಪೇಕ್ಷತಾ ಸಿದ್ಧಾಂತ ಮತ್ತು ೧೯೧೫ರಲ್ಲಿ ಬೆಳಕು ಕಂಡ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತ ಐನ್‌ಸ್ಟೈನರ ವಿಶಿಷ್ಟ ಸೃಷ್ಟಿಗಳು ನಿಜ. ಇವು ಭೌತವಿಜ್ಞಾನದ ಅನುಸ್ಯೂತ ಪ್ರವಾಹದಲ್ಲಿ ಪ್ರಮುಖ ಪರ್ವಬಿಂದುಗಳು ಎಂಬುದು ಕೂಡ ನಿಜ. ಈ ಆವಿಷ್ಕಾರಗಳು ಅದರ ವಿಕಾಸಪಥದಲ್ಲಿ ಘಟಿಸಿದ ನಾಲ್ಕನೆಯ ಕ್ರಾಂತಿ. ಇದರಲ್ಲಿ ಮುಖ್ಯವಾಗಿ ಇತರ ಇಬ್ಬರು ಸಮಕಾಲೀನ ಯುಗಪುರುಷರ ಪಾತ್ರಗಳೂ ಇವೆ : ಪ್ಲಾಂಕ್ ಮತ್ತು ಬೋರ್.

ಅಂದ ಹಾಗೆ ಮೊದಲ ಮೂರು ಕ್ರಾಂತಿಗಳಿವು. ಘರ್ಷಣೆಯಿಂದ ಶಾಖ, ಶಾಖದಿಂದ ಬೆಂಕಿ ಮತ್ತು ಬೆಂಕಿಯಿಂದ ಜೀವನ ಸೌಕರ್ಯಗಳ ನಿರ್ಮಾಣ ಎನ್ನುವ ಸರಳ ಸೂತ್ರವನ್ನು ಪ್ರಾಗೈತಿಹಾಸಿಕ ಆದಿಮಾನವ ಅನುಭವಾಧಾರಿತವಾಗಿ ಕಂಡುಕೊಂಡಾಗ ಮೊದಲ ಕ್ರಾಂತಿ ಸಂಭವಿಸಿತು. ಎರಡನೆಯದು ಪ್ರಕಟವಾದದ್ದು ಕ್ರಿಸ್ತಪೂರ್ವ ದಿನಗಳಂದು ಆರ್ಕಿಮಿಡೀಸ್ ಸನ್ನೆಕೋಲಿನ ತತ್ತ್ವವನ್ನು ಆವಿಷ್ಕರಿಸಿದಾಗ. ನಾಲ್ಕು ಆಳುಗಳಿಂದಲೂ ಅಲ್ಲಾಡಿಸಲಾಗದ ಕಲ್ಲಿನ ಚಪ್ಪಡಿಯನ್ನು ಕೇವಲ ಒಬ್ಬ ಮೀಟುಸಲಾಕಿಯ ನೆರವಿನಿಂದ ಜರುಗಿಸುವುದರ ಹಿನ್ನೆಲೆಯಲ್ಲಿ ಇಂದಿಗೂ ಈ ತತ್ತ್ವದ ವಾಸ್ತವ ಅನ್ವಯ ಕಾಣುತ್ತೇವೆ. ಮುಂದೆ ೧೭-೧೮ನೆಯ ಶತಮಾನಗಳಲ್ಲಿ ಐಸಾಕ್ ನ್ಯೂಟನ್ ವಿಶ್ವಗುರುತ್ವಾಕರ್ಷಣ ನಿಯಮವನ್ನು ಅಂತಃಸ್ಫೂರ್ತಿಯಿಂದ ದರ್ಶಿಸಿ ಗಣಿತಪರಿಭಾಷೆಯಲ್ಲಿ ಅದಕ್ಕೆ ಖಚಿತ ನಿರೂಪಣೆ ಒದಗಿಸಿದಾಗ ಮೂರನೆಯ ಮಹಾಕ್ರಾಂತಿ ಪ್ರಜ್ವಲಿಸಿತು. ನಾಲ್ಕನೆಯದೇ ಸಾಪೇಕ್ಷತಾ ಸಿದ್ಧಾಂತಗಳ ರಂಗಪ್ರವೇಶ. ಅಲ್ಲಿಯ ತನಕದ ಭೌತ ವಿಜ್ಞಾನವನ್ನು ಅಭಿಜಾತ ಭೌತವಿಜ್ಞಾನವೆಂದೂ ತದನಂತರದ್ದನ್ನು ಆಧುನಿಕ ಭೌತವಿಜ್ಞಾನವೆಂದೂ ಕರೆಯುವುದು ವಾಡಿಕೆ.

ಹೀಗೆ, ಭೌತವಿಜ್ಞಾನ ಅಭಿಜಾತದಿಂದ ಆಧುನಿಕದ ಮಜಲಿಗೇರಲು ಕಾರಣರಾದವರು ಮೂವರು ಸಮಕಾಲೀನ ಶಕಪುರುಷರು. ಕಾಲಾನುಕ್ರಮದಲ್ಲಿ ಅವರು ಮ್ಯಾಕ್ಸ್ ಪ್ಲಾಂಕ್ (೧೮೫೮-೧೯೪೭), ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಮತ್ತು ನೀಲ್ಸ್ ಬೋರ್ (೧೮೮೫-೧೯೬೨). ಇವರ ಕೊಡುಗೆಗಳು ಪರಸ್ಪರ ಪೂರಕ ಪೋಷಕಗಳಾಗಿವೆ ಮತ್ತು ೨೦ನೆಯ ಶತಮಾನದಲ್ಲಿಯ ಸಮಸ್ತ ವೈಜ್ಞಾನಿಕ ಪ್ರಗತಿಗೆ ಗಣಿತದ ಸುಭದ್ರ ತಳಪಾಯ ಹಾಸಿವೆ. ಈಗ ಈ ಒಬ್ಬೊಬ್ಬರ ಕೊಡುಗೆ ಬಗ್ಗೆ ಸಂಕ್ಷಿಪ್ತ ವಿವರಣೆ.

## ತ್ರಿಮೂರ್ತಿಗಳ ಕೊಡುಗೆ

ಪ್ಲಾಂಕ್ ೧೯೦೦ರಲ್ಲಿ ಶಕಲಸಿದ್ಧಾಂತವನ್ನು (Quantum theory) ಮಂಡಿಸಿದರು. ಶಕ್ತಿ ತರಂಗರೂಪಿಯೆಂಬುದು ಅಲ್ಲಿಯ ತನಕದ ಅಂಗೀಕೃತ ಭಾವನೆ. ಬಹುತೇಕ ಎಲ್ಲ ಸಂಶೋಧನೆ ಮತ್ತು ಪ್ರಯೋಗಗಳಲ್ಲಿ ಇದು ಸಾಧುವೂ ಆಗಿತ್ತು. ಆದರೆ ಈಗ ಶಕಲಸಿದ್ಧಾಂತದ ಪ್ರಕಾರ ಅದು ಕಣರೂಪಿಯೂ ಹೌದು ಎಂಬುದು ಸಿದ್ಧವಾಯಿತು. ಇದರ ಮೂಲಸಮೀಕರಣ : $E = vh$. ಇಲ್ಲಿ $E$ ಶಕ್ತಿಯನ್ನೂ $v$ ಇದರ ಆವೃತ್ತಿಯನ್ನೂ $h$ ವಿಶಿಷ್ಟ ಸ್ಥಿರಾಂಕವನ್ನೂ ಸೂಚಿಸುತ್ತವೆ. ಒಂದು ಉದಾಹರಣೆ. ಪ್ರಕಾಶದೂಲದ ನೆರವಿನಿಂದ ನಮ್ಮ ಎದೆಗೂಡಿನ ಚಿತ್ರಣ ಪಡೆಯಲಾಗುವುದಿಲ್ಲ ಎಂದು ಗೊತ್ತಿದೆ. ಆದರೆ ಪ್ರಕಾಶದ ಇನ್ನೊಂದು ರೂಪವಾಗಿರುವ ಎಕ್ಸ್‌ಕಿರಣಗಳ ಬಳಕೆಯಿಂದ ಅದನ್ನು ಪಡೆಯಬಹುದೆಂದೂ ತಿಳಿದಿದೆ. ಕಾರಣವೇನು ? ಎಕ್ಸ್‌ಕಿರಣಗಳ ಆವೃತ್ತಿ ಪ್ರಕಾಶಕಿರಣಗಳದ್ದಕ್ಕಿಂತ ಅಧಿಕ, ಆದ್ದರಿಂದ ಎಕ್ಸ್‌ಕಿರಣಗಳಲ್ಲಿ ಅಧಿಕ ಶಕ್ತಿ ನಿಹಿತವಾಗಿರುತ್ತದೆ, ಎಂದೇ ಇವು ಒಡಲಿನ ಅಡ್ಡ ನೇರ ಸಾಗಬಲ್ಲವು. ಪ್ರಕಾಶಕಿರಣಗಳಲ್ಲಿ ಇಷ್ಟು ಶಕ್ತಿ ನಿಹಿತವಾಗಿಲ್ಲ.

ಮುಂದೆ ೧೯೦೫ರಲ್ಲಿ ಐನ್‌ಸ್ಟೈನ್ ಸ್ವತಂತ್ರವಾಗಿ ಮಂಡಿಸಿದ ವಿಶೇಷ ಸಾಪೇಕ್ಷತಾ ಸಿದ್ಧಾಂತದಲ್ಲಿ $E = mc^2$ ಎಂಬ ಮೂಲಭೂತ ಸಮೀಕರಣ ನೀಡಿದರು. ಇಲ್ಲಿ $E$ ಶಕ್ತಿಯನ್ನೂ $m$ ದ್ರವ್ಯರಾಶಿ ಅಂದರೆ ವಸ್ತುವನ್ನೂ $c$ ಬೆಳಕಿನ ವೇಗವನ್ನೂ ಸೂಚಿಸುತ್ತವೆ. ಈ ಪುಟ್ಟ ಸರಳ ಸಮೀಕರಣದ ಅರ್ಥ ಮಾತ್ರ ಅಗಾಧ : ವಸ್ತು ಮತ್ತು ಶಕ್ತಿ ವಿಭಿನ್ನವಲ್ಲ, ಒಂದರ ರೂಪಾಂತರ ಇನ್ನೊಂದು ಅಷ್ಟೆ. ಅಂದರೆ ವಿಶ್ವ ಕುರಿತಂತೆ ಶಕ್ತಿಯ ಸ್ಥಾವರರೂಪ ವಸ್ತು, ವಸ್ತುವಿನ ಜಂಗಮ ರೂಪ ಶಕ್ತಿ ಎಂಬ ಸರಳ ಚಿತ್ರಣವನ್ನು ಐನ್‌ಸ್ಟೈನ್ ಕೊಟ್ಟರು. ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂಬ ಸೂಕ್ತಿಯನ್ನು ಈ ದೃಷ್ಟಿಯಿಂದಲೂ ಗಮನಿಸಬಹುದು. ಪರಮಾಣು ಬಾಂಬಿನ ಹಿನ್ನೆಲೆ ತತ್ತ್ವ ಇದೇ ಸಮೀಕರಣ. ಶಕಲ ಮತ್ತು ವಿಶೇಷ ಸಾಪೇಕ್ಷತಾ ಸಿದ್ಧಾಂತಗಳು ಪರಮಾಣುವಿನ ಅದೃಶ್ಯ ಲೋಕದ ಭೌತವೃತ್ತಾಂತ ವಿವರಿಸುವ ಗಣಿತ ಹತ್ಯಾರುಗಳು.

೧೯೧೫ರಲ್ಲಿ ಐನ್‌ಸ್ಟೈನ್ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತವನ್ನು ಪ್ರಕಟಿಸಿದರು. ಇದು ನಕ್ಷತ್ರಗಳ ಅಗಾಧ ಪ್ರಪಂಚದ ಗಣಿತ ವೃತ್ತಾಂತ ತಿಳಿಯಲು ಒದಗಿರುವ ಹತ್ಯಾರು. ಇದರ ಪ್ರಕಾರ ಬಲಿಷ್ಠ ಗುರುತ್ವಾಕರ್ಷಣ ಕ್ಷೇತ್ರದ ಸನಿಹದಲ್ಲಿ ಪ್ರಕಾಶಕಿರಣದ ಪಥ ಆ ಕ್ಷೇತ್ರದತ್ತ ತುಸು ಬಾಗುತ್ತದೆ. ಕಿರಣಪಥ ಪರಿಪೂರ್ಣ ಸರಳರೇಖೆ ಎಂದು ಅಲ್ಲಿಯ ತನಕ ಅಂಗೀಕರಿಸಿ ಯಶಸ್ವೀ ಪ್ರಯೋಗಗಳನ್ನು ನಿರ್ವಹಿಸಿದ್ದ ಭೌತವಿಜ್ಞಾನಿಗಳಿಗೆ ಐನ್‌ಸ್ಟೈನರ ಈ ಸೈದ್ಧಾಂತಿಕ ತೀರ್ಮಾನ ಆಘಾತಪ್ರಾಯವಾಗಿತ್ತು. ಆದರೆ ಇದನ್ನು ಪ್ರಾಯೋಗಿಕವಾಗಿ ತಪಾಸಿಸುವುದು ಹೇಗೆ ? ಕಿರಣದ ಊಹಾತೀತ ವೇಗಕ್ಕೆ – ಸೆಕೆಂಡಿಗೆ ಸುಮಾರು ೩೦೦,೦೦೦ ಕಿಮೀ – ಲಗಾಮುಹಾಕಿ ಬಾಗುವಂತೆ ಮಾಡಬಲ್ಲ ಮತ್ತು ನಮ್ಮ ವೀಕ್ಷಣೆಗೆ ಸುಲಭವಾಗಿ ದೊರೆಯಬಲ್ಲ ಏಕೈಕ ಬಲಿಷ್ಠ ಗುರುತ್ವಕ್ಷೇತ್ರ ಸೂರ್ಯ ಒಂದೇ. ಇನ್ನು ಸೂರ್ಯನ ಸಮೀಪವಾಗಿ ಹಾದು ನಮ್ಮನ್ನು

ತಲುಪಬಲ್ಲ ಪ್ರಕಾಶ ಕಿರಣಗಳ ಆಕರ ಅತಿ ದೂರಗಳಲ್ಲಿ ಹರಡಿಹೋಗಿರುವ ನಕ್ಷತ್ರಗಳು. ಆದರೆ ಸೂರ್ಯನಿರುವಾಗ ನಕ್ಷತ್ರದರ್ಶನವಿಲ್ಲ, ನಕ್ಷತ್ರದರ್ಶನವಿರುವಾಗ ಸೂರ್ಯ ನಾಪತ್ತೆ! ಈ ಒಗಟಿಗೆ ಒಡಪು ಅರಸಲು ಪ್ರಯತ್ನಿಸಿ ಸಫಲರಾದವರು ಖಭೌತವಿಜ್ಞಾನಿ ಆರ್ಥರ್ ಎಡಿಂಗ್ಟನ್ (೧೮೮೨-೧೯೪೪). ಮುಂದೆ ೧೯೧೯ರಲ್ಲಿ ಸಂಭವಿಸಲಿದ್ದ ಸಂಪೂರ್ಣ ಸೂರ್ಯಗ್ರಹಣದ ವೀಕ್ಷಣೆ ಮತ್ತು ಛಾಯಾಚಿತ್ರೀಕರಣ ಮಾಡುವ ಸಲುವಾಗಿ ಇವರು ಎರಡು ಪ್ರತ್ಯೇಕ ತಂಡಗಳನ್ನು ಕಟ್ಟಿ ಆಯಾ ನೆಲೆಗಳಿಗೆ ಸಾಕಷ್ಟು ಮುಂದಾಗಿಯೇ ರವಾನಿಸಿದರು. ಗ್ರಹಣದ ವೇಳೆ ಒಡ್ಡಿದ್ದ ಛಾಯಾಚಿತ್ರಗಳನ್ನು ಸಂಸ್ಕರಿಸಿ ತಪಾಸಿಸಿದಾಗ ಕಂಡದ್ದೇನು ? ಐನ್‌ಸ್ಟೈನರ ಸಿದ್ಧಾಂತಕ್ಕೆ ನಿಸರ್ಗ ತನ್ನ ಅಸ್ತು ಮುದ್ರೆ ಒತ್ತಿತ್ತು!

ಶಕಲ ಮತ್ತು ವಿಶೇಷ ಸಾಪೇಕ್ಷತಾ ಸಿದ್ಧಾಂತಗಳು ವ್ಯವಹರಿಸುವುದು ಪರಮಾಣು ಪ್ರಪಂಚದಲ್ಲಿ. ೧೯೦೦ರ ವೇಳೆಗೆ ಪರಮಾಣುವಿನ ಭೌತ ಅಸ್ತಿತ್ವ ಸಂದೇಹಾತೀತವಾಗಿ ನಿರ್ಣೀತವಾಗಿತ್ತು. ಅಗೋಚರ ಪರಮಾಣುವಿಗೊಂದು ಸೈದ್ಧಾಂತಿಕ ಪ್ರತಿರೂಪ ಒದಗಿಸುವ ದಿಶೆಯಲ್ಲಿ ನಿರ್ಣಾಯಕ ಪಾತ್ರ ವಹಿಸಿ ೧೯೧೨ರ ವೇಳೆಗೆ ಯಶಸ್ವಿಯಾದವರು ಬೋರ್.

ಹೀಗೆ ಆಧುನಿಕ ಭೌತವಿಜ್ಞಾನವೆಂಬ ಮುಕ್ಕಾಲಿಯ ಕಾಲುಗಳು ಪ್ಲಾಂಕ್, ಐನ್‌ಸ್ಟೈನ್ ಮತ್ತು ಬೋರ್. ಇವರ ವ್ಯಕ್ತಿತ್ವಗಳು ಹೇಗಿದ್ದುವು ? ಇವರೆಲ್ಲರ ನಿಕಟ ಅನುವರ್ತಿಯಾಗಿಯೂ ಐನ್‌ಸ್ಟೈನ್ ಮತ್ತು ಬೋರ್‌ರ ಜೀವನ ಚರಿತ್ರಕಾರರೂ ಆದ ಭೌತವಿಜ್ಞಾನಿ ಅಬ್ರಹಾಮ್ ಪಾಯ್ಸ್ (೧೯೮೨) ಎಂಬುವರು ವರ್ಣಿಸಿದ್ದಾರೆ :

''ಪ್ಲಾಂಕ್, ಅನೇಕ ರೀತಿಗಳಲ್ಲಿ ಒಬ್ಬ ಸಾಂಪ್ರದಾಯಿಕ ವಿಶ್ವವಿದ್ಯಾಲಯ ಪ್ರಾಧ್ಯಾಪಕ, ಪಾಠಪ್ರವಚನನಿರತ, ಪಿಎಚ್‌ಡಿ ಪ್ರದಾಯಕ. ಐನ್‌ಸ್ಟೈನ್, ವಿರಳವಾಗಿ ಏಕಾಕಿ ಬಹುತೇಕ ಏಕಾಂಗಿ, ತರಗತಿ ಪಾಠಗಳ ಬಗ್ಗೆ ದಿವ್ಯ ನಿರ್ಲಕ್ಷ್ಯ, ಪಿಎಚ್‌ಡಿಗಳನ್ನು ಟಂಕಿಸಲಿಲ್ಲ, ಸಹಕಾರ್ಯಕರ್ತರಿದ್ದರು. ಮೂವತ್ತಕ್ಕಿಂತಲೂ ಹೆಚ್ಚು ಭೌತವಿಜ್ಞಾನಿಗಳ ಜೊತೆ ಇವರು ಸಂಯುಕ್ತವಾಗಿ ಸಂಶೋಧನ ಪ್ರಬಂಧಗಳನ್ನು ಪ್ರಕಟಿಸಿರುವರು. ವಾಸ್ತವವಾಗಿ ನಾನೇ ಈ ಸಂಖ್ಯೆಯನ್ನು ಎಣಿಸಿದ್ದೇನೆ. ಇಂತಿದ್ದರೂ ಇವರಿಗೆ ಉತ್ಕಟಾವಶ್ಯಕತೆ ಇದ್ದದ್ದು ಪ್ರತ್ಯೇಕವಾಗಿ ಚಿಂತಿಸುವುದರಲ್ಲೇ, ತಮ್ಮಷ್ಟಕ್ಕೆ ತಾವು ಇರುವುದರಲ್ಲೇ. ಇನ್ನು ಬೋರ್, ಸದಾ ಇತರ ಭೌತವಿಜ್ಞಾನಿಗಳ, ಅಲ್ಲಿಯೂ ಯುವ ಚಿಂತನಶೀಲರ ಒಡನಾಟದ ಆವಶ್ಯಕತೆ ಇದ್ದವರು, ಸ್ವಂತಭಾವನೆಗಳನ್ನು ಸ್ಪಷ್ಟೀಕರಿಸಿಕೊಳ್ಳಲು ಬೋರ್‌ಗೆ ಈ ಸಾಹಚರ್ಯ ಅಗತ್ಯವಾಗಿತ್ತು. ಯುವ ಸಂಶೋಧಕರಿಗೆ ತಮ್ಮ ಭಾವನೆಗಳನ್ನು ಸ್ಫುಟೀಕರಿಸಿಕೊಳ್ಳಲು ಸದಾ ಸಮೃದ್ಧ ನೆರವು ಊಡುತ್ತಿದ್ದ ಉದಾರಿ. ತರಗತಿ ಬೋಧಕರಲ್ಲ ಅಥವಾ ಪಿಎಚ್‌ಡಿ ಮೇಲ್ವಿಚಾರಕರಲ್ಲ. ಆದರೆ ಡಾಕ್ಟೊರೇಟ್ ಉತ್ತರ ಮತ್ತು ಉನ್ನತ ಹಂತದ ಸಂಶೋಧನೆಗೆ ಸತತ ಸ್ಫೂರ್ತಿಪ್ರದಾಯಕರು ಮತ್ತು ಮಾರ್ಗದರ್ಶಕರು.''

**ಶಕಲಬಲ ವಿಜ್ಞಾನ**

ಪರಮಾಣು ಲೋಕದ ಗಣಿತಗಣನೆಗಳಲ್ಲಿ ಸಂಭಾವ್ಯತೆ ಎಂಬ ಅಂದಾಜು ಗಣನೆಯನ್ನು ಪರಿಗಣಿಸದಿದ್ದರೆ ಅನೇಕ ಲಭ್ಯ ಮಾಹಿತಿಗಳಿಗೆ ಸಮರ್ಪಕ ವಿವರಣೆ ಒದಗಿಸುವುದು ಕಡುಕಷ್ಟ ಎಂಬುದು ಬೋರ್‌ರ ಪಂಥ. ತದ್ವಿರುದ್ಧವಾಗಿ ಐನ್‌ಸ್ಟೈನ್ ಅಲ್ಲಿ ಸಂಭಾವ್ಯತೆ ಪ್ರವೇಶಿಸತಕ್ಕದ್ದಲ್ಲ, ನಿಷ್ಕೃಷ್ಟತೆಯೇ ವಿಶ್ವವಿದ್ಯಮಾನಗಳ ವಾಸ್ತವ ಸ್ಥಿತಿ ಎಂಬ ಖಚಿತ ನಿಲುವು ತಳೆದವರು. ಈ ಇಬ್ಬರು ಸೈದ್ಧಾಂತಿಕ ದಿಗ್ಗಜಗಳ ನಡುವಿನ ಅಸಂಖ್ಯ ವಾದವಿವಾದಗಳು ಆಧುನಿಕ ಭೌತವಿಜ್ಞಾನದ ಮುನ್ನಡೆಗೆ ಸಾಕಷ್ಟು ಗ್ರಾಸ ಒದಗಿಸಿದುವು. ಇಂಥ ಒಂದು ಸಂದರ್ಭದಲ್ಲಿ ಐನ್‌ಸ್ಟೈನ್ ತಮ್ಮ ವಾದದ ಸಮರ್ಥನೆಗಾಗಿ ''ಭಗವಂತ ನವುರು, ಎಂದೂ ಕುಹಕಿಯಲ್ಲ'' ಎಂದು ಉದ್ಗರಿಸಿದರು. ಇದರ ಅರ್ಥ : ನಿಸರ್ಗ ಕೋಮಲಾತಿಕೋಮಲ, ಅದಕ್ಕೆ ಮನವಿಲ್ಲ ಮರುಕವೂ ಇಲ್ಲ; ನಿಸರ್ಗ ಕುರಿತ ಗಣನೆಗಳಲ್ಲಿ ಸಂಭಾವ್ಯತೆಗೆ ಅವಕಾಶವಿಲ್ಲ. ಇದು ಹೇಗೂ ಇರಲಿ. ಇವರಿಬ್ಬರ ನಡುವೆ ಅಸಾಮಾನ್ಯ ಪ್ರೀತಿ ಗೌರವಗಳಿದ್ದುವು. ಎದುರಾಳಿಗೆ ಸ್ವಂತ ನಿಲುವನ್ನು ಸಂವಹನಿಸಲಾಗದಿದ್ದುದು ತಮ್ಮ ಸೋಲೆಂದೇ ಉಭಯರೂ ಭಾವಿಸಿದ್ದರು.

ಐನ್‌ಸ್ಟೈನ್ ತಮ್ಮ ಆಪ್ತಮಿತ್ರ ಭೌತವಿಜ್ಞಾನಿ ಮ್ಯಾಕ್ಸ್ ಬಾರ್ನ್ (೧೮೮೨-೧೯೭೦) ಅವರಿಗೆ ೧೯೨೬ರಲ್ಲಿ ಬರೆದ ಒಂದು ಪತ್ರ ಇಲ್ಲಿ ಉಲ್ಲೇಖನೀಯ : ''ಶಕಲಬಲ ವಿಜ್ಞಾನ ಖಂಡಿತ ನಮ್ಮ ಗೌರವಕ್ಕೆ ಅರ್ಹವಾಗಿದೆ. ಆದರೆ ಇದು ಸೃಷ್ಟಿಯ ಯಥಾರೂಪವಲ್ಲ. ಈ ಸಿದ್ಧಾಂತ ಸಾಕಷ್ಟು ಫಲಿಗಳನ್ನು ನೀಡುತ್ತದೆ ನಿಜ, ಆದರೆ ಇದು ನಮ್ಮನ್ನು ಪ್ರಾಚೀನ ಕರ್ತಾರನ ಸಮಿಪಕ್ಕೆ ಕೂಡ ಒಯ್ಯುವುದಿಲ್ಲ. ಇದು ಹೇಗೂ ಇರಲಿ. ಭಗವಂತ ದಾಳ ಒಗೆಯುವುದಿಲ್ಲ ಎಂಬುದು ನನ್ನ ದೃಢ ಭರವಸೆ.'' ಇಲ್ಲಿ 'ಭಗವಂತ' ಮತ್ತು 'ದಾಳ' ಪದಗಳು ಅನುಕ್ರಮವಾಗಿ ನಿಸರ್ಗ ಮತ್ತು ಸಂಭಾವ್ಯತೆಯನ್ನು ಪ್ರತೀಕಿಸುತ್ತವೆ.

ಶಕಲಬಲ ವಿಜ್ಞಾನದ ಸ್ಥಾಪನೆ ಮತ್ತು ಅಭಿವರ್ಧನೆಗಳಿಗೆ ಮಹತ್ತರ ಕೊಡುಗೆ ಕೊಟ್ಟವರು ಬೋರ್ ಮತ್ತು ಅವರ ಯುವ ಶಿಷ್ಯಪರಂಪರೆ, ಮುಖ್ಯವಾಗಿ ವರ್ನರ್ ಹೈಸನ್‌ಬರ್ಗ್ (೧೯೦೧-೭೬) ಹಾಗೂ ಇತರರು. ಸಂಭಾವ್ಯತಾ ಸಿದ್ಧಾಂತವನ್ನು ಇವರು ಯಶಸ್ವಿಯಾಗಿ ಬಳಕೆಗೆ ತಂದರು ಮತ್ತು ಅನೇಕ ಪ್ರಚಲಿತ ಸಮಸ್ಯೆಗಳಿಗೆ ಯುಕ್ತ ಪರಿಹಾರಗಳನ್ನೂ ಪಡೆದರು. ಆದರೆ ಐನ್‌ಸ್ಟೈನ್ ಇವುಗಳಿಂದ ಪ್ರಭಾವಿತರಾಗಲಿಲ್ಲ. ೧೯೨೯ರಲ್ಲಿ ಪ್ಲಾಂಕ್ ಪ್ರಶಸ್ತಿ ಸ್ವೀಕರಿಸುತ್ತ ಇವರು ಆಡಿದ ಮಾತು, ''ಯುವ ಪೀಳಿಗೆಯ ಭೌತ ವಿಜ್ಞಾನಿಗಳ ಮಹತ್ಸಾಧನೆಯಾಗಿರುವ ಶಕಲಬಲ ವಿಜ್ಞಾನವನ್ನು ಪೂರ್ಣಪ್ರಮಾಣದಲ್ಲಿ ಮೆಚ್ಚುತ್ತೇನೆ. ಆ ಸಿದ್ಧಾಂತದ ಗಂಭೀರ ಸತ್ಯದಲ್ಲಿ ವಿಶ್ವಾಸ ತಳೆದವನಾಗಿದ್ದೇನೆ. ಆದರೆ ಸಂಭಾವ್ಯತಾ ನಿಯಮಗಳಿಗೆ ಅದು ಬಂಧಿತವಾಗಿರುವುದು ಕೇವಲ ತಾತ್ಕಾಲಿಕ.''

**ಪ್ಲಾಂಕ್ - ಐನ್‌ಸ್ಟೈನ್ ಸಹಯೋಗ**

ವಿಶೇಷ ಸಾಪೇಕ್ಷತಾ ಸಿದ್ಧಾಂತ ಪ್ರಕಟವಾದಾಗ ಐನ್‌ಸ್ಟೈನ್ ಸ್ವಿಟ್ಸರ್ಲೆಂಡಿನ ಏಕಸ್ವ ಕಚೇರಿಯಲ್ಲಿ ಒಬ್ಬ ಗುಮಾಸ್ತ, ಉನ್ನತ ವಿಜ್ಞಾನ ವಲಯಗಳಲ್ಲಿ ಪೂರ್ತಿ ಅನಾಮಧೇಯ. ಪ್ಲಾಂಕ್ ಆದರೋ ಪ್ರತಿಷ್ಠಿತ ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಒಬ್ಬ ಹಿರಿಯ ಪ್ರಾಧ್ಯಾಪಕ. ಐನ್‌ಸ್ಟೈನರ ಹಿರಿಮೆಯನ್ನು ಒಡನೆ ಗುರುತಿಸಿದ ಪ್ಲಾಂಕ್ ಅವರನ್ನು ಆದರದಿಂದ ತಮ್ಮ ವಿಶ್ವವಿದ್ಯಾಲಯಕ್ಕೆ ಆಹ್ವಾನಿಸಿದರು (೧೯೧೩). ನಿಜ, ಮಹತ್ತನ್ನು ಇನ್ನೊಂದು ಮಹತ್ತು ಮಾತ್ರ ಗುರುತಿಸಿ ಗೌರವಿಸಬಲ್ಲುದು, ಅಲ್ಲಿ ಪರಿಶುದ್ಧ ಸತ್ಯಶೋಧನೆಯೊಂದೇ ಲಕ್ಷ್ಯ, ಯಾವುದೇ ಕುತ್ಸಿತ ಭಾವಕ್ಕೆ ಎಡೆಯಿಲ್ಲ.

ಇದಕ್ಕೆ ಇನ್ನೊಂದು ನಿದರ್ಶನ ಪ್ಲಾಂಕರ ಷಷ್ಟ್ಯಬ್ದಪೂರ್ತಿ ಸಮಾರಂಭದಲ್ಲಿ, ೧೯೧೮, ಐನ್‌ಸ್ಟೈನ್ ಮಾಡಿದ ಅಭಿನಂದನ ಭಾಷಣ : ''ವಿಜ್ಞಾನ ದೇವಾಲಯ ಹಲವಾರು ಪ್ರಾಕಾರಗಳಿಂದ ಸಂಯೋಜಿತವಾಗಿರುವ ಸಂಕೀರ್ಣ ರಚನೆ. ಇದರ ನಿವಾಸಿಗಳ ಸ್ವಭಾವಗಳು ವಿವಿಧವಾಗಿರುವುದೊಂದೇ ಅಲ್ಲ, ಇವರು ದೇವಾಲಯದ ಒಳಗೆ ಉತ್ಪಾದಿಸುವ ಪ್ರಭಾವಗಳು ಕೂಡ ಹಾಗೆಯೇ. ಈ ಪೈಕಿ ಹೆಚ್ಚಿನ ಪ್ರತಿಯೊಬ್ಬನೂ ತನ್ನ ಬುದ್ಧಿಸಾಮರ್ಥ್ಯದ ಉತ್ಕೃಷ್ಟತೆಯ ಬಗ್ಗೆ ಸಂತೃಪ್ತಿ ತಳೆದವನಾಗಿದ್ದು ವಿಜ್ಞಾನ ಕ್ರಿಯಾ ಕಲಾಪಗಳಲ್ಲಿ ಉದ್ಯುಕ್ತನಾಗಿರುವನು. ತನ್ನ ಜೀವನದ ಪ್ರಬಲ ತುಡಿತಗಳು ಹೊರಹೊಮ್ಮಲು ಅವಕಾಶ ಒದಗಿಸಿ ಬಾಳ ಹಂಬಲಗಳನ್ನು ಈಡೇರಿಸಿಕೊಳ್ಳಲು ಚೆನ್ನಾಗಿ ಒಗ್ಗುವ ಕ್ರೀಡೆಯಾಗಿ ವಿಜ್ಞಾನವನ್ನು ಈತ ಕಂಡುಕೊಂಡಿದ್ದಾನೆ. ಉಪಯುಕ್ತ ಸಿದ್ಧಿಗಳನ್ನು ಗಳಿಸುವುದರತ್ತ ಮಾತ್ರ ತಮ್ಮ ಮಿದುಳ ಸಾಮಗ್ರಿಯನ್ನು ವ್ಯಯಿಸುವ ಹಲಮಂದಿಯೂ ಇದ್ದಾರೆ, ನಿಜ. ಈಗ ದೇವದೂತನೊಬ್ಬ ಧರೆಗಿಳಿದು ಬಂದು ಇವೆರಡು ವರ್ಗಗಳಿಗೆ ಸೇರಿದ ಎಲ್ಲರನ್ನೂ ದೇವಾಲಯದಿಂದ ಉಚ್ಚಾಟಿಸುವುದಾದ ಪಕ್ಷದಲ್ಲಿ ಗಮನಾರ್ಹ ಮಂದಿ ತೊಲಗಿ ಹೋಗುತ್ತಾರೆ. ಹಾಗಿದ್ದರೂ ದೇವಾಲಯದೊಳಗೆ ಈಗಿನ ಹಾಗೂ ಹಿಂದಿನ ಕೆಲವೊಂದು ಮಂದಿ ಉಳಿದೇ ಇರುತ್ತಾರೆ. ಈ ವಿರಳರ ಸಾಲಿನಲ್ಲಿ ನಾವು ನಮ್ಮ ಪ್ರಿಯ ಪ್ಲಾಂಕರನ್ನು ಎಣಿಸುತ್ತೇವೆ. ಎಂದೇ ಇವರಿಗೆ ನಮ್ಮ ತುಂಬು ಹೃದಯದ ಅಭಿವಂದನೆ, ಪ್ರೀತಿ ಸಲ್ಲುತ್ತವೆ.'' ತ್ಯಾಗರಾಜರ 'ಎಂದುರೋ ಮಹಾನುಭಾವುಲು' ಕೃತಿಯ ಗಂಭಿರ ಗತಿಯಲ್ಲಿ ಈ ಭಾಷಣ ಮುನ್ನಡೆಯುತ್ತದೆ.

**ಐನ್‌ಸ್ಟೈನ್ ವ್ಯಕ್ತಿತ್ವ**

ಐನ್‌ಸ್ಟೈನ್ ವಿಜ್ಞಾನಿಗಳಿಗೆ ಒಬ್ಬ ಆದರ್ಶ ವ್ಯಕ್ತಿ, ಮಾನವತಾವಾದಿ, ಜನಗಳಿಗೋ ಆರಾಧ್ಯ ದೈವ, ಎಲ್ಲವೂ ನಿಜ. ಇವು ಇವರನ್ನು ಒಬ್ಬ ಅವತಾರ ಪುರುಷನ ಅಂತಸ್ತಿಗೆ ಏರಿಸಿದ್ದುವು. ಇಂಥ ಸಾರ್ವಜನಿಕ ಭಕ್ತಿ ಪ್ರೀತಿಗಳ ಮಹಾಪೂರ ಗಮನಿಸಿದ ಇವರೊಮ್ಮೆ ಸ್ನೇಹಿತನ ಜೊತೆ ಉದ್ಗರಿಸಿದ್ದುಂಟು, ''ಜನರೇಕೆ ನನ್ನನ್ನು ಇಷ್ಟು ಪ್ರೀತಿಸುತ್ತಾರೆ, ಆದರೆ ನನ್ನನ್ನೇಕೆ ಯಾರೂ ಅರ್ಥಮಾಡಿಕೊಂಡಿಲ್ಲ!'' ಹಾಲಿವುಡ್‌ನ ಹಾಸ್ಯನಟ ಚಾರ್ಲಿ ಚಾಪ್ಲಿನ್ (೧೮೮೯-೧೯೭೭) ಇನ್ನೊಂದು ಸಂದರ್ಭದಲ್ಲಿ ನೀಡಿದ ಉತ್ತರ ಮಾರ್ಮಿಕವಾಗಿದೆ, ''ಪ್ರೊಫೆಸರ್ ! ಜನ ನನ್ನ ಬಗ್ಗೆ ಉತ್ಸಾಹದ ಹೊನಲು ಹರಿಸುತ್ತಾರೆ. ಏಕೆಂದರೆ ನಾನು ಪ್ರತಿಯೊಬ್ಬನಿಗೂ ಅರ್ಥವಾಗಿದ್ದೇನೆ. ನಿಮ್ಮ ಬಗ್ಗೆ ಕೂಡ. ಏಕೆಂದರೆ ನೀವು ಯಾರಿಗೂ ಅರ್ಥವಾಗಿಲ್ಲ!''

ಗಾಂಧೀಜಿ (೧೮೬೯-೧೯೪೮) ಕುರಿತು ಐನ್‌ಸ್ಟೈನರಿಗೆ ವಿಶೇಷ ಗೌರವ. ''ನಮ್ಮ ಯುಗದ ಪರಮೋತ್ಕೃಷ್ಟ ವ್ಯಕ್ತಿ ಗಾಂಧಿ'' ಎಂದು ಪದೇಪದೇ ಉದ್ಗರಿಸುತ್ತಿದ್ದರು. ಗಾಂಧೀಜಿಗೆ ೭೦ ತುಂಬಿದಾಗ, ೧೯೩೯, ಐನ್‌ಸ್ಟೈನ್ ಸಲ್ಲಿಸಿದ ನುಡಿನಮನ ಸ್ವತಃ ಐನ್‌ಸ್ಟೈನರ ಬಗ್ಗೆ ಕೂಡ ನಾವು ಬರೆಯಬಹುದಾದ ಚರಮ ಪಜ್ಜಿ, ''ಇಂಥವನೊಬ್ಬ ಎಂದಾದರೂ ಈ ನೆಲದ ಮೇಲೆ ರಕ್ತಮಾಂಸಭರಿತನಾಗಿ ಅಡ್ಡಾಡಿದುದು ನಿಜವಿರಬಹುದೇ ಎಂದು ಮುಂಬರಲಿರುವ ಪೀಳಿಗೆಗಳು ಸಂದೇಹಿಸುವುದು ಸಾಧ್ಯ.''

ಜಿ. ಟಿ. ನಾರಾಯಣರಾವ್
೮, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ, ಮೈಸೂರು - ೫೭೦ ೦೦೯

ರಾಮಾಯಣ ಕಾವ್ಯದ ನಾಯಕ ಶ್ರೀರಾಮ. ಅವನ ಜನ್ಮದ ಉದ್ದೇಶ ದುಷ್ಟಶಿಕ್ಷಣ, ಶಿಷ್ಟರಕ್ಷಣ, ಅದರಲ್ಲಿಯೂ ಲಂಕಾಧಿಪತಿಯೂ ಸುರನರೋರಗರೆಲ್ಲರಿಗೂ ಭಯಂಕರನೂ ಆಗಿದ್ದ ರಾವಣನ ವಧೆ. ರಾಮನ ಜನನದಿಂದ ರಾವಣ ವಧೆಯವರೆಗೂ ನಡೆಯುವ ಅನೇಕ ಘಟನೆಗಳು, ಪ್ರಸಂಗಗಳು ಕ್ರಮವಾಗಿ ನಮ್ಮನ್ನು ಅಯೋಧ್ಯೆಯಿಂದ ಲಂಕೆಯೆಡೆಗೆ ಕರೆದೊಯ್ಯುತ್ತವೆ. ಈ ಪ್ರಸಂಗಗಳಲ್ಲಿ ಒಂದು ಅಹಲ್ಯಾ ಶಾಪ ವಿಮೋಚನೆ.



# ಅಹಲ್ಯಾ ಶಾಪ ವಿಮೋಚನೆ

## ~ ಒಂದು ಚಿಂತನೆ

ರಾಮಾಯಣ ಭಾರತೀಯರಲ್ಲಿ ಬಹುಜನರಿಗೆ ಪರಿಚಿತವಾದ ಪುರಾತನ ಕಾವ್ಯ. ಇದು ಒಂದು ಕಾಲಘಟ್ಟದಲ್ಲಿ ಭಾರತೀಯ ಪರಂಪರೆ ಸಾಗಿ ಬಂದುದರ ವ್ಯವಸ್ಥಿತ ದಾಖಲೆ ಎನ್ನಲೂಬಹುದು. ಆ ಕಾಲದ ಸಾಮಾಜಿಕ ಮೌಲ್ಯಗಳು, ನಂಬಿಕೆಗಳು, ನಡವಳಿಕೆಗಳು ಈ ಎಲ್ಲ ಚಿತ್ರಣ ರಾಮಾಯಣ ಕಾವ್ಯದಲ್ಲಿದೆ.

ರಾಮಾಯಣ ಕಾವ್ಯದ ನಾಯಕ ಶ್ರೀರಾಮ. ಅವನ ಜನ್ಮದ ಉದ್ದೇಶ ದುಷ್ಟಶಿಕ್ಷಣ, ಶಿಷ್ಟರಕ್ಷಣ, ಅದರ ಲ್ಲಿಯೂ ಲಂಕಾಧಿಪತಿಯೂ ಸುರನರೋರಗರೆಲ್ಲರಿಗೂ ಭಯಂಕರನೂ ಆಗಿದ್ದ ರಾವಣನ ವಧೆ. ರಾಮನ ಜನನದಿಂದ ರಾವಣ ವಧೆಯವರೆಗೂ ನಡೆಯುವ ಅನೇಕ ಘಟನೆಗಳು, ಪ್ರಸಂಗಗಳು ಕ್ರಮವಾಗಿ ನಮ್ಮನ್ನು ಅಯೋಧ್ಯೆಯಿಂದ ಲಂಕೆಯೆಡೆಗೆ ಕರೆದೊಯ್ಯುತ್ತವೆ. ಈ ಪ್ರಸಂಗಗಳಲ್ಲಿ ಒಂದು ಅಹಲ್ಯಾ ಶಾಪ ವಿಮೋಚನೆ.

ಕವಿಗಳೂ, ವಾಗ್ಗೇಯಕಾರರೂ, ಹರಿದಾಸರೂ ಈ ಅಹಲ್ಯಾ ಶಾಪ ವಿಮೋಚನಾ ಪ್ರಸಂಗವನ್ನು ಒಂದಲ್ಲ ಒಂದು ರೂಪದಲ್ಲಿ ತಮ್ಮ ಕೃತಿಗಳಲ್ಲಿ ಸೇರಿಸಿಕೊಂಡಿದ್ದಾರೆ. ''ಶಿಲೆಯ ಮೆಟ್ಟಿ ಕುಲಕೆ ತಂದೇ...'' ಎಂದು ದಾಸರು ಹಾಡಿದರೆ, ''ಚರಣವಿದು ಶಿಲೆಯಾದಹಲ್ಯೆಯ ಶಾಪ ಹರಣವಿದು'' ಎಂದು ಕುಮಾರವ್ಯಾಸನು ದ್ರೌಪದಿಯ ಬಾಯಲ್ಲಿ ಹಾಡಿಸಿದ್ದಾನೆ. ಯಾರಿವಳು ಅಹಲ್ಯೆ ? ಸೃಷ್ಟಿಯ ಸಕಲ ಸೌಂದರ್ಯ ಸಾರವನ್ನೂ ಸೇರಿಸಿ ಬ್ರಹ್ಮನೇ ಸೃಜಿಸಿದ ಸುಂದರಿಯೇ ಅಹಲ್ಯೆ. ಹಲ ಎಂದರೆ ನೇಗಿಲು; ವಿಕಾರ ಎಂಬುದಾಗಿಯೂ ಅದರ ಒಂದು ಅರ್ಥ. ಹಲ್ಯ = ವಿಕಾರ ಜನ್ಯವಾದ ದೋಷ, ಅಹಲ್ಯಾ = ವಿಕಾರ ಜನ್ಯವಾದ ದೋಷಗಳಿಲ್ಲದವಳು. ಅವಳು ಬೆಳೆದು ಯುವತಿಯಾದಾಗ, ಬ್ರಹ್ಮನು ಅವಳನ್ನು ಜಿತೇಂದ್ರಿಯನೂ ತಪಸ್ವಿಯೂ ವಿದ್ವಾಂಸನೂ ಸದ್ಗುಣಿಯೂ ಆದ ಗೌತಮ ಋಷಿಗೆ ಕೊಟ್ಟು ವಿವಾಹ ಮಾಡಿದನು. ಗೌತಮನೊಡನೆ ಸಂಸಾರ ಮಾಡುತ್ತ ಅಹಲ್ಯೆ ಮಕ್ಕಳ ತಾಯಿಯೂ ಆದಳು.

ಆದರೆ ಅಹಲ್ಯೆಯ ಅನುಪಮ ಸೌಂದರ್ಯಕ್ಕೆ ಸೋತಿದ್ದ ದೇವೇಂದ್ರನಿಗೆ ಈ ವಿವಾಹದಿಂದ ತುಂಬಾ ನಿರಾಸೆಯಾಯಿತು. ಅಲ್ಲದೆ, ದೇವರಾಜನಾದ ತನಗೇ ಅಹಲ್ಯೆಯನ್ನು ಪಡೆಯುವ ಹಕ್ಕು ಎಂತಲೂ ಭಾವಿಸಿದ ಅವನಿಗೆ ಬಲು ಕೋಪವೂ ಬಂತು. ಹೇಗಾದರೂ ಮಾಡಿ ಒಂದು ಸಲವಾದರೂ ಅಹಲ್ಯೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂಬ ದುಷ್ಟ ಬಯಕೆ ಅವನಲ್ಲಿ ಬಲಿಯಿತು. ಬಯಕೆಯ ಬೆಂಕಿಗೆ ಕೋಪದ ತುಪ್ಪವೂ ಸೇರಿ ಅವನ ಕಾಮದ ಕಿಚ್ಚು ಪ್ರಜ್ವಲಿಸಿತು.

ಗೌತಮರು ಇಲ್ಲದಿದ್ದಾಗ, ಅವರ ರೂಪಿನಲ್ಲಿಯೇ ದೇವೇಂದ್ರನು ಅವರ ಆಶ್ರಮಕ್ಕೆ ಬಂದು ಅಹಲ್ಯೆಯ ಸಂಗವನ್ನು ಬಯಸಿದ.

ಬಿ. ಜಿ. ಕುಸುಮಾ

''ಋತುಕಾಲಂ ಪ್ರತೀಕ್ಷಂತೇ ನಾರ್ಥಿನಃ ಸುಸಮಾಹಿ ತೇ
ಸಂಗಮಂ ತ್ವಹಮಿಚ್ಛಾಮಿ ತ್ವಯಾ ಸಹ''

ಎಂದು ಬಾಯಿಬಿಟ್ಟು ತನ್ನ ಆಸೆಯನ್ನು ಹೇಳಿಕೊಂಡ. ರೂಪ ಮರೆಮಾಚಿದ್ದರೂ, ಬಂದವನು ದೇವೇಂದ್ರನೆಂದು, ತಪಸ್ವಿಯ ಪತ್ನಿಯಾದ ಅಹಲ್ಯೆಗೆ ತಿಳಿದುಹೋಯಿತು.

''ಮುನಿವೇಷಂ ಸಹಸ್ರಾಕ್ಷಂ ವಿಜ್ಞಾಯ ಮತಿಂ ಚಕಾರ ದುರ್ಮೇಧಾ ದೇವರಾಜಕುತೂಹಲಾತ್.'' ಆ ಕ್ಷಣಕ್ಕೆ ಅವಳ ಬುದ್ಧಿ ಸ್ತಿಮಿತ ಕಳೆದುಕೊಂಡಿತು. ಕವಿ ಹಾಡಿರುವಂತೆ ''ಎಲ್ಲಿ ಜಾರಿತೋ ಮನವು''. ದೇವೇಂದ್ರನ ಬಯಕೆ, ತನ್ನ ರೂಪಕ್ಕೊಂದು ಗೌರವಾರ್ಪಣೆ ಎಂದೇ ಭಾವಿಸಿದಳು. ದೇವೇಂದ್ರನೊಡನೆ ಸಮಾಗಮವಾಗುವುದೆಂಬ ತವಕ, ಕುತೂಹಲಗಳಿಂದ ಅವಳು ಅವನ ಆಸೆಯ ಪೂರೈಕೆಗೆ ಅನುಮತಿಸಿದಳು. ಅಸಹ್ಯವಾಗಬೇಕಾದದ್ದು ಆಪ್ಯಾಯವೆನಿಸಿತು. ತಿರಸ್ಕರಿಸಬೇಕಾದ್ದನ್ನು ಪುರಸ್ಕರಿಸಿದಳು. ಅವಳ ಆತ್ಮದ ಅವನತಿ ಅವರಿಬ್ಬರ ಸುಖಚಪಲ ಕೃತಿಯಾಯಿತು. ಅನಂತರ ಅವಳು ಇಂದ್ರನಿಗೆ ''ಕೃತಾರ್ಥೋಽಸ್ಮಿ, ಸುರಶ್ರೇಷ್ಠ, ಗಚ್ಛ ಶೀಘ್ರಮಿತಃ'', ಎಂದಳು. ''ಗೌತಮರಿಂದ ನನ್ನನ್ನೂ ನಿನ್ನನ್ನೂ ರಕ್ಷಿಸಿಕೊಳ್ಳುವ ಭಾರ ನಿನ್ನದು'' ಎಂದಳು. ಇಂದ್ರನೂ ನಗುತ್ತ ''ನಾನೂ ಸಂತೃಪ್ತನಾದೆ'' ಎನ್ನುತ್ತ ಅಲ್ಲಿಂದ ಹೊರಗೆ ಬಂದ. ಆಗತಾನೇ ಸ್ನಾನ ಮುಗಿಸಿ ಬರುತ್ತಿದ್ದ ಗೌತಮ ಋಷಿಗಳ ಕಣ್ಣಿಗೆ ಬಿದ್ದ. ನೀತಿಭ್ರಷ್ಟನಾದ ದೇವಲೋಕದ ರಾಜನೂ, ತಪಸ್ವಿಯೂ ಜಿತೇಂದ್ರಿಯನೂ ಆದ ಭೂಲೋಕದ ಋಷಿಯೂ ಮುಖಾಮುಖಿಯಾದರು. ನಡೆದಿರಬಹುದಾದದ್ದು ಏನೆಂದು ಗೌತಮರಿಗೆ ತಿಳಿದುಹೋಯಿತು. ಅಸಹ್ಯ, ಅವಮಾನ, ರೋಷಗಳಿಂದ ಕುದಿಯುತ್ತ ಅವರು ಇಂದ್ರನಿಗೆ

''ಮಮ ರೂಪಂ ಸಮಾಸ್ಥಾಯ ಕೃತವಾನಸಿ ದುರ್ಮತೇ,
ಅಕರ್ತವ್ಯಮಿದಂ ತಸ್ಮಾದ್ವಿಫಲಸ್ತ್ವಂ ಭವಿಷ್ಯಸಿ''

ಎಂದು ಘೋರ ಶಾಪವನ್ನಿತ್ತರು, ಮುಖಭಂಗಿತನಾದ ಇಂದ್ರನು ಅಲ್ಲಿಂದ ಪಲಾಯನ ಮಾಡಿದನು. ಅಹಲ್ಯೆಯ ಮೇಲೆಯೂ ಗೌತಮರು ಕ್ರುದ್ಧರಾದರು. ''ದುರ್ವೃತ್ತೇ'' ಎಂದು ಘರ್ಜಿಸಿ, ''ವಾಯುಭಕ್ಷಾ ನಿರಾಹಾರಾ ತಪ್ಯಂತೀ ಭಸ್ಮಶಾಯಿನೀ, ಅದೃಶ್ಯಾ ಸರ್ವಭೂತಾನಾಂ ಆಶ್ರಮೇಸ್ಮಿನ್ನಿವತ್ಸ್ಯಸಿ'' ಎಂದು ಶಪಿಸಿದರು. ''ಎಷ್ಟೋ ಕಾಲ ಕಳೆದ ಮೇಲೆ ಶ್ರೀರಾಮನು ಇಲ್ಲಿಗೆ ಬಂದಾಗ ನೀನು ಪರಿಶುದ್ಧಳಾಗುವೆ. ಆ ವೇಳೆಗೆ ನೀನು ಮನಃಶುದ್ಧಳಾಗಿ, ಶ್ರೀರಾಮನಿಗೆ ಅತಿಥಿ ಸತ್ಕಾರ ಮಾಡಿದರೆ, ನಿನ್ನ ನಿಜ ದೇಹ ಪಡೆಯುವೆ, ಆಗ ನನ್ನಲ್ಲಿಗೆ ಬರಬಹುದು'' ಎಂದು ವಿಶಾಪವನ್ನೂ ಕೊಟ್ಟು, ಅಲ್ಲಿಂದ ಹೊರಟುಹೋದರು.

ಎಷ್ಟೋ ಕಾಲ ಕಳೆಯಿತು. ವಿಶ್ವಾಮಿತ್ರರು ತಮ್ಮ ಯಾಗ ರಕ್ಷಣೆಗಾಗಿ ರಾಮಲಕ್ಷ್ಮಣರನ್ನು ತಮ್ಮ ಆಶ್ರಮಕ್ಕೆ ಕರೆತಂದರು. ಯಜ್ಞ ಮುಗಿದ ನಂತರ, ಅವರನ್ನು ಮಿಥಿಲಾನಗರಕ್ಕೆ ಕರೆದೊಯ್ಯುವ ದಾರಿಯಲ್ಲಿ, ಗೌತಮರಿದ್ದ, ಈಗ ನಿರ್ಜನವಾಗಿ ಶಾಪಗ್ರಸ್ತಳಾದ ಅಹಲ್ಯೆ ಅದೃಶ್ಯವಾಗಿ ಉಸಿರಾಡುತ್ತಿದ್ದ ಆಶ್ರಮಕ್ಕೆ ಬಂದರು. ವಿಶ್ವಾಮಿತ್ರರು ರಾಮಲಕ್ಷ್ಮಣರಿಗೆ ಹಿಂದಿನ ಕತೆಯನ್ನೆಲ್ಲ ಹೇಳಿದರು. ಅದುವರೆಗೂ ಎಲ್ಲರಿಗೂ ಅದೃಶ್ಯಳಾಗಿದ್ದ ಅಹಲ್ಯೆ ಶ್ರೀರಾಮನಿಗೆ ಗೋಚರಿಸಿದಳು. ರಾಮಲಕ್ಷ್ಮಣರು ನೇರವಾಗಿ ಹೋಗಿ ಅಹಲ್ಯೆಯ ಪಾದಮುಟ್ಟಿ ನಮಸ್ಕರಿಸಿದರು. (ಜನಸಾಮಾನ್ಯರಲ್ಲಿ ಹರಡಿರುವಂತೆ, ರಾಮನು ತನ್ನ ಪಾದಸ್ಪರ್ಶ ಅಹಲ್ಯೆಗೆ ಮಾಡಿಸಲಿಲ್ಲ. ತಾನೇ ಅವಳ ಚರಣಕ್ಕೆ ನಮಿಸಿದನು.) ಹೀಗೆ ರಾಮನ ದರ್ಶನದಿಂದ ಅಹಲ್ಯೆ ಸಪ್ರಾಣಿಸಿ, ಸದೇಹಿ ಯಾದಳು. ಶ್ರೀರಾಮನಿಗೆ ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿದಳು. ಅವಳ ಶಾಪ ವಿಮೋಚನೆಯಾಯಿತು. ಆ ವೇಳೆಗೆ ಗೌತಮರೂ ಅಲ್ಲಿಗೆ ಬಂದರು, ಅಹಲ್ಯೆಯನ್ನು ಸ್ವೀಕರಿಸಿದರು. ಆಗ ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಇದಿಷ್ಟು ಸ್ಥೂಲವಾಗಿ ಅಹಲ್ಯಾ ಶಾಪ ವಿಮೋಚನೆಯ ಕತೆ.

ಈ ಕತೆ ಕೇಳಿ ನಾವು ಶ್ರೀರಾಮನನ್ನು ಪತಿತಪಾವನ ನೆಂದು ಕೊಂಡಾಡುತ್ತೇವೆ. ಅವನಿಗೆ ಕೈಮುಗಿಯುತ್ತೇವೆ. ಶ್ರೀರಾಮನ ಹಿರಿಮೆಗೆ ಅವನ ಪಾದಸ್ಪರ್ಶದ ಮಹಿಮೆಗೆ ಬೆರಗಾಗಿ ತಲೆಬಾಗಿ ನಮಿಸುತ್ತೇವೆ. ಸಾಮಾನ್ಯವಾಗಿ ಇದಕ್ಕಿಂತ ಮುಂದೆ ಅಥವಾ ಬೇರೆ ದಿಕ್ಕಿನಲ್ಲಿ ನಮ್ಮ ಭಾವನೆಗಳಾಗಲೀ ಚಿಂತನೆಗಳಾಗಲೀ ಹರಿಯುವುದಿಲ್ಲ. ಆದರೆ ಆಳವಾಗಿ ಆಲೋಚಿಸಿದರೆ ಈ ಪ್ರಸಂಗದಲ್ಲಿ ಮಾನವ ಸ್ವಭಾವದ ಇತಿ, ಮಿತಿ, ಉನ್ನತಿ, ಗಮ್ಯಗತಿಗಳ ದರ್ಶನವಾಗುತ್ತದೆ. ಇಡೀ ಪ್ರಸಂಗ ಅರಿಷಡ್ವರ್ಗಗಳ ಆಟ, ಕಾಟ; ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇವುಗಳನ್ನು ಅರಿಷಡ್ವರ್ಗ ಎನ್ನುತ್ತಾರೆ. ಇವು ಮನುಷ್ಯನ ಸ್ವಾಭಾವಿಕ, ಮೂಲಭೂತ ಪ್ರವೃತ್ತಿಗಳು. ಒಂದು ಮಿತಿಯಲ್ಲಿ ಇವು ಮಾನವನ ಪ್ರಗತಿಗೆ ಪ್ರೇರಕ, ಸಹಾಯಕ. ಊಟದಲ್ಲಿ ಉಪ್ಪಿದ್ದಂತೆ, ಜೀವನಕ್ಕೆ ಇವು ಬೇಕು. ಆದರೆ ಉಪ್ಪು ಹೆಚ್ಚಾದರೆ ರುಚಿಯೂ ಹಾಳು, ಆರೋಗ್ಯಕ್ಕೂ ಕೇಡು. ಸ್ವಲ್ಪ ಕಡಿಮೆಯಾದರೆ, ಊಟ ನೀರಸ, ಸಪ್ಪೆ ಎನಿಸಿದರೂ, ರುಚಿ ಹಾಳಲ್ಲ ಆರೋಗ್ಯಕ್ಕೆ ಹಾನಿಯೂ ಇಲ್ಲ. ಈ ಪ್ರಸಂಗದಲ್ಲಿ ದೇವೇಂದ್ರನಿಗೆ ಮಿತಿಮೀರಿದ ಕಾಮ. ಅಹಲ್ಯೆಗೆ ಕವಿದದ್ದು ರೂಪ ಮದ. ಗೌತಮರಲ್ಲಿ ಭುಗಿಲೆದ್ದದ್ದು ತಡೆಯಲಾರದ ಕ್ರೋಧ. ಇವುಗಳ ಒಟ್ಟು ಪರಿಣಾಮ ಅಹಲ್ಯೆ ಶಾಪಗ್ರಸ್ತಳಾದಳು.

ದೇವೇಂದ್ರನ ಅತಿಕಾಮುಕತೆಗೆ ಒಳಗಾದವಳು ಅಹಲ್ಯೆ. ಹಾಗೆಂದು ಇದು ಬಲಾತ್ಕಾರದ ಅಥವಾ ಅತ್ಯಾಚಾರದ ಅಥವಾ ಅಪಹರಣದ ಪ್ರಸಂಗವಲ್ಲ. ಆಗಲೇ ಹೇಳಿದಂತೆ ''ದೇವರಾಜ ಕುತೂಹಲಾತ್'', ಅವನೊಡನೆ ಸಮಾಗಮಕ್ಕೆ ಸಿದ್ಧಳಾದವಳು ಅಹಲ್ಯೆ. ಅವಳದು ದೋಷವೇ ಇಲ್ಲದ ಅನುಪಮ ಸೌಂದರ್ಯ. ಆದರೆ ಮನೋವಿಕಾರಜನ್ಯವಾದ ದೋಷವೊಂದು ಅವಳ ಸ್ವಭಾವದಲ್ಲೇ ಅಂತರ್ಗತವಾಗಿತ್ತು. ಸೂಕ್ತ ಸನ್ನಿವೇಶ ಸಿಕ್ಕಿದೊಡನೆಯೇ ಹೊರಬಿತ್ತು. ಅವಳ ಮನವೆಂಬ ಹುತ್ತದಲ್ಲಿತ್ತು ಮದವೆಂಬ ಮೊಟ್ಟೆ; ದೇವೇಂದ್ರನ ಕರೆ ಎಂಬ ಕಾವಿಗೆ ಆ ಮೊಟ್ಟೆಯೊಡೆದು ಮರಿಯಾಯಿತು. ಬುಸ್ಸೆಂದು ಹೆಡೆ ಎತ್ತಿತು. ಅದರ ಫಣಾಘಾತಕ್ಕೀಡಾಗಿ ಪತಿತಳಾದಳು ಅಹಲ್ಯೆ. ದೇವರಾಜ ತನ್ನನ್ನು ಬಯಸಿದನೆಂಬ ಅನುಚಿತ ಅಹಂಕಾರದಲ್ಲಿ ಅವಳ ವಿವೇಚನೆ, ವಿವೇಕದ ಕಣ್ಣು ಕುರುಡಾಯಿತು. ತಾನು ಮಾಡುತ್ತಿರುವುದು ತಪ್ಪೆಂದು ತಿಳಿದೂ ಆ ಕ್ಷಣದ, ಕುತೂಹಲಜನ್ಯವಾದ ಚಪಲ ತಡೆಯದೇ ಹೋದಳು. ಅರಿತೂ ಅಪರಾಧ ಮಾಡಿದಳು. ಇದೇ ಮಾನವ ಮತಿಯ ಮಿತಿ. ಅವಳೇನೂ ಎಳೆಯ ತರುಣಿಯಲ್ಲ, ಸಂಸಾರ ಮಾಡಿ ಮಕ್ಕಳ ತಾಯಿಯೂ ಆಗಿದ್ದವಳು. (ಮುಂದೆ ಅವಳ ಶಾಪ ವಿಮೋಚನೆಯಾದಾಗ ಅವಳ ಮಗ ಶತಾನಂದ, ತನ್ನ ತಾಯಿಯನ್ನು ತಂದೆ ಕ್ಷಮಿಸಿದರೇ ಎಂದು ಕೇಳುತ್ತಾನೆ. - ಬಾಲಕಾಂಡ ೫೧ನೇ ಸರ್ಗ)

**ತಿಳಿದೂ ತಪ್ಪು ಮಾಡಿದ** ಅಹಲ್ಯೆಯ **ಕುತೂಹಲ,** ತಾನು ದೇವರಾಜನೆಂಬ ಅಹಂಕಾರ ಹಾಗೂ ರೂಪಸಿ ಯರನ್ನು ಕಂಡಾಗ **ತಡೆಯಲಾರದ ಚಪಲ,** ಈ ಎರಡೂ ಇಂದಿಗೂ ನಮ್ಮಲ್ಲಿ ಅನೇಕರಲ್ಲಿ ಅನೇಕ ವೇಳೆ ಕಂಡು ಬರುವ ಗುಣಗಳೇ. ವ್ಯಕ್ತಿಗಳು, ಸನ್ನಿವೇಶಗಳು ಬೇರೆ ಬೇರೆಯಾದರೂ, ದೌರ್ಬಲ್ಯಗಳು ಮಾತ್ರ ಅವೇ. ತಪ್ಪು ಮಾಡುವುದು ಮಾನವ ಸಹಜ. ಆದರೆ ಅರಿತೂ ಅಪರಾಧ ಮಾಡುವುದಿದೆಯಲ್ಲಾ ಅದೇ ಮಾನವ ಮಿತಿ. ಆದರೆ ಸಹಜವಾದದ್ದೆಲ್ಲ ಸರಿಯಾದುದಲ್ಲ. ಆದ್ದರಿಂದ ಸರಿಯಲ್ಲದ್ದನ್ನು ಸರಿಪಡಿಸಬೇಕಾದರೆ, ಆಯಾ ಸಂದರ್ಭಕ್ಕೆ ತಕ್ಕಂತೆ ಶಿಕ್ಷೆ, ದಂಡ ವಿಧಿಸಬೇಕು. ಆದ್ದರಿಂದಲೇ ಗೌತಮರು ಇಂದ್ರನಿಗೂ ಅಹಲ್ಯೆಗೂ ಘೋರ ಶಾಪ ಕೊಟ್ಟರು. ಆದರೆ ಇಲ್ಲಿ ಗಮನಿಸಬೇಕಾದ ಒಂದು ವಿಷಯವಿದೆ. ಇಂದ್ರನಿಗೆ, ಆದ ಅನಾಹುತಕ್ಕೆ ಪ್ರೇರಕನಾದವನಿಗೆ, ಯಾವ ವಿಶಾಪ ಕೊಡಲಿಲ್ಲ. ಆದರೆ ಅವನಿಂದ ಪ್ರೇರಿತಳಾಗಿ ವಿವೇಕಗೆಟ್ಟವಳಿಗೆ ಪಶ್ಚಾತ್ತಾಪದ, ಏಕಾಂತದಲ್ಲಿ ವಾಯುಭಕ್ಷಣ ಮಾತ್ರದಿಂದ ಜೀವಿಸಿರ ಬೇಕಾದ ಶಾಪದ ಬೆಂಕಿಯಲ್ಲಿ ಬೆಂದ ನಂತರ, ಶಾಪ ವಿಮೋಚನೆ ಎಂಬ ಪರಿಹಾರವನ್ನೂ ಗೌತಮರು ಸೂಚಿಸಿದ್ದಾರೆ.




ನಿರ್ಮಲ ನಿಸರ್ಗವೇ ಸ್ವರ್ಗ
ಕಲುಷಿತ ಪ್ರಪಂಚವೇ ನರಕ
ದೈವದತ್ತ ನಿಸರ್ಗ ಹಾಳುಮಾಡಿ
ನರಕ ಸೃಷ್ಟಿಸಿಕೊಂಡ ನಾವು ಮರ್ಕಟ!

ಡಿ. ಎ. ಬಡಿಗೇರ
ತೆಗ್ಗಿನಪೇಟೆ, ಗದಗ - ಬೆಟಗೇರಿ - ೫೮೨ ೧೦೨

ರಾಮಾಯಣ ಸನಾತನ ಗ್ರಂಥ. ಆದರೆ ಅದರಲ್ಲಿರುವ ಜೀವನದರ್ಶನ ನಿತ್ಯನೂತನ. ಈ ಕಾಲಕ್ಕೆ, ಈ ಕಾವ್ಯ ಭಾಗದ ಪ್ರಸ್ತುತತೆಯನ್ನು ಕುರಿತು ಆಲೋಚಿಸೋಣ. ಅಹಲ್ಯೆಯಂತೆ ಸಂದರ್ಭ, ಸನ್ನಿವೇಶಗಳ ಸುಳಿಗೆ ಸಿಲುಕಿಯೋ, ಕುತೂಹಲದ ಕುಣಿಕೆ ಬಿಗಿದೋ, ಬಲಾತ್ಕಾರದ ಅತ್ಯಾಚಾರಕ್ಕೆ ಒಳಗಾಗಿಯೋ ಪಥಭ್ರಷ್ಟ ರಾದ ಮಹಿಳೆಯರು ಇಂದಿಗೂ ಇದ್ದಾರೆ. ಅಂತಹವರನ್ನು ನಮ್ಮ ಭಾರತೀಯ ಸಮಾಜ ನೀತಿಗೆಟ್ಟವರೆಂದೇ ಭಾವಿಸುತ್ತದೆ. ''ನಾಯಿಮುಟ್ಟಿದ ಮಡಕೆ'' - ಇದು ಆ ಮಹಿಳೆಯರಿಗೆ ದೊರಕುವ ಬಿರುದು. ಆ ಮಡಕೆ ಯಂತೆಯೇ ಆ ಮಹಿಳೆಯರಿಗೂ ಮನೆಯಿಂದಲೇ ಗಡಿಪಾರು. ಆಮೇಲೆ ಅವರೆಷ್ಟೇ ಪಶ್ಚಾತ್ತಾಪಪಟ್ಟರೂ ಅಥವಾ ಆ ಸಂದರ್ಭದಲ್ಲಿ ಅವರು ಸಂಪೂರ್ಣ ಅಸಹಾಯಕರಾಗಿದ್ದರೆಂದು ಅರಿವಾದರೂ ಅವರಿಗೆ ಕ್ಷಮೆ ಇಲ್ಲವೇ ಇಲ್ಲ. ಅತ್ಯಾಚಾರದ ಮಾತು ಹಾಗಿರಲಿ, ಈ ಇಪ್ಪತ್ತೊಂದನೇ ಶತಮಾನದಲ್ಲಿಯೂ, ಹೆಣ್ಣನ್ನು ಹುಟ್ಟುವ ಮೊದಲೇ ಹೊಸಕಿಹಾಕುತ್ತಿರುವ ಈ ವೈಜ್ಞಾನಿಕ ಯುಗ ದಲ್ಲಿಯೂ ಹೆಂಡತಿಯ ಶೀಲವನ್ನು ಶಂಕಿಸಿ ಕೊಂದೇ ಹಾಕಿಬಿಡುವ ಗಂಡಂದಿರಿದ್ದಾರೆ. ಬೇರೆ ಗಂಡಸರು ಹಾಗಿರಲಿ, ಸ್ವಂತ ಅಣ್ಣ ತಮ್ಮಂದಿರೊಂದಿಗೆ, ಸ್ವಲ್ಪ ಸಲಿಗೆ ಯಾಗಿ ನಗುನಗುತ್ತಾ ಮಾತಾಡಿದರೆ, ಆ ಹೆಂಡತಿಯನ್ನು ಅನುಮಾನಿಸಿ, ಅವಮಾನಿಸಿ, ಕಾಡಿ, ಹೊಡೆದು ಬಡೆದು ಮಾಡುವ 'ಧೀರ' ಗಂಡಂದಿರಿದ್ದಾರೆ! ಉದ್ಯೋಗಸ್ಥ ವನಿತೆಯರನೇಕರ ಗಂಡಂದಿರ ಶಂಕೆ, ಅಂಕೆಗಳಂತೂ ಹೇಳುವುದೇ ಬೇಡ. ಇಂತಹ ಸಮಾಜದಲ್ಲಿ ಅಹಲ್ಯೆ ಯಂತೆ ಜಾರಿದರೆ? ಅಥವಾ ಮನಸ್ಸು ಜಾರದಿದ್ದರೂ, ಮೈ ಪ್ರತಿಭಟಿಸುವಷ್ಟು ಶಕ್ತವಾಗಿಲ್ಲದಿದ್ದರೆ? ಪ್ರಮಾದ ನಡೆದೇಹೋಗುತ್ತದೆ. ಅಟ್ಟದಿಂದ ಬಿದ್ದವನನ್ನು ದೊಣ್ಣೆಯಿಂದ ಚಚ್ಚಿದರು ಎಂಬಂತೆ ಆ ಮಹಿಳೆಯನ್ನು ಅವಮಾನಿಸುತ್ತಾರೆ, ಅವಹೇಳನ ಮಾಡುತ್ತಾರೆ, ತಿರಸ್ಕರಿಸುತ್ತಾರೆ. ಅವಳು ಎಂದೆಂದಿಗೂ ಕಳಂಕಿತಳೇ ಎನಿಸಿಕೊಂಡು ಸಂಸಾರದಲ್ಲೂ, ಸಮಾಜದಲ್ಲೂ ಅಸ್ಪೃಶ್ಯ ಳಾಗಿ ಬಹಿಷ್ಕೃತಳಾಗುತ್ತಾಳೆ. ಅವಳಿಗೆ ಸಾವೊಂದೇ ಶರಣು. ಸಾಯಲು ಧೈರ್ಯವಿಲ್ಲದೆ, ಬದುಕಲು ಮಾರ್ಗವಿಲ್ಲದೆ ಅವರಲ್ಲಿ ಅನೇಕರು ವೇಶ್ಯಾವಾಟಿಕೆಯ ಪಾಲಾಗುತ್ತಾರೆ. ಕ್ಷಣಿಕ ಚಪಲಕ್ಕೆ, ಸಾಸಿವೆಯಷ್ಟು ಸುಖಕ್ಕೆ ಅಥವಾ ಇದ್ಯಾವುದೂ ಅಲ್ಲದೆಯೂ ನಡೆದುಹೋದ ದುರಾ

ಕ್ರಮಣಕ್ಕೆ ಅವರು ಸಾಗರದಷ್ಟು ಸಂಕಟ ಅನುಭವಿಸುತ್ತ, ಬದುಕಿಯೂ ಸತ್ತಂತೆ, ಶಾಪಗ್ರಸ್ತಳಾದ ಅಹಲ್ಯೆಯಂತೆ **ಸದಾಕಾಲ, ಕೊನೆಯವರೆಗೂ** ಉಸಿರಾಡುತ್ತಿರುತ್ತಾರೆ. ಅವರಿಗೆ ವಿಮೋಚನೆ ಇದೆಯೇ ?

ಆದರೆ ಉದಾರ ಮನಸ್ಕರಾದ ವಾಲ್ಮೀಕಿ ಮುನಿಗಳು ಇಂತಹ ಸಂದರ್ಭದಲ್ಲಿ **ನಾವು** ನಡೆದುಕೊಳ್ಳಬೇಕಾದದ್ದು **ಹೇಗೆ** ಎಂದು ತೋರಿಸಿಕೊಟ್ಟಿದ್ದಾರೆ. ರಾಮಾಯಣ ರಚನೆಯಾದುದೇ ಒಂದು ಕರುಣಾಜನಕ ಸಂದರ್ಭದಲ್ಲಿ ಅಲ್ಲವೇ? ಕ್ರೌಂಚ ಮಿಥುನದಲ್ಲಿ ಒಂದು, ಬೇಡನ ಬಾಣಕ್ಕೆ ಬಲಿಯಾದಾಗ ನೊಂದ ವಾಲ್ಮೀಕಿಯ ಬಾಯಿಂದ ಹೊರಬಿದ್ದ ಶ್ಲೋಕರೂಪದ ಶಾಪವೇ ಕಾವ್ಯಕ್ಕೆ ಅಂಕುರಾರ್ಪಣೆಯಾಯಿತಲ್ಲವೇ? ಪಕ್ಷಿಯ ಬಗೆಗೇ ಇಷ್ಟು ಮೃದುವಾದ ವಾಲ್ಮೀಕಿಯ ಮನಸ್ಸು ಹೆಣ್ಣಿನ ಸಂಕಟಕ್ಕೆ ಹೇಗೆ ಸ್ಪಂದಿಸಿರಬೇಕು? ಭೋಗಭೂಮಿಯಲ್ಲೇ ಬಾಳುತ್ತಿದ್ದ ಇಂದ್ರನೇನೋ ಕಾಮುಕನಾದರೂ, ತಪಸ್ವಿಯ ಸತಿಯಾಗಿ ಋಷ್ಯಾಶ್ರಮದಲ್ಲಿ ಯಮನಿಯಮಗಳಿಂದ ಬಾಳುತ್ತಿದ್ದ ಅಹಲ್ಯೆ ಜಾರಿದ್ದು ಕೂಡ ವಾಲ್ಮೀಕಿಯವರಲ್ಲಿ ಕರುಣೆ ಉಕ್ಕಿಸಿತು. ಅವಳ ತಪ್ಪಿಗೆ (ಕ್ಷಣಿಕ ಚಪಲವೇ ಆಗಿದ್ದರೂ) ಘೋರಶಿಕ್ಷೆ ಶಾಪದ ರೂಪದಲ್ಲಿ ದೊರಕಿತು. ಆದರೆ ಅನಂತರ ವಿಮೋಚನೆಯ ಮಾರ್ಗವೂ ದೊರೆಯಿತು. ಅಹಲ್ಯಾ ಶಾಪ ವಿಮೋಚನೆಯ **ಪ್ರಸಂಗವಿಲ್ಲದಿದ್ದರೂ** ರಾಮಾಯಣ ಕಾವ್ಯದ **ಮುಖ್ಯ ಆಶಯಕ್ಕೆ ಭಂಗವೇನೂ ಬರುತ್ತಿರಲಿಲ್ಲ.** ಕತೆಯ ಓಟಕ್ಕೆ ಕುಂದಾಗುತ್ತಿರಲಿಲ್ಲ. ಕತೆಗೆ ಅದು ಅಗತ್ಯ ಕೂಡ ಇಲ್ಲ. ಆ ಪ್ರಸಂಗ ಇಲ್ಲದೆಯೆ ಕತೆ ಸ್ವಾರಸ್ಯವಾಗಿ, ಸುಸಂಬದ್ಧವಾಗಿ ಮುಂದುವರೆಯುತ್ತದೆ. ಆದರೆ ನನ್ನ ಅನಿಸಿಕೆಯಲ್ಲಿ, ವಾಲ್ಮೀಕಿ ಮುನಿಗಳು ಉದ್ದೇಶಪೂರ್ವಕವಾಗಿ ಈ ಪ್ರಸಂಗವನ್ನು ರಾಮಾಯಣದಲ್ಲಿ ಜೋಡಿಸಿದ್ದಾರೆ. ಹೆಣ್ಣಿನ ಬಗ್ಗೆ ಆಗುತ್ತಿದ್ದ ಅನ್ಯಾಯಗಳು ಅವರ ಗಮನಕ್ಕೆ ಬಂದಿರಬೇಕು. ಆ ವೇಳೆಗಾಗಲೇ, ಜಮದಗ್ನಿ ಮುನಿಗಳು, ತಮ್ಮ ಹೆಂಡತಿ ರೇಣುಕೆಯ ತಲೆಯನ್ನು ತಮ್ಮ ಮಗ ಪರಶುರಾಮನಿಂದಲೇ ಕಡಿಸಿಹಾಕಿದ್ದರಲ್ಲಾ! ಬೆಳಕಿಗೆ ಬಾರದ ಇಂಥ ಪ್ರಸಂಗಗಳು ಇನ್ನೆಷ್ಟನ್ನು ವಾಲ್ಮೀಕಿಗಳು ಕಂಡಿದ್ದರೋ? ಹಾಗಾಗಿ ಈ ಅಹಲ್ಯಾ ಶಾಪ ವಿಮೋಚನಾ ಪ್ರಸಂಗವನ್ನು ಕಾವ್ಯದಲ್ಲಿ ಸೇರಿಸಿ, ಮಾನವ ಮತಿಯ ಇತಿ ಮತ್ತು ಮಿತಿ ಹಾಗೂ ಅದು **ಸಾಗಬೇಕಾದ ಗಮ್ಯಗತಿಯ** ಚಿತ್ರಣ ಕೊಟ್ಟಿದ್ದಾರೆ. ಅಹಲ್ಯೆಯ ಶಾಪ ವಿಮೋಚನೆಗೆ ಶ್ರೀರಾಮ ಒಂದು ನಿಮಿತ್ತವಾದ, ಒಂದು ಉಪಕರಣವಾದ ಅಷ್ಟೆ. ತಪ್ಪು ಮಾಡಿದ ಪತ್ನಿಗೆ, ಒಂದು ಕಾಲಾವಧಿಗೆ ಮಾತ್ರ ಶಿಕ್ಷೆ ವಿಧಿಸಿದ **ಗೌತಮರೂ,** ಆ ಶಿಕ್ಷೆಯ ಗಡುವು ತೀರಿ ಆಕೆ ಬಿಡುಗಡೆಯಾಗಲು ಅಲ್ಲಿಗೆ ಶ್ರೀರಾಮನನ್ನು ಕರೆತಂದ **ವಿಶ್ವಾಮಿತ್ರರೂ ನಿಜವಾದ ಅರ್ಥದಲ್ಲಿ ಪತಿತಪಾವನರು.** ಶ್ರೀರಾಮ ಅಹಲ್ಯೆಗೆ ನಮಸ್ಕರಿಸಿದ. ಗೌತಮರು ಅವಳನ್ನು ಸ್ವೀಕರಿಸಿದರು. ವಿಶ್ವಾಮಿತ್ರರು ಆ ದಂಪತಿಗಳನ್ನು ಹರಸಿದರು. ಇಲ್ಲಿ ಪುತ್ರ ಸಮಾನನಾದ ಶ್ರೀರಾಮನೂ, ಪತಿಯಾದ ಗೌತಮರೂ ಹೆಣ್ಣಿನ ಸಂಸಾರದ ಪ್ರತೀಕ. ವಿಶ್ವಾಮಿತ್ರರು ಸುತ್ತಲ ಸಮಾಜದ ಪ್ರತೀಕ. ಎಂದರೆ ಕ್ಷಣಿಕ ಚಾಪಲ್ಯಕ್ಕೋ ಸನ್ನಿವೇಶದ ಒತ್ತಡಕ್ಕೋ, ಹೇಗಾದರಾಗಲೀ, ಜಾರಿದ ಹೆಣ್ಣನ್ನು, ಪಶ್ಚಾತ್ತಾಪದ ನಂತರ, ಅವಳ ಪರಿವಾರವೂ ಸಮಾಜವೂ ಸ್ವೀಕರಿಸಬೇಕು, ದೂರೀಕರಿಸುವುದಲ್ಲ, ದೋಷವನ್ನೇ ದೊಡ್ಡದು ಮಾಡುವುದಲ್ಲ; ಅದನ್ನು ದೌರ್ಬಲ್ಯವೆಂದು ಪರಿಗಣಿಸಬೇಕು. ದೇಹಕ್ಕೆ ರೋಗ ಬರುವಂತೆ, ಮನಸ್ಸಿಗೆ ಈ ದೌರ್ಬಲ್ಯ. ರೋಗಕ್ಕೆ ಮದ್ದು ಕೊಡಬೇಕು, ಮರಣದಂಡನೆಯಲ್ಲ. ಹಾಗೆಯೇ ದೌರ್ಬಲ್ಯಕ್ಕೂ ಸಹ. ಪಾಪವನ್ನು ದೂರ ಮಾಡಬೇಕು, ಪಾಪಿಯನ್ನು ದೂರೀಕರಿಸುವುದಲ್ಲ. ಹಾಗಾದಾಗ ಮಾತ್ರವೇ ಪತಿತರೂ ಪಾವನರಾಗುತ್ತಾರೆ.

ಸಾಹಿತ್ಯವು ಸಮಾಜದ ಪ್ರತಿಬಿಂಬ ಮಾತ್ರ ಆದರೆ ಸಾಲದು. ಪ್ರಗತಿ ಪಥದೆಡೆಗೆ ಕತ್ತಲಲ್ಲೂ ದಾರಿತೋರುವ ಕೈದೀಪವೂ ಆಗಬೇಕು. ವಾಲ್ಮೀಕಿಗಳು ಸಮಾಜದಲ್ಲಿ ನಿತ್ಯ ನಡೆಯುವ ಘಟನೆಗಳನ್ನು ಗಮನಿಸಿದ್ದಾರೆ. ಮಾನವ ಮತಿಯ ಇತಿಮಿತಿಗಳನ್ನು ಅರಿತಿದ್ದಾರೆ. ಆದರೆ ಸಾಗಬೇಕಾದ ಗತಿ ಯಾವುದು ಎಂಬುದನ್ನು ಕಾವ್ಯಮಯವಾಗಿ ಸೂಚಿಸಿದ್ದಾರೆ. ಹೆಣ್ಣಿನ ಬಗ್ಗೆ ಅವರಿಗಿರುವ ಕರುಣೆ, ಔದಾರ್ಯ ಇಲ್ಲಿ ಹೊನಲಾಗಿ ಹರಿದಿದೆ. ಈ ರೀತಿ ಸಾಹಿತಿಗೆ ಇರಬೇಕಾದ ಸಾಮಾಜಿಕ ಬದ್ಧತೆಗೆ ಸಾಕ್ಷಿಯಾಗಿದ್ದಾರೆ.

ರಾಮಾಯಣ ಕೇವಲ ಕಾವ್ಯವಲ್ಲ. ಇಳಿವಯಸ್ಸಿನವರಿಗೆ ಹೊತ್ತು ಕಳೆಯುವ ಸಾಧನ ಮಾತ್ರವಲ್ಲ. ಪುಣ್ಯಾರ್ಜನೆಗಾಗಿ ಪಾರಾಯಣ ಮಾತ್ರ ಮಾಡಿ ಮುಚ್ಚಿಡುವ ಧಾರ್ಮಿಕ ಗ್ರಂಥವಲ್ಲ. ವಾಲ್ಮೀಕಿಗಳ ಈ ಕಾವ್ಯ, ಈ ಪ್ರಸಂಗದಲ್ಲಿ ದೇವೇಂದ್ರ, ಅಹಲ್ಯೆಯರ ಉದಾಹರಣೆ ಕೊಟ್ಟು ನಮಗೆ, ''ನೀವೂ ಎಡವಿ ಬಿದ್ದೀರಿ ಜೋಪಾನ'' ಎಂದು ಬೆರಳೆತ್ತಿ ತೋರುತ್ತ, ಶ್ರೀರಾಮ, ವಿಶ್ವಾಮಿತ್ರ, ಗೌತಮರ ಉದಾಹರಣೆಯಿಂದ, ''ಎಡವಿ ಬಿದ್ದವರನ್ನು ಹಿಡಿದೆತ್ತಿ, ಸರಿದಾರಿಗೆ ಕರೆತನ್ನಿ'' ಎಂದು ಕೊರಳೆತ್ತಿ ಕೂಗುವ ಮಾರ್ಗದರ್ಶಿ.

**ಬಿ. ಜಿ. ಕುಸುಮಾ**
೧೯೪೪, ೫ನೇ ಮೈನ್, ೪ನೇ ಬ್ಲಾಕ್, ೩ನೇ ಫೇಸ್, ೩ನೇ ಸ್ಟೇಜ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

---

*೪೬ನೇ ಪುಟದಿಂದ (ಕನ್ನಡದ ಸೂಫೀ ಚಿಂತನೆ)*

ವಿಡಂಬನೆ ಮತ್ತು ಅನುಭಾವದ ಸ್ವರೂಪವನ್ನು ಹೇಳುವ ಸಾಹಿಬಣ್ಣ ತಾತನೆಂಬ ಸೂಫೀ ಕವಿಯ ಪದ್ಯವನ್ನು ಪ್ರಾತಿನಿಧಿಕವಾಗಿ ಗಮನಿಸಬಹುದು.

*ನಮಾಜು ಮಾಡಿದೆನು ದಿನದಿನ ನಮಾಜು ಮಾಡಿದೆನು*
*ನಮಾಜು ಮನಸಿನ ಆವಾಜು ಕೇಳಿ ಸುಮ್ಮನೆ ಚಿತ್ತವು ಗೊತ್ತನಿಲಿಸೀ*
*ನಮಾಜ ಮಾಡಿದೆನೊ ದಿನದಿ ನಮಾಜು ಮಾಡಿದೆನೊ ॥*
*ಅಂತರಂಗದ ನಮಾಜು ಸಹಜದು ನಿರಂತರ ಮಾಡೋ ಹೊಳೆವೋದು*
*ಭ್ರಾಂತಿಗಳಿಗೆ ತೋರುವುದಲ್ಲಾ ಅರ್ತ ಗುರುವಿನ ಪೂಜೆ ಮಾಡಿದವ ಬಲ್ಲ ॥*

ಇಂತಹ ಸೂಫೀ ಪಂಥವು ಭಾರತದ ಉದ್ದಗಲಕ್ಕೂ ಅಲ್ಲದೆ ವಿಶೇಷವಾಗಿ ಮುಸ್ಲಿಂ ದೊರೆಗಳ ಆಡಳಿತವನ್ನು ಅನುಭವಿಸಿದ ಎಲ್ಲಾ ಭಾಷೆ, ಪ್ರದೇಶಗಳಲ್ಲಿಯೂ ಇದೆ. ಇದರ ವಕ್ತಾರರಾಗಿ ಸಂತರು ಮಾತ್ರವಲ್ಲದೆ ರಾಜರು, ಸೈನಿಕರು, ಭೂಮಾಲೀಕರು, ವ್ಯಾಪಾರಿಗಳು, ಕವಿಗಳು, ಗಾಯಕರು, ದರ್ವೇಶಿಗಳು; ಇವರೇ ಮೊದಲಾದ ಸಮಾಜದ ಹತ್ತು-ಹಲವು ವರ್ಗಗಳ ಜನರಿದ್ದಾರೆ. ಹೀಗೆ ವಿಭಿನ್ನ ಸಾಮಾಜಿಕ ವರ್ಗಗಳಲ್ಲದೇ ಇದರ ವೈಚಾರಿಕ ಆಕೃತಿಯು ಯಾವುದೋ ಒಂದು ರೂಪದಲ್ಲಿ ಮಾತ್ರ ಕಂಡುಬಾರದೆ ಸ್ವರರಚನೆ, ಜನಪದ ಹಾಡು, ಕತೆ, ಮಹಾಕಾವ್ಯ, ಉಪದೇಶ, ಆಚರಣೆ, ನಂಬಿಕೆ, ಹೀಗೆ ಅನೇಕ ರೂಪಗಳಲ್ಲಿ ಕಂಡುಬರುತ್ತದೆ. ಈ ಎಲ್ಲಾ ಪ್ರಕಾರಗಳು ಮತ್ತು ಸೂಫೀ ಜನವರ್ಗಗಳು; ಇವನ್ನು ತತ್ವಕೇಂದ್ರಿತ ನೆಲೆಯಲ್ಲಿ ಕ್ರೋಡೀಕರಿಸಿದಾಗ ಸೂಫಿಸಂನ ಸ್ವರೂಪು ವ್ಯಕ್ತವಾಗುತ್ತದೆ. ಇದು ಸ್ಥೂಲ ರೂಪ ಮಾತ್ರ. ಕಾರಣ, ಈ ಸೂಫೀವಾದವು ಜಾಗತಿಕ ನೆಲೆಯಲ್ಲಿ ವಿಭಿನ್ನ ಚಾರಿತ್ರಿಕ ಸನ್ನಿವೇಶಗಳ ಹಿನ್ನೆಲೆಯಲ್ಲಿ ವೈವಿಧ್ಯಯತೆಯನ್ನು ತಾಳಿರುವಂತೆ ಪ್ರಾದೇಶಿಕ ತತ್ವ-ಸಿದ್ಧಾಂತಗಳ ಮುಖಾಮುಖಿಯಲ್ಲಿ ಅಥವಾ ಅವುಗಳೊಂದಿಗಿನ ಅನುಸಂಧಾನದಲ್ಲಿ ಸಹ ವೈವಿಧ್ಯತೆಯನ್ನು ತಾಳಿದೆ. ಅಲ್ಲದೇ ಇದು ಕವಿಯಿಂದ ಕವಿಗೂ, ಚಿಂತಕನಿಂದ ಚಿಂತಕನಿಗೂ, ಭಿನ್ನವಾಗಿರುವುದನ್ನು ಕಾಣುತ್ತೇವೆ. ಉದಾಹರಣೆಗೆ : ಚಿದಾನಂದ ಅವಧೂತ ಮತ್ತು ಶರೀಫ.

ಹೀಗೆ ಸೂಫೀವಾದವು ಚಾರಿತ್ರಿಕವಾಗಿ ಪ್ರಾದೇಶಿಕವಾಗಿ ಭಿನ್ನತೆಗಳನ್ನು ಸ್ಥಾಪಿಸುತ್ತಾ ಬಂದಿದ್ದರೂ ಅದರ ಮಾನವೀಯ ಪ್ರೇಮ ಮತ್ತು ಅನುಭಾವ ತತ್ವದಲ್ಲಿ ಬಹುಪಾಲು ಸ್ಥಾಯೀ ಗುಣವನ್ನು ಉಳಿಸಿಕೊಂಡುಬಂದಿದೆ. ಇದರ ಪ್ರಕ್ರಿಯಾತ್ಮಕ ನೆಲೆಯು ಸ್ಥಾಪಿತ, ಸಾಂಸ್ಥಿಕ, ಸ್ಥಾವರ ಚಿಂತನೆಗಳಿಗೆ ಪರ್ಯಾಯವನ್ನು ಕಟ್ಟಿಕೊಡುತ್ತಾ, ಬದುಕನ್ನು ಸಹ್ಯಗೊಳಿಸುತ್ತಾ ಬಂದಿದೆ. ಅನೇಕ ಬಗೆಯ ಗಡಿಗಳನ್ನು ದಾಟಿರುವ ಇದು ದ್ವೀಪಗಳು ಅಂತರವನ್ನೇರ್ಪಡಿಸುತ್ತಿರುವ ಯಾವತ್ತಿನ ಕಾಲದಲ್ಲಿ ಅತ್ಯಂತ ಮುಖ್ಯವೂ ಆಗುತ್ತದೆ. ಅದು ಇದರ ಅನನ್ಯತೆ ಮತ್ತು ಇವತ್ತಿನ ಪ್ರಸ್ತುತತೆ. ಇಲ್ಲಿಯ ಸಾಲಿನ ಎರಡನೆಯ ವಿಚಾರದ ಹಂಬಲವು ನಾಳೆಯನ್ನು ಹೊಸ ರೂಪದಲ್ಲಿ ಕಾಣಲು ಆಶಿಸುತ್ತದೆ.

*(ಆಕರಗಳು : ಕರ್ನಾಟಕ ಸೂಫೀಗಳು - ರಹಮತ್ ತರೀಕೆರೆ*
*ಕರ್ನಾಟಕ ಚರಿತ್ರೆ, ಸಂಪುಟ ೯*
*ಪ್ರಧಾನ ಸಂಪಾದಕರು - ಪ್ರೊ॥ ಬಿ. ಷೇಕ್ ಅಲಿ*
*ಶಿಶುನಾಳ ಶರೀಫರ ಗೀತೆಗಳು : ಸಂಪಾದಕರು : ಶಿವಾನಂದ ಗುಬ್ಬಣ್ಣನವರ)*

**ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ**
ಹಿರಿಯ ಶ್ರೇಣಿ ಉಪನ್ಯಾಸಕ
ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ
ಬೆಂಗಳೂರು - ೫೬೦ ೦೫೬

# ನೆರೆಯವರು

– ಪಾಲ್ ಕ್ಯಾವನಾ (ಆಸ್ಟ್ರೇಲಿಯಾದ ಕವಿ)

(ಈ ನೆರೆಯವರು ನಾವು ನೀವಾಗಬಹುದು, ಅಕ್ಕಪಕ್ಕದ ದೇಶಗಳು ರಾಷ್ಟ್ರಗಳಾಗಬಹುದು – ಕವಿ ಈ ಕವನದಲ್ಲಿ ತೀರಾ ಹಗುರಾಗಿ ಎನ್ನುವಂತೆ ಅಭಿವ್ಯಕ್ತಿಸಿರುವ, ಮನುಷ್ಯನಲ್ಲಿ ಅಡಗಿರುವ ಮೂಲಭೂತವಾದ ಕೆಡುಕು ಮಾತ್ರ ಕಟುಸತ್ಯ. ವೈರ ಬೆಳೆಯಲು ಕಾರಣ ಸಣ್ಣದಾದರೂ ಸಾಕು, ಸರ್ವನಾಶಕ್ಕೆ ಕೊಂಡೊಯ್ಯಲು ವೈರಕ್ಕೆ ಹೆಚ್ಚು ಸಮಯ ಬೇಕಿಲ್ಲ)

ಇದು ಹೇಗೆ ಆರಂಭವಾಯಿತೆಂಬುದು ನನಗೆ ಖಚಿತವಾಗಿ ನೆನಪಿಲ್ಲ.
ಅವರು ಎತ್ತರದ ದೊಡ್ಡ ಬೇಲಿ ಕಟ್ಟಿಕೊಂಡರು
ಹಾಗೂ ಬಲು ಗಲಾಟೆಯವರು, ಅವರ ನಾಯಿ ವಿಪರೀತ ಊಳಿಟ್ಟಿತೆಂದು
ಯಾರೋ ಅದಕ್ಕೆ ವಿಷವಿಟ್ಟರು.

ಆ ಸಂಗತಿಯ ಬಗೆಗೆ ನನಗೇನಾದರೂ
ತಿಳಿದಿರಬಹುದೆಂದು, ನನಗೂ ಹೇಳಿದರು. ನನಗೂ ತಿಳಿಯಬೇಕೆನಿಸಿತು
ನಂತರ ಅವರ ಮರಗಳು, ಬೇಲಿಯಿಂದ ಮೇಲೆ ಮೇಲಕ್ಕೆ
ಬೆಳೆಯತೊಡಗಿದವು, ಎಲೆಗಳನ್ನು ಉದುರಿಸಿದವು.

ಆದ್ದರಿಂದ ಆ ಮರಗಳನ್ನು ಕತ್ತರಿಸಿದೆ, ಮತ್ತು ಎಲ್ಲವನ್ನೂ
ಎತ್ತಿ ಎಸೆದೆ. ಆದರೂ ಅವರು ಏನನ್ನೂ
ಮಾಡಲಿಲ್ಲ ಆ ಮರಗಳಿಗೆ, ಹಾಗಾಗಿ ನಾನು
ಇತ್ತ ಕಡೆಯ ಎಲ್ಲ ಮರಗಳಿಗೂ ಆಸಿಡ್ ಸಿಂಪಡಿಸಿದೆ.

ಅವರು ಕೌನ್ಸಿಲ್‌ಗೆ ದೂರು ಕೊಟ್ಟರು.
ನಾನು ಉತ್ತರಿಸಿದೆ "ಅದು ಬರಿ ಕೆಟ್ಟಮಣ್ಣು ಅಷ್ಟೆ."
ಮತ್ತೆ ಒಳಗೆ ಹೋಗಿ ಎಲ್ಲ ಮರಗಳಿಗೂ
ಆಸಿಡ್ ಹಾಕಿ ಬಂದೆ. ಆಗ ಅಲ್ಲಿ ಮಳೆಗಾಲದಂತಿತ್ತು.



ಆ ಮನುಷ್ಯ ನನ್ನನ್ನು ಆಕ್ರಮಿಸಲು ಬಂದ.
ನಾನವನನ್ನು ಮೆಟ್ಟಿಲ ಕೆಳಗಿನ ತನಕ ಅಟ್ಟಿಸಿಕೊಂಡು ಹೋಗಿ ಹೊಡೆದೆ.
ಅವನ ಮುಖವನ್ನೆಲ್ಲಾ ರಕ್ತಮಯ ಮಾಡಿದೆ. ಆಗ ಇದು ಆರಂಭವಾಯಿತು.

ಅವನ ಮಕ್ಕಳಲ್ಲೊಬ್ಬ, ಗಾಳಿ ಬಂದೂಕಿನಿಂದ
ನಮ್ಮ ಕಿಟಕಿಗಳನ್ನೊಡೆಯಲೆತ್ನಿಸಿದ. ಆದರೆ ಕಲ್ಲು ಹೊಡೆತಗಳಿಂದ,
ಊದಿಕೊಂಡ ಕಣ್ಣುಗಳಿಂದ ಮನೆಗೆ ಹಿಂತಿರುಗಿದ.
ಅವನಿಗಿಂತಲೂ ಬಲು ಒಳ್ಳೆ ಗುರಿಕಾರ ನಾನಾಗಿದ್ದೆ.

ನಮ್ಮ ಹುಡುಗನೊಬ್ಬನನು ಅವರು ಹೊಡೆದರು.
ನನಗೂ ಇದು ಸಾಕು ಸಾಕಾಯಿತು. ನಾವು
ಒಂದು ಡಬ್ಬ ಪೆಟ್ರೋಲನ್ನು ಒಂದು ಫ್ಯೂಸಿನೊಡನೆ
ಅವರ ಅಂಗಳದಲ್ಲಿಟ್ಟೆವು. ಹತ್ತಿ ಉರಿದವು
ಎಲ್ಲ ಒಣಮರಗಳು. ಒಂದು ಮರ ಮನೆಯ ಮೇಲೆಯೇ ಬಿದ್ದಿತು.



ಮತ್ತು ಬೆಂಕಿ ಉರಿ ಹಿಂಭಾಗಕೂ ಹರಡಿತು.
ಅವರ ಕೆಲ ಮಕ್ಕಳು ಒಳ್ಳೆ ನಿದ್ರೆಯಲಿ
ಇದ್ದಿರಬೇಕು. ಕೊಬ್ಬು ಸುಟ್ಟಂಥ ವಾಸನೆ
ನಮ್ಮ ಮೂಗಿಗಡರತೊಡಗಿತು.

ಸದ್ಯ, ನಾನು ಜೆಲಿಗ್‌ನೈಟನ್ನು ಎಸೆದಾಗ
ನಾವೆಲ್ಲ ಸಾಕಷ್ಟು ದೂರದಲ್ಲಿದ್ದುದು
ಒಳ್ಳೆಯದಾಯ್ತು. ಆದರೂ ಮೇಲಕ್ಕೆ ಹಾರಿತದು.
ಹಲವಾರು ಉರಿವ ಚೂರುಗಳು ಹಾರಿದವು.

ಗಾಳಿಯಲಿ ನೂರಾರು ಅಡಿಗಳೆತ್ತರಕೆ.
ಮುರಿದವು ನಮ್ಮ ಕಿಟಕಿಗಳು ಆ ಆಸ್ಫೋಟಕೆ,
ಜಜ್ಜಿತು ನಮ್ಮ ಹುಡುಗರಲ್ಲೊಬ್ಬನ ಕಾಲು
ಕೆಳಕ್ಕೆ ಬಿದ್ದ ತೊಲೆಯ ಅಡಿಯಲ್ಲಿ ಸಿಲುಕಿ.

ಆದರೂ, ಆದದ್ದು ಬಲು ಒಳ್ಳೆಯದೇ ಆಯಿತೆನ್ನುತ್ತೇನೆ.
ಅಂದು ತಳಪಾಯವಿದ್ದ ಕಡೆ, ಬರಿ ಕಲ್ಲುಗಳಿವೆ ಇಂದು.
ನಿಜಕ್ಕೂ ಇದು ಅದೃಷ್ಟವೆಂದೆನಬೇಕು. ಮಣ್ಣಿನಲ್ಲಿ
ಆ ಆಸಿಡ್ ಉಳಿದುಕೊಂಡುಬಿಟ್ಟಿದೆ. ಏನೂ ಬೆಳೆಯುವುದಿಲ್ಲ ಈಗಲ್ಲಿ.




ಅನುವಾದ : ಎಲ್. ವಿ. ಶಾಂತಕುಮಾರಿ
ನಂ. ೧೫೮, ೩ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ
ಪೋಸ್ಟಲ್ ಲೇಔಟ್, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦೦೮೫



# ಕನ್ನಡ ಚಿತ್ರರಂಗದ ಸಮಸ್ಯೆ : ಒಂದು ದೃಷ್ಟಿಕೋನ

ಆರ್. ಮಾನಸಯ್ಯ

ಕಳೆದ ಕೆಲವು ತಿಂಗಳುಗಳಿಂದ ಬಹಿರಂಗವಾಗಿ ತಳಮಳಕ್ಕೊಳಗಾದ ಕನ್ನಡ ಚಲನಚಿತ್ರರಂಗದ ಸಮಸ್ಯೆಯು ದಿನದಿನಕ್ಕೆ ಜಟಿಲಗೊಳ್ಳುತ್ತಾ ಸಾಗಿದೆ. ನವೆಂಬರ್ ೨೫ರಂದು ಚಿತ್ರತಾರೆಯರು ಹಮ್ಮಿಕೊಂಡಿದ್ದ ಬೃಹತ್ ರ್‍ಯಾಲಿಯು ಚಿತ್ರರಂಗಕ್ಕೆ ಬಂದ ಆಪತ್ತಿನ ಹಿಂದಿರುವ ಅಸಲಿ ಕಾರಣಗಳನ್ನು ಸರಕಾರಕ್ಕೆ ಮನದಟ್ಟು ಮಾಡದೆ ಮುಖ್ಯಮಂತ್ರಿಗಳತ್ತ ಚಪ್ಪಲಿ ತೂರಿ, ಕರ್ನಾಟಕ ಚಲನಚಿತ್ರ ಮಂಡಳಿಯ ಬೋರ್ಡ್ ಬದಲಾಯಿಸಿ, ಕೊನೆಗೂ ಸೋತುಹೋದಂತಿದೆ. ಈ ಚಿತ್ರತಾರೆಯರ ಹೋರಾಟಕ್ಕೆ ಕನ್ನಡ-ದಲಿತ-ರೈತ ಸಂಘಗಳ ಒಂದೊಂದು ಬಣದ ಬೆಂಬಲವು ಯಾತಕ್ಕೂ ಸಾಲದೆ ಹೋಗಿದೆ. ಇದುವರೆಗೆ ಮುಖ್ಯಮಂತ್ರಿ, ಉಪಮುಖ್ಯಮಂತ್ರಿಗಳು ನೀಡಿದ ಬಣ್ಣದ ಭರವಸೆಗಳು ಸರ್ವೋಚ್ಚ ನ್ಯಾಯಾಲಯದ ಹೊಡೆತಕ್ಕೆ ಸಿಕ್ಕಿ ತರಗೆಲೆಗಳಂತೆ ಉದುರಿಬಿದ್ದಿವೆ. ಬೆಂಗಳೂರು, ಮೈಸೂರು ಸೇರಿದಂತೆ ರಾಜ್ಯ ಗಡಿ ನಗರಗಳಲ್ಲಿ ಹಿಂದಿ, ತಮಿಳು ಹಾಗೂ ತೆಲುಗು ಚಿತ್ರಗಳು ನಿರಾತಂಕವಾಗಿ ಪ್ರದರ್ಶಿಸಲ್ಪಡುತ್ತಿವೆ. ಈ ಪೈಕಿ ಶೇ. ೨೫ರಷ್ಟು ಚಿತ್ರಗಳು ಹಾಲಿವುಡ್ ಮೂಲದವು. ಪತ್ರಿಕೆಗಳು, ನಿಡುಮಾಮಿಡಿ ಸ್ವಾಮಿಗಳು, ರಾಜಕಾರಣಿಗಳು ಹಠಾತ್ತಾಗಿ ಸಿನಿಮಾದವರ ಹೋರಾಟವನ್ನು ಅಲ್ಲಗಳೆದಿದ್ದಾರೆ. ಚಿತ್ರರಂಗದ ಸಮಸ್ಯೆಗೆ ಕನ್ನಡ ನಾಡುನುಡಿಯನ್ನು ತಗಲುಹಾಕುವ ಅಗ್ಗದ ತಂತ್ರಗಳನ್ನು ಹಿಗ್ಗಾಮುಗ್ಗಾ ಜಾಡಿಸಿ ಹೇಳಿಕೆ ಹೊರಡಿಸುವವರ ಸಂಖ್ಯೆ ಹೆಚ್ಚಾಗುತ್ತಾ ಸಾಗಿದೆ. ಈ ಎಲ್ಲದರ ನಡುವೆ ಗಮನಿಸಬೇಕಾದ ಸಂಗತಿ ಎಂದರೆ, ಬೆಂಗಳೂರು, ಮೈಸೂರು ಹೊರತುಪಡಿಸಿ ಕರ್ನಾಟಕದ ಇತರೆ ಭಾಗದಿಂದ ಈ ಹೋರಾಟಕ್ಕೆ ಸೋಕಾಲ್ಡ್ ಸಿನಿಮಾ ಅಭಿಮಾನಿಗಳ ಬೆಂಬಲ ದೊರೆಯದೆ ಹೋದದ್ದು!

ಇದೆಲ್ಲ ಘಟಿಸಿದ ನಂತರವೂ ಒಂದು ಮಹತ್ವದ ಸಂಗತಿ ಮಾತ್ರ ಮೂಲೆಗುಂಪಾಗಿದೆ. ಸಿನಿಮಾದವರು ತಮ್ಮ ಸಮಸ್ಯೆಯನ್ನು ಇಡೀ ಕರ್ನಾಟಕದ ಸಮಸ್ಯೆಯೆಂಬಂತೆ ಚಿತ್ರಿಸಿದ್ದು ನಿಜ. ಇದು ಸ್ಪಷ್ಟವಾಗಿಯೂ, ನೇರವಾಗಿಯೂ ಇಡೀ ಕನ್ನಡಿಗರ ಸಮಸ್ಯೆ ಆಗಿದ್ದಿಲ್ಲ. ಆದರೆ ಇಂದು ಇಡೀ ಕರ್ನಾಟಕದ ಸಾಮಾಜಿಕ ಜೀವನಕ್ಕೆ ಕಾಡುತ್ತಿರುವ ಪಿಡುಗೇ ಈಗ ಚಿತ್ರರಂಗವನ್ನೂ ಪೀಡಿಸುತ್ತಿದೆ ಎಂದು ಸಿನಿಮಾ ರಂಗದವರು ಕನ್ನಡಿಗರಿಗೆ ಮನದಟ್ಟು ಮಾಡಲು ಇದುವರೆಗೆ ಯಾರೂ ಮುಂದೆ ಬರಲಿಲ್ಲ. ತಪ್ಪಾದ ಹೋರಾಟಗಳನ್ನು ತಿದ್ದುವುದೆಂದರೆ, ಅವುಗಳನ್ನು ಸರಿದಾರಿಯತ್ತ ಸಾಗಿಹೋಗಲು ಹಾದಿ ತೋರಿಸುವುದೆಂದೇ ಅರ್ಥ. ಅಷ್ಟಕ್ಕೂ ಸಿನಿಮಾದವರು ಮುಂದಿಟ್ಟ ಬೇಡಿಕೆಗೆ ಸಂಬಂಧಿಸಿದ ವಿಷಯ ಅಷ್ಟೇನೂ ತಪ್ಪಾದದ್ದಲ್ಲ. ಆದರೆ ಅವರು ಅನುಸರಿಸಿದ ವಿಧಾನ ಮತ್ತು ಟಾರ್ಗೆಟ್ ಮಾತ್ರ ಕೆಟ್ಟದಾದದ್ದೆ. ಈ ಕುರಿತು ಒಂದಿಷ್ಟು ವಿವರಿಸುವುದರ ಜೊತೆಗೆ ಚಿತ್ರರಂಗವನ್ನು ಕಾಡುವ ಹೊರ ಮತ್ತು ಒಳಗಿನ ಕಾರಣಗಳನ್ನು ಚರ್ಚೆಗೆ ಎಳೆತರಬೇಕಾಗುತ್ತದೆ.

**ಹೊರಗಿನಿಂದ ಬಂದ ಹಾಲಿವುಡ್ ಆಪತ್ !**

ಚಿತ್ರರಂಗದವರು ಸರಕಾರದ ಮುಂದಿಟ್ಟ ಮುಖ್ಯ ಬೇಡಿಕೆಗಳು ಕೇವಲ ಎರಡು. ಪರಭಾಷಾ ಚಿತ್ರಗಳು ಬಿಡುಗಡೆಯಾದ ಮೂರು ವಾರಗಳ ನಂತರ ಇಲ್ಲಿ ಪ್ರದರ್ಶಿಸಬೇಕು ಹಾಗೂ ಅವುಗಳ ಮೇಲೆ ರಾಜ್ಯ ಸರಕಾರ ಶೇ. ೧೦೦ರಷ್ಟು ತೆರಿಗೆ ವಿಧಿಸಬೇಕು ಎಂಬುದು. ಇದೇ ತೆರನಾದ ಬೇಡಿಕೆ ಕರ್ನಾಟಕದ ವಿವಿಧ ಕ್ಷೇತ್ರಗಳಿಂದ ಸರಕಾರದ ಮುಂದೆ ಬಂದಿವೆ. ಸಿನಿಮಾದವರಿಗೆ ಇದೀಗ ಜ್ಞಾನೋದಯವಾಗಿ ಸಹಜವಾಗಿ ಈ ಬೇಡಿಕೆ ಇಡಲ್ಪಟ್ಟಿದೆ. ಹೊಸ ಆಮದು ನೀತಿ ಹಾಗೂ ರೈತರ ಸರಣಿ ಹತ್ಯೆ ವಿರೋಧಿಸಿ ನಡೆಸಿದ ರೈತಾಪಿ ಹೋರಾಟಗಳು ಹಾಗೂ ಕಾರ್ಖಾನೆ ಮುಚ್ಚುವಿಕೆ ಮತ್ತು ವಿ.ಆರ್.ಎಸ್. ವಿರೋಧಿಸಿ ಜರುಗಿದ ಕಾರ್ಮಿಕ ವರ್ಗದ ಹೋರಾಟಗಳು ಇದಕ್ಕೆ ಮಹಾನ್ ಸಾಕ್ಷಿಯಾಗಿವೆ. ಇವು ಮುಕ್ತ ವ್ಯಾಪಾರ ನೀತಿಯ ಹೆಸರಿನಲ್ಲಿ ಕರ್ನಾಟಕದ ಮಾರುಕಟ್ಟೆ ಹಾಗೂ ಆರ್ಥಿಕ ಕ್ಷೇತ್ರಕ್ಕೆ ನುಗ್ಗಿ ಬಂದ ವಿದೇಶಿ ಸರಕು ಹಾಗೂ ವಿದೇಶೀ ನೇರ ಬಂಡವಾಳ ಹೂಡಿಕೆಯನ್ನು ಕರ್ನಾಟಕದ ಸಮಸ್ತ ಜೀವನಕ್ಕೆ ಬಂದ ಆಪತ್ತೆಂದು ಕೂಗಿ ಕೂಗಿ ಹೇಳಿದವು. ಕರ್ನಾಟಕದ ಮಾರುಕಟ್ಟೆಯ ಮೇಲೆ, ಇಲ್ಲಿನ ನೆಲ ಜಲ ಶ್ರಮಶಕ್ತಿಯ ಮೇಲೆ ಬಹುರಾಷ್ಟ್ರೀಯ ಕಂಪನಿಗಳ ಏಕಸ್ವಾಮ್ಯವನ್ನು ತಿರಸ್ಕರಿಸಿ ನಡೆದ ಹೋರಾಟಗಳು ಅಗಣಿತ. ವಿದೇಶಿ ಸರಕುಗಳ ಮೇಲೆ ಶೇ. ೧೦೦ರಷ್ಟು ಆಮದು ಸುಂಕ ಹಾಕಿ ಎಂದು ಅವು ಒತ್ತಾಯಿಸಿದವು. ಹಾಗೆಯೇ ಕೃಷಿ ಹಾಗೂ ಕೈಗಾರಿಕಾ ರಂಗಕ್ಕೆ ತಕ್ಕ ಸಹಾಯಧನ ಮತ್ತು ಮಾರುಕಟ್ಟೆ ಸುಂಕದ ರಿಯಾಯ್ತಿಗಾಗಿ ಸರಕಾರವನ್ನು ಒತ್ತಾಯಿಸಿದವು.

ಸಿನಿಮಾದವರು ತಮ್ಮ ಸಮಸ್ಯೆಯನ್ನು ಇಡೀ ಕರ್ನಾಟಕದ ಸಮಸ್ಯೆಯೆಂಬಂತೆ ಚಿತ್ರಿಸಿದ್ದು ನಿಜ. ಇದು ಸ್ಪಷ್ಟವಾಗಿಯೂ, ನೇರವಾಗಿಯೂ ಇಡೀ ಕನ್ನಡಿಗರ ಸಮಸ್ಯೆ ಆಗಿದ್ದಿಲ್ಲ. ಆದರೆ ಇಂದು ಇಡೀ ಕರ್ನಾಟಕದ ಸಾಮಾಜಿಕ ಜೀವನಕ್ಕೆ ಕಾಡುತ್ತಿರುವ ಪಿಡುಗೇ ಈಗ ಚಿತ್ರರಂಗವನ್ನೂ ಪೀಡಿಸುತ್ತಿದೆ ಎಂದು ಸಿನಿಮಾ ರಂಗದವರು ಕನ್ನಡಿಗರಿಗೆ ಮನದಟ್ಟು ಮಾಡಲು ಇದುವರೆಗೆ ಯಾರೂ ಮುಂದೆ ಬರಲಿಲ್ಲ. ತಪ್ಪಾದ ಹೋರಾಟಗಳನ್ನು ತಿದ್ದುವುದೆಂದರೆ, ಅವುಗಳನ್ನು ಸರಿದಾರಿಯತ್ತ ಸಾಗಿಹೋಗಲು ಹಾದಿ ತೋರಿಸುವುದೆಂದೇ ಅರ್ಥ.



ಕರ್ನಾಟಕದ ಕಾರ್ಮಿಕರು ಹಾಗೂ ರೈತರು ಮುಂದಿಟ್ಟ ಬೇಡಿಕೆಗಳನ್ನೇ ಇಂದು ಚಿತ್ರರಂಗದವರು ಇಟ್ಟಿದ್ದಾರೆ. ರೈತ ಕಾರ್ಮಿಕರು ಹೋರಾಡುತ್ತಿದ್ದಾಗ, 'ಅಮೆರಿಕಾ ಅಮೆರಿಕಾ !', 'ಪ್ರೀತ್ಸೆ ಪ್ರೀತ್ಸೆ!' ಎಂದು ಕುಣಿಯುತ್ತಿದ್ದ ಚಿತ್ರ ಕಲಾವಿದರ ಲಾಭ ಈಗ ಇಳಿಮುಖಗೊಂಡು ಕಾಲು ಸೋತಿವೆ. ರೈತ ಕಾರ್ಮಿಕರ ಬೇಡಿಕೆಗಳನ್ನು ನಿರ್ದಯೆಯಿಂದ ತಳ್ಳಿ ಹಾಕಿದ ಆಳುವ ವರ್ಗ, ಚಿತ್ರರಂಗದವರ ಬೇಡಿಕೆಯನ್ನು ಮೌನದ ಒಳಸಂಚಿನೊಂದಿಗೆ ಮನ್ನಿಸಿದೆ. ಆದರೆ ಪರಿಹಾರ ಕೊಡುವ ಅಧಿಕಾರ ಸರಕಾರದ ಕೈಯಿಂದ ಹಾರಿಹೋಗಿದೆ. ಏಕೆಂದರೆ ಪ್ರಪಂಚ ವಾಣಿಜ್ಯ ಸಂಘಟನೆಯ ಸದಸ್ಯ ರಾಷ್ಟ್ರವಾದ ಭಾರತದ ಒಂದು ಭಾಗವಾಗಿ ಕರ್ನಾಟಕ ಉಳಿದಿದೆ. ಜನತೆ ''ಐಎಂಎಫ್, ವರ್ಲ್ಡ್ ಬ್ಯಾಂಕ್ ಮತ್ತು ವಿಶ್ವ ವಾಣಿಜ್ಯ ಸಂಸ್ಥೆ ತೊಲಗಲಿ'', ಎಂದರೆ ''ಪ್ರಪಂಚ ವಾಣಿಜ್ಯ ಸಂಸ್ಥೆಗೆ ಜಯವಾಗಲಿ! ಮುಕ್ತ ಮಾರುಕಟ್ಟೆ ಮಾತಾ ಕಿ ಜೈ!'' ಎನ್ನುವ ಆಳುವ ವರ್ಗ ನಮ್ಮದು. ವಿಶ್ವವಾಣಿಜ್ಯ ಸಂಸ್ಥೆಯ ಮುಖ್ಯ ಷರತ್ತೆಂದರೆ ''ಸ್ಥಳೀಯ ಸಹಾಯ ಧನ ಕಡಿತ ಹಾಗೂ ಆಮದು ಶುಲ್ಕದಲ್ಲಿ ಭಾರೀ ರಿಯಾಯ್ತಿ ಮತ್ತು ಮುಕ್ತ ಮಾರುಕಟ್ಟೆ'' ಎಂಬುದಾಗಿದೆ. ಸಾರ್ವಜನಿಕ ಶೌಚಾಲಯದಿಂದ ರಸ್ತೆ ನಿರ್ಮಾಣದವರೆಗೆ ನಮ್ಮ ಸರಕಾರಗಳು ಐಎಂಎಫ್ ಹಾಗೂ ವರ್ಲ್ಡ್ ಬ್ಯಾಂಕ್‌ಗಳಿಂದ ಸಾಲ ತಂದಿವೆ. ಆಳುವ ವರ್ಗ ಒಪ್ಪಿಕೊಂಡ ಸಾಲದ ಷರತ್ತಿನ ಅನ್ವಯ ನಾವು, ನಮ್ಮ ಮಾರುಕಟ್ಟೆ, ಯಾವುದೂ ಈಗ ಸ್ವತಂತ್ರವಾಗಿ ಉಳಿದಿಲ್ಲ; ಅವು ಬಹುರಾಷ್ಟ್ರೀಯ ಕಂಪನಿಗಳ ಅಧೀನಕ್ಕೆ ಹೋಗಿವೆ. ಇದನ್ನೇ ನಾವು ಇದುವರೆಗೆ ಹೇಳುತ್ತಾ ಬಂದೆವು. ಕರ್ನಾಟಕದ ಕೃಷಿ, ಕೈಗಾರಿಕೆ ಹಾಗೂ ಪರಿಸರಕ್ಕೆ ಕಂಟಕಪ್ರಾಯವಾದ ಜಾಗತೀಕರಣವೇ ಇಂದು ಚಲನಚಿತ್ರದ ಚಲನೆಯನ್ನು ತಡೆದು ನಿಲ್ಲಿಸಲು ಮುಂದಾಗಿದೆ.

**ಹಾಲಿವುಡ್ ಬಲೆಗೆ ಬಿದ್ದ ಬಾಲಿವುಡ್ !**

ಬೇಡರ ಕಣ್ಣಪ್ಪ ಸಿನಿಮಾ ಬಂದಾಗ ಅದಕ್ಕೆ ಇಲ್ಲಿ ಸಾಟಿಯೇ ಇರಲಿಲ್ಲ. ಬಭ್ರುವಾಹನ ಬಂದಾಗಲೇ ಅದು ದೊಡ್ಡ ಉದ್ದಿಮೆಯಾಗಿ ರೂಪ ತಾಳಬೇಕಾಗಿತ್ತು. ಜಾಗತೀಕರಣದ ಮಾರುಕಟ್ಟೆ ದಾಳಿಗೆ ನಮ್ಮ ಆಳುವ ದೊರೆಗಳು ಸೈ ಸೈ ಎಂದಾಗಲಾದರೂ ಕನ್ನಡ ಚಿತ್ರರಂಗ ತನ್ನಲ್ಲಿರುವ ಬಂಡವಾಳವನ್ನು ಕ್ರೋಢೀಕರಿಸಿಕೊಂಡು ಒಂದು ಕಂಪನಿಯಾಗಲಿಲ್ಲ. ಬಿಡಿ ಬಿಡಿ ವ್ಯಕ್ತಿಗಳ ಯಜಮಾನ, ಸಾಹುಕಾರ, ಅಣ್ಣಾವ್ರ ಮಕ್ಕಳು ಹಾಗೂ ಮೌರ್ಯನಾಗಿಯೇ ಉಳಿಯಿತು. ಹಾಲಿವುಡ್ ದಾಳಿಯಿಂದ ಹತ್ಯೆಯಾದ ಬ್ರೆಜಿಲಿಯನ್ ಸಿನಿಮಾರಂಗದ ಶವ ನಮ್ಮವರ ಕಣ್ಣಿಗೆ ಕಾಣಿಸಲಿಲ್ಲ, ಬೋಜಪುರಿ, ಅಸ್ಸಾಂ ಹಾಗೂ ಮಣಿಪುರಿ ಚಿತ್ರೋದ್ಯಮವನ್ನು ಹಾಲಿವುಡ್ ನುಂಗಿ ಹಾಕಿದಾಗ ನಮ್ಮ ಮೇರು ನಟ-ನಿರ್ದೇಶಕರಿಗೆ ಕೆಟ್ಟ ಕನಸೂ ಬೀಳಲಿಲ್ಲ! ಇಂದಿನ ಹಾಲಿವುಡ್ ಹಿಂದಿನಂತೆ ಒಂದು ಭಾಷಾ ಚಿತ್ರರಂಗ ಅಥವಾ ಏಕಭಾಷಾ ಚಿತ್ರೋದ್ಯಮವಲ್ಲ. ಅದು ಪ್ರಪಂಚದ ಮನರಂಜನಾ ಮಾರುಕಟ್ಟೆಯನ್ನೇ ಸುತ್ತುವರೆದ ಟೈಟಾನಿಕ್ ಸೈತಾನ ! ಅದು ಸ್ವತಃ ಮುಖ ಹೊತ್ತು ದಾಳಿ ಮಾಡುವುದಿಲ್ಲ. ಆಯಾ ರಾಷ್ಟ್ರದ ಬಲಿಷ್ಠ ಭಾಷಾ ಚಿತ್ರರಂಗದಲ್ಲಿ ಬಂಡವಾಳ ತೊಡಗಿಸುತ್ತದೆ. ತಂತ್ರಜ್ಞಾನ, ಕೌಶಲ ಹಾಗೂ ಹೊಸ ಹೊಸ ಆಯಾಮಗಳಲ್ಲಿ ಕಥೆ ಕಟ್ಟಿಕೊಡುತ್ತದೆ. ಸ್ಥಳೀಯ ಬಹುದೊಡ್ಡ ಭಾಷೆಗೆ ತನ್ನ ಚಿತ್ರಗಳ ಅಸಂಖ್ಯಾತ ಡಬ್ಬಿಂಗ್ ಮಾಡಿ ಓಡಿಸುತ್ತದೆ. ನಮ್ಮ ಬಾಲಿವುಡ್ ಈಗ ಹಾಲಿವುಡ್ ಬಹುರಾಷ್ಟ್ರೀಯ ಚಲನಚಿತ್ರ ಕಂಪನಿಯ ಭಾಗವಾಗಿಹೋಗಿದೆ. ಬಾಲಿವುಡ್‌ಗೆ ಬರುವ ಲಾಭದಲ್ಲಿ ಶೇ. ೬೫ರಷ್ಟು ಹಾಲಿವುಡ್‌ನ ಪಾಲಾಗುತ್ತದೆ. ಅತ್ಯಧಿಕ ಬಂಡವಾಳ ಹೂಡಿ, ಅಸಭ್ಯ ಹಾಗೂ ಅಶ್ಲೀಲವನ್ನು ಸಭ್ಯ ಹಾಗೂ ಶೀಲವೆಂದು ವರ್ಣಿಸಿ ಒಪ್ಪಿಸುತ್ತದೆ. ಗರಿಷ್ಠ ೭೦೦ಕೋಟಿ ರೂಪಾಯಿ ಬಂಡವಾಳ ಹಾಕಿ, ಸಾವಿರಾರು ಚಿತ್ರ ಪ್ರಿಂಟ್ ಮಾಡಿ, ಲಕ್ಷಾಂತರ ಕಾಂಪ್ಯಾಕ್ಟ್ ಡಿಸ್ಕ ತಯಾರಿಸಿ, ರಾತ್ರೋರಾತ್ರಿ ದೇಶದ ಮಾರುಕಟ್ಟೆಯನ್ನು ಆಕ್ರಮಿಸಬಲ್ಲ ಮನೋರಂಜನಾ ಮಾರಿ ಇದು. ಭಾರತದಲ್ಲಿ ಇದರ ೧೭ ಬೃಹತ್ ಏಜೆನ್ಸಿಗಳಿವೆ. ಈ ಮನೋರಂಜನಾ ಮಾರಿಯ ಜೊತೆ, ಹಿಂದಿಯ ನಂತರ ತೆಲುಗು, ತಮಿಳು ಚಿತ್ರೋದ್ಯಮಗಳು ಹೊಂದಿಕೊಂಡು ಒಂದಿಷ್ಟು ಉಸಿರಾಟ ನಡೆಸಿವೆ. ಇವುಗಳು ಬಹಳ ದಿನ ಬದುಕುವ ಭರವಸೆ ಇಲ್ಲ.

ಮೇಲ್ನಂಡ ಅಸಲಿ ಸಂಗತಿಯು ಕನ್ನಡ ಚಿತ್ರರಂಗಕ್ಕೆ ಮನವರಿಕೆಯಾಗಿ ಅವರು ಇಡೀ ಕರ್ನಾಟಕದ ಜನಜೀವನದತ್ತ ನೋಡದೇ ಹೋದರೆ ಅವರಿಗೆ ಉಳಿಗಾಲವಿಲ್ಲ. ಕನ್ನಡ ಚಿತ್ರರಂಗದ ಹೊರಗಿನಿಂದ ಬರುತ್ತಿರುವ ಈ ದಾಳಿಯಿಂದ ಅವರು ಬದುಕಿ ಉಳಿಯಲಾರರು. ವೃತ್ತಿ ರಂಗಭೂಮಿಗಾಗಿರುವ ಗತಿಯೇ ಅದಕ್ಕೂ ಆದೀತು.

**ತೋಚಿದ್ದೆ ಮಾಡುತ್ತಾ ಈ ಜನ್ಮ ಉಡಾಯಿಸಬೇಕೆ ?**

ಈಗ ಕನ್ನಡ ಚಿತ್ರೋದ್ಯಮದ ಆಂತರಿಕ ಸಮಸ್ಯೆಗಳತ್ತ ಗಮನ ಹರಿಸೋಣ. ಕನ್ನಡದಲ್ಲಿ ಉತ್ತಮ ಹಾಗೂ ಉಚ್ಚ ತರಗತಿಯ ಕಲಾವಿದರಿಗೇನೂ ಕೊರತೆಯಿಲ್ಲ. ಕೇವಲ ಉತ್ತಮ ಕಲಾವಂತಿಕೆಯಷ್ಟೆ ಇಂದಿನ ಚಿತ್ರಗಳ ಯಶಸ್ಸಿಗೆ ಸಾಕಾಗುವುದಿಲ್ಲ. ಅಭಿನಯ, ಸಾಹಿತ್ಯ, ಸಂಗೀತ, ನಿರ್ದೇಶನ ಮತ್ತು ತಂತ್ರಜ್ಞಾನಗಳ ಜೊತೆ ಇವುಗಳನ್ನು ಸಂಘಟಿಸಬಲ್ಲ ಕಾರ್ಮಿಕರ ಶ್ರಮ ಮತ್ತು ಸಂಯೋಜಿತ ಬಂಡವಾಳದ ಭಾರೀ ಕೊರತೆಯನ್ನು ಇಲ್ಲಿ ಅಲ್ಲಗಳೆಯಲಾಗದು. ಹಾಗೆಯೇ ತಂತ್ರಜ್ಞಾನವೆಂದರೆ ಚಿತ್ರೀಕರಣದ ವಿದ್ಯುನ್ಮಾನ ಸಾಧನಗಳಲ್ಲ, ಕನ್ನಡ ಚಿತ್ರರಂಗಕ್ಕೆ ಬೇಕಾಗಿರುವುದು ಸಾಮಾಜಿಕ ತಂತ್ರಜ್ಞಾನ. ಜನರ ಬದುಕನ್ನು ವಿವರಿಸಿ, ಬದುಕಿನ ಬಹು ಆಯಾಮಗಳನ್ನು ಪರಿಚಯಿಸಿ, ಸಾಮಾಜಿಕ ಬದುಕಿನ ನೆಲೆಯ ಕಲೆಯನ್ನು ಎತ್ತಿ ತೋರಿಸುವ ಸೃಜನಶೀಲತೆ. ಬದುಕಿಗೆ ಭರವಸೆ ತುಂಬುವ ಬದಲು, ಭ್ರಮನಿರಸನಗೊಳಿಸಿ, ಜನರ ಅತೃಪ್ತಿಯನ್ನೇ ಅಗಲ ಮಾಡಿ, 'ತೋಚಿದ್ದೇ ಮಾಡುತ್ತಾ ಈ ಜನ್ಮ ಉಡಾಯಿಸು' ಎಂದು ಸಾರುವ ಸಿನಿಮಾಗಳು ನಮ್ಮವು. ಗದ್ದಲವನ್ನೇ ಸಂಗೀತವೆಂದು ಒಪ್ಪಿಸುವ ಅಗ್ಗದ ಅಭಿರುಚಿಗಳು, ಪ್ರೇಕ್ಷಕರ ಮನೋವಿಕಾರ ಕೆರಳಿಸುವ ಗಬ್ಬು ನೃತ್ಯಗಳು, ಇಲ್ಲಿಯವರೆಗೆ ಜನರ ಸಹನೆಯನ್ನು ಹದ್ದುಮೀರಿ ಪರೀಕ್ಷಿಸಿವೆ. ಕುಟುಂಬವೊಂದು ಕುಳಿತುನೋಡುವ ಸಿನಿಮಾಗಳು ಹೋಗಿ, ಕುಟುಂಬದ ಸದಸ್ಯರೆಲ್ಲ ಕುಣಿದು ಕುಪ್ಪಳಿಸಬೇಕೆಂದು ಪ್ರೇರೇಪಿಸುವ ಚಿತ್ರಗಳಿಗೇನೂ ಕನ್ನಡದಲ್ಲಿ ಕೊರತೆಯಿಲ್ಲ.

ಯಾವಾಗ ಪ್ರೇಕ್ಷಕ ಗ್ರಾಹಕನಾದನೋ ಆವಾಗಲೇ ಸಿನಿಮಾ ಸರಕಾಯಿತು. ಸಿನಿಮಾ ಸರಕಾಗಬಾರದೆಂದು ನಮ್ಮ ಅಭಿಪ್ರಾಯವಲ್ಲ. ಅದು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ, ತನ್ಮೂಲಕ ಪರಿಹಾರದ ಸುಖಾಂತ್ಯ ಸೂಚಿಸುವ ಸಾವಯವ ಮೌಲ್ಯವಾಗಬೇಕು. ಪ್ರಚೋದಕ-ಮಾದಕ-ರೋಚಕ-ಕಿರಾತಕ ವಿಷಪಾನವಾಗಬಾರದು. ಈಗ ಆದದ್ದೇನು ? ಲಾಭವಾದರೆ ಕನ್ನಡ ಸಿನಿಮಾಗೆ, ನಷ್ಟವಾದರೆ ಇಡೀ ಕರ್ನಾಟಕಕ್ಕೆ ! ಕೃಷಿ ರಂಗ ಅಳುವಾಗ ಚಿತ್ರರಂಗ ನಗುತ್ತಿತ್ತು. ಕೈಗಾರಿಕಾ ರಂಗ ಅಳುವಾಗ ಚಿತ್ರರಂಗ ಕುಣಿಯುತ್ತಿತ್ತು. ಈಗ ಚಿತ್ರರಂಗ ಅತ್ತರೆ ಅದಕ್ಕೆ ಇಡೀ ಪ್ರೇಕ್ಷಕ ಲೋಕ ಸೇರಿ



ಆಳಬೇಕಂತೆ! ಪ್ರೇಕ್ಷಕರು ನೋಡುವಂತಹ ಚಿತ್ರ ತೋರಿಸಬೇಕೇ ವಿನಾ ತೋರಿಸಿದ್ದೆಲ್ಲವನ್ನೂ ನೋಡಲೊಲ್ಲದವರನ್ನು ಕನ್ನಡ ವಿರೋಧಿಗಳೆಂದು ಹೀಯಾಳಿಸಬಾರದು. ಈ ಅಧಿಕಾರವನ್ನು ಸಿನಿಮಾದವರಿಗೆ ಕೊಟ್ಟವರಾರು ?

ಹಾಗೆಯೇ, ರಾಜ್ಯದ ೧೨೩೨ ಚಿತ್ರಮಂದಿರಗಳಲ್ಲಿ ೨೦೦ಕ್ಕೂ ಹೆಚ್ಚು ಸಂಖ್ಯೆ ಬೆಂಗಳೂರು ಮೈಸೂರಿನದು. ಎಲ್ಲಾ ಸರಬರಾಜು ಗಾಂಧಿನಗರದಿಂದಲೇ. ಹಿಂದಿ, ತೆಲುಗು ಚಿತ್ರಗಳ ಸಿದ್ಧತೆಗೆ ತಗಲುವ ವೆಚ್ಚ ಕನ್ನಡದ ಇಡೀ ಚಿತ್ರದ ವೆಚ್ಚಕ್ಕೆ ಸಮ. ೩ ಕೋಟಿ ಹಣದಲ್ಲಿ ಸಿನಿಮಾ ತಯಾರಿಸಿ ೧೨ ಪ್ರಿಂಟ್ ಹಾಕಿ ರಾಜ್ಯದ ೭-೮ ನೂರು ಕಿ.ಮೀ. ದೂರದ ರಾಯಚೂರು, ಬೀದರ್, ಬೆಳಗಾಂಗಳಿಗೆ ಡಬ್ಬಿ ತಲುಪಿಸಲು ವಾರಗಳೇ ಬೇಕು. ಕರ್ನಾಟಕವು ಐದು ರಾಜ್ಯಗಳ ಗಡಿಯೊಂದಿಗೆ ಸುತ್ತುವರಿಯಲ್ಪಟ್ಟಿದೆ. ಉತ್ತರ ಹಾಗೂ ಮಧ್ಯ ಕರ್ನಾಟಕಕ್ಕೆ ಹಿಂದಿ ಹಾಗೂ ತೆಲುಗು ಸಿನಿಮಾಗಳು ಕೇವಲ ೪ ಗಂಟೆಗಳಲ್ಲಿ ಬಂದು ಬೀಳುತ್ತವೆ. ಚಿತ್ರರಂಗಕ್ಕೆ ದಾವಣಗೆರೆ, ಧಾರವಾಡಗಳೇಕೆ ವಿತರಣೆಯ ಕೇಂದ್ರಗಳಾಗಬಾರದು ? ಕನ್ನಡೇತರ ಸಿನಿಮಾಗಳಿಂದ ರಾಜ್ಯ ಬೊಕ್ಕಸಕ್ಕೆ ೩೩ ಕೋಟಿ ರೂ. ತೆರಿಗೆ ಬರುತ್ತದೆ. ಕನ್ನಡ ರಾಜ್ಯ ಸಹಾಯ ಧನ ನೀಡುತ್ತದೆ. ಮನರಂಜನೆ ತೆರಿಗೆ ವಿನಾಯಿತಿ ನೀಡಿದೆ.

ಕಡಿಮೆ ಖರ್ಚಿನಲ್ಲಿ ಸಿನಿಮಾ ತೆಗೆಯುವುದೆಂದರೆ ಸಿನಿಮಾ ಕಾರ್ಮಿಕರಿಗೆ ಕಡಿಮೆ ಕೂಲಿ ಕೊಡುವುದೆಂದು ತಿಳಿದಿದ್ದಾರೆ ನಿರ್ಮಾಪಕರು. ಆದರೆ ಒಂದು ಸಿನಿಮಾದಲ್ಲಿ ನಟಿಸುವ ಒಬ್ಬ ನಟಿ ಅಥವಾ ನಟ ೧ ಕೋಟಿ ರೂ. ಕೇಳುವುದನ್ನೇ ಹೆಮ್ಮೆಯ ವಿಷಯ ಎನ್ನಲಾಗುತ್ತಿದೆ. ಹಾಗಾದರೆ ಸಹನಟರು, ಸಾಮಾನ್ಯ ಕಲಾವಿದರು, ರಂಗ ಸಿದ್ಧಪಡಿಸುವವರು, ಪೋಸ್ಟರ್ ಅಂಟಿಸಿ ಗೇಟು ಕಾಯುವವರು ಮಾತ್ರ ೧೦೦-೧೫೦ ರೂ.ಗೆ ದುಡಿಯಬೇಕೆ ? ಕಾರ್ಮಿಕರಿಗೆ ಕಾಯ್ದೆ ಪ್ರಕಾರ ಸಂಬಳ ಕೊಟ್ಟ ಒಂದೇ ಒಂದು ಉದಾಹರಣೆ ಕನ್ನಡ ಚಿತ್ರರಂಗದಲ್ಲಿ ಇಲ್ಲ. ಕಾರ್ಮಿಕರ ಸಂಘಕ್ಕೆ ಸರಿಯಾದ ಮನ್ನಣೆಯೇ ಇಲ್ಲ. ಚಿತ್ರರಂಗ ತತ್ತರಿಸುವಾಗ ಕಾರ್ಮಿಕರು ಬೀದಿ ಪಾಲಾಗುತ್ತಿದ್ದಾರೆಂದು ಬೊಬ್ಬೆ ಹಾಕುವ ನಟ-ನಿರ್ದೇಶಕರು ಎಂಜಲು ಕೈಯಿಂದ ಕಾಗೆ ಹೊಡೆದವರಲ್ಲ, ಗಳಿಸಿದ ಹಣದಲ್ಲಿ ಒಂದಂಶವನ್ನು ಸಂತ್ರಸ್ತ ರೈತರಿಗೋ, ಬಡ ವಿದ್ಯಾರ್ಥಿಗಳಿಗೋ ಕೊಟ್ಟವರಲ್ಲ. ಇಡೀ ಚಿತ್ರರಂಗ ಇಂದು ಆತ್ಮವಿಮರ್ಶೆ ಮಾಡಿಕೊಳ್ಳಬೇಕಾಗಿರುವುದು ಈ ವಿಷಯದ ಮೇಲೆಯೇ.

**ಈಗ ಮಾಡಬೇಕಾದುದೇನು ?**

ಈ ಮೊದಲೇ ವಿವರಿಸಿದಂತೆ ಮನೋರಂಜನೆಯು ಒಂದು ಸ್ವತಂತ್ರ ಸಾಮಾಜಿಕ ರಂಗವಾಗಿ ಉಳಿದಿಲ್ಲ. ಅದು ಮಾರುಕಟ್ಟೆಯಾಗಿ ಬದಲಾಗಿದೆ. ಇದು ಕರ್ನಾಟಕದ ಸ್ಥಳೀಯ ಮಾರುಕಟ್ಟೆ ಅಲ್ಲ, ಅಂತರರಾಷ್ಟ್ರೀಯ ಮಾರುಕಟ್ಟೆಯ ಭಾಗವಾಗಿಹೋಗಿದೆ. ಇದಕ್ಕೆ ಕಾರಣ ಇಲ್ಲಿನ ಸರಕಾರದ ಧೋರಣೆಗಳು ಹಾಗೂ ಅಂತರರಾಷ್ಟ್ರೀಯ ಹಣಕಾಸು ಧಣಿಗಳು. ಇವರ ಜಂಟಿ ಮಾರುಕಟ್ಟೆ ನೀತಿಗಳೇ ಕರ್ನಾಟಕದ ಕಾರ್ಮಿಕ ಹಾಗೂ ರೈತಾಪಿ ವರ್ಗದ ಪಾಲಿಗೆ ಉರುಳಾಗಿ ಪರಿಣಮಿಸಿವೆ. ಈ ಸಂಕೋಲೆಗಳೇ ರಾಷ್ಟ್ರದ ಆರ್ಥಿಕ ಅಭಿವೃದ್ಧಿಯನ್ನು ಅಡ್ಡಿಪಡಿಸುತ್ತಿವೆ. ಇವುಗಳ ವಿರುದ್ಧ ರಾಷ್ಟ್ರ ಹಾಗೂ ರಾಜ್ಯದ ಜನತೆ ಅದರಲ್ಲೂ ರೈತ-ಕಾರ್ಮಿಕರು ಹೋರಾಟದ ರಂಗ ಪ್ರವೇಶಿಸಿದ್ದಾರೆ. ಈ ಜಾಗತೀಕರಣ ವಿರೋಧಿ ಹೋರಾಟದ ರಂಗದಲ್ಲಿ ಚಿತ್ರರಂಗವೂ ಸೇರಬೇಕಾಗಿದೆ. ಇದೇ ಸಿನಿಮಾಗನ್ನಡಿಗರ ಮುಂದೆ ಉಳಿದಿರುವ ಏಕೈಕ ದಾರಿಯಾಗಿದೆ.

ಕರ್ನಾಟಕ ಫಿಲ್ಮ್ ಪ್ರೊಡ್ಯೂಜರ್ಸ್ ಅಸೋಸಿಯೇಷನ್ (ಕೆ.ಎಫ್.ಪಿ.ಎ.), ಕರ್ನಾಟಕ ಫಿಲ್ಮ್ ಚೇಂಬರ್ ಆಫ್ ಕಾಮರ್ಸ್ (ಕೆ.ಎಫ್.ಸಿ.ಸಿ.), ಕರ್ನಾಟಕ ಸಿನಿಮಾ ಥಿಯೇಟರ್ಸ್ ಓನರ್ಸ್ ಅಸೋಸಿಯೇಷನ್ (ಕೆ.ಸಿ.ಟಿ.ಓ.ಎ.), ಕರ್ನಾಟಕ ಫಿಲ್ಮ್ ಡೈರೆಕ್ಟರ್ಸ್ ಅಸೋಸಿಯೇಷನ್ (ಕೆ.ಎಫ್.ಡಿ.ಎ.) ಹಾಗೂ ಕನ್ನಡ ರಕ್ಷಣಾ ವೇದಿಕೆಗಳೆಲ್ಲ ಸೇರಿ, ಚಿತ್ರರಂಗದ ೫ ಲಕ್ಷ ಕಾರ್ಮಿಕರ ಸಂಘಟನೆಯನ್ನು ಬಲಪಡಿಸಿಕೊಂಡು, ಜಾಗತೀಕರಣ ತಂದಿಟ್ಟ ಮುಕ್ತ ಮಾರುಕಟ್ಟೆ ವಿರೋಧಿ ಐಕ್ಯ ಹೋರಾಟಕ್ಕೆ ಮುಂದಾಗುವುದೊಂದೇ ತೆರೆದಿಟ್ಟ ದಾರಿಯಾಗಿದೆ. ಈ ದಿಕ್ಕಿನತ್ತ ಕನ್ನಡ ಚಿತ್ರರಂಗ ಚಲಿಸಲಿ.

**ಆರ್. ಮಾನಸಯ್ಯ**
ನಂ.೨೧, ೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ
ಹನುಮಂತಪುರಂ, ಶ್ರೀರಾಮಪುರಂ
ಬೆಂಗಳೂರು - ೫೬೦ ೦೨೧

# ನೆರಳಿನಾಟ



ಅಂದು,
ಬಣ್ಣ ಕಳಚಿ ಹೊರ ಬಂದಾಗ
ಇದ್ದವರು ನಾನು, ಖಾಲಿ ಖುರ್ಚಿಗಳು,
ರಂಗದ ಮೇಲೊಂದು ಮಂದ ದೀಪ.

ಸವೆದ ಮೆಟ್ಟಿಲ ಇಳಿಯುತ್ತಿದ್ದಂತೆ
ಮೌನ ಕದಲುವ ಸದ್ದು
ಥರಥರಿಸುತ್ತಿತ್ತು. ತಿರುಗಿದರೆ
ನನ್ನ ನೆರಳು ಪಕ್ಕಕ್ಕೆ
ಜಾರಿ ಚದುರಿ ನೂರಾಗಿ
ಹರಡಿದೆ ರಂಗದ ತುಂಬ.
ಚೂರು ಚೂರಾದ ನೆರಳು
ಹಾವಂತೆ ಬುಸುಗುಡುತ್ತಾ
ನಿಮಿರಿ ನಾನಾ ವೇಷ
ತೊಟ್ಟ ಪಾತ್ರಧಾರಿಯಾಗಿವೆ.
ಮೂಲ ಪಾತ್ರಗಳ ತಿರುಚಿ
ನಾಟಕಕಾರನ ನಿರ್ಬಂಧವಿಲ್ಲದೆ
ಮೆರೆಯುತ್ತಿವೆ ಅಟ್ಟಹಾಸದಿ.
ಎಲ್ಲೆ ಮೀರಿ ಹಾಡಿ, ಆಡಿ
ಕೆಣಕುತ್ತಿವೆ ನನ್ನ ನೋಡಿ.
ಆರ್ಭಟದಿಂದ ಗದ್ದಲವೆಬ್ಬಿಸಿ
ಮೇಲೆರಗಿ ದಾಳಿ ನಡೆಸುತ್ತಿವೆ.

ಇರಿಯುವ ನದರು
ಹೃದಯಕ್ಕೆ ತಾಗಿ, ಕಿಡಿ
ಹೊತ್ತಿ, ಅಲ್ಲಟ ಪಲ್ಲಟವಾಗಿದೆ.
ಇಕ್ಕುವ ಹೆಜ್ಜೆ ಬಡಿತ
ಬಡಿದೆಬ್ಬಿಸುತ್ತಿವೆ ಹಸಿ
ಗೋರಿಯ ವಾಸನೆ.
ಕುಣಿವ ಈ ಪಾತ್ರ ಪ್ರೇತಗಳು
ಕುಣಿ ಕುಣಿದು ಪಾತ್ರ ಮೀರಿ
ಮೂಡಲ ಬೆಳಕು ಮೂಡುತ್ತಿದ್ದಂತೆ
ಸೋತು ಕೆಳಗೊರಗಿ ಕರಗಿ
ಶಬ್ದಗಳ ನುಂಗಿದ ನಿಶ್ಶಬ್ದದಂತೆ
ನೆರಳಲಿ ಅಡಕವಾದವು.
ಮುಗ್ಧ ನೆರಳು ನಿಷ್ಪನಂತೆ
ಮೆಲ್ಲಗೆ ಬಳಿ ಸಾರಿತು ನನ್ನ

ಜಯಶ್ರೀ ಕೆ. ಸಿ.
೪೪, ೧ನೇ ಮೈನ್, ೩ನೇ ಸ್ಟೇಜ್ . ೪ನೇ ಬ್ಲಾಕ್
ಬನಶಂಕರಿ, ಬೆಂಗಳೂರು - ೫೬೦ ೦೮೫





## ಮೀಯುವ ಆಟ

ಎಚ್. ನಾಗವೇಣಿ

**ಪುಟ : ೧೫೨** **ಬೆಲೆ : ರೂ. ೬೦**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ
ಗಾಂಧಿನಗರ, ಬಳ್ಳಾರಿ - ೫೮೩ ೧೦೩

'ಗಾಂಧಿ ಬಂದ' ಕಾದಂಬರಿಯಿಂದ ಪ್ರಸಿದ್ಧಿಯನ್ನು ಪಡೆದಿರುವ ಎಚ್. ನಾಗವೇಣಿ ಅವರ 'ಮೀಯುವ ಆಟ' ಉತ್ತಮವಾದ ಹತ್ತು ಕತೆಗಳನ್ನು ಒಳಗೊಂಡಿದೆ. ಮಾಸ್ತಿ ಸಂಪ್ರದಾಯದ ಕತೆಗಳಂತೆ ನಾಗವೇಣಿಯವರು ತಂತ್ರಕ್ಕೆ ತಲೆಕೆಡಿಸಿಕೊಳ್ಳದೆ ನೇರವಾಗಿ, ಪ್ರಭಾವಶಾಲಿಯಾಗಿ ಕತೆಗಳನ್ನು ಬರೆಯಬಲ್ಲರು ಎಂಬುದಕ್ಕೆ ಈ ಸಂಕಲನ ನಿದರ್ಶನವಾಗಿದೆ. ವೈದೇಹಿಯವರ ಕತೆಗಳಲ್ಲಿ ದಕ್ಷಿಣ ಕನ್ನಡದ ಪ್ರಪಂಚ ತೆರೆದುಕೊಳ್ಳುವಂತೆ ತುಳುನಾಡಿನ ಜನಜೀವನ ನಾಗವೇಣಿಯವರ ಕತೆಗಳಲ್ಲಿ ಸಮರ್ಥವಾಗಿ ಅಭಿವ್ಯಕ್ತವಾಗಿದೆ. ಉಳ್ಳವರ ಪ್ರಪಂಚದಲ್ಲಿ ಸಾಮಾನ್ಯ ವ್ಯಕ್ತಿಗಳು ಅನುಭವಿಸುವ ನೋವು, ಅವಮಾನ ಮತ್ತು ಪ್ರತಿಭಟನೆಗಳನ್ನು ಇಲ್ಲಿನ ಮೀಯುವ ಆಟ, ಧಣಿಗಳ ಬೆಳ್ಳಿಲೋಟ ಮುಂತಾದ ಕತೆಗಳು ಚಿತ್ರಿಸುತ್ತವೆ. ಸ್ತ್ರೀ ಜಗತ್ತಿನ ವಿಶಿಷ್ಟತೆಗಳನ್ನು, ನೋವು-ನಲಿವುಗಳನ್ನು ಒಡವೆ, ತಾಯ್ತನ ಮುಂತಾದ ಕತೆಗಳು ಕಲಾತ್ಮಕವಾಗಿ ತಿಳಿಸುತ್ತವೆ. ಸಿರಿ ತೋರಿದ ದಾರಿ ಅದ್ಭುತದಷ್ಟು ಜಾನಪದ ಕತೆಯ ಶೈಲಿಯನ್ನು ಒಳಗೊಂಡಿದೆ.

## ಏಕಾಂತ ಮತ್ತು ಇತರ ಪ್ರಬಂಧಗಳು

ಎಚ್. ಜಿ. ಸಣ್ಣಗುಡ್ಡಯ್ಯ

**ಪುಟ : ೧೪೦** **ಬೆಲೆ : ರೂ. ೭೫**

**ಅಕ್ಷರ ಪ್ರಕಾಶನ,** ತುಮಕೂರು - ೫೭೨ ೧೦೩

ಎಚ್. ಜಿ. ಸಣ್ಣಗುಡ್ಡಯ್ಯನವರ ಈ ಪ್ರಬಂಧ ಸಂಕಲನ ಮೂರನೆಯ ಮುದ್ರಣವನ್ನು ಕಂಡಿರುವುದು ಅದರ ಪ್ರಾಮುಖ್ಯತೆಯನ್ನು ತೋರಿಸುತ್ತದೆ. ಹದಿಮೂರು ಪ್ರಬಂಧಗಳನ್ನು ಒಳಗೊಂಡಿರುವ ಈ ಸಂಕಲನದಲ್ಲಿ ವಿವಿಧ ವಿಷಯಗಳ ಬಗ್ಗೆ ಆತ್ಮೀಯ ಓದು ದೊರೆಯುತ್ತದೆ. ಎ. ಎನ್. ಮೂರ್ತಿರಾವ್ ಅವರ ಪ್ರಬಂಧಗಳ ಲಾಲಿತ್ಯ ಮತ್ತು ಪು.ತಿ.ನ ಅವರ ಪ್ರಬಂಧಗಳ ಚಿಂತನಾಪರತೆಯ ಬಗೆಯನ್ನು ಇಲ್ಲಿನ ಹಲವು ಪ್ರಬಂಧಗಳಲ್ಲಿ ಕಾಣಬಹುದು. 'ಬೆಂಗಳೂರು' ಎಂಬ ಹೆಸರಿನ ಪ್ರಬಂಧವೊಂದು ಇಲ್ಲಿ ಇದ್ದು ಅದೇ ವಿಷಯವನ್ನು ಕುರಿತು ಎ. ಎನ್. ಮೂರ್ತಿರಾವ್ ಭಿನ್ನವಾಗಿ ಬರೆದಿರುವುದನ್ನು ಜ್ಞಾಪಿಸಿಕೊಳ್ಳಬಹುದು. ಲೇಖಕರ ವ್ಯಾಸಂಗದ ವಿಸ್ತಾರ, ಪ್ರಗತಿಶೀಲ ಮನೋಭಾವ ಮತ್ತು ಬದುಕಿನ ಬಗ್ಗೆ ಒಳನೋಟಗಳನ್ನು ಇಲ್ಲಿ ಕಾಣುತ್ತೇವೆ. 'ವ್ಯಕ್ತಿನಿಷ್ಠತೆ' ಪ್ರಬಂಧಗಳ ಮುಖ್ಯ ಗುಣವಾದರೂ ಕೆಲವು ಪ್ರಬಂಧಗಳಲ್ಲಿ ಕಂಡುಬರುವ 'ಅತಿ ವೈಯಕ್ತಿಕತೆ' ಪ್ರಬಂಧದ ಶಿಲ್ಪಕ್ಕೆ ಹೊಂದಿಕೊಳ್ಳುವುದಿಲ್ಲ. ಕೆಲವು ಪ್ರಬಂಧಗಳಲ್ಲಿ ವಿಡಂಬನೆ ಕಂಡುಬಂದರೂ ಅದನ್ನು ಸಮರ್ಥವಾಗಿ ನಿರ್ವಹಿಸಬಲ್ಲ ಪ್ರತಿಭೆ ಲೇಖಕರಲ್ಲಿ ಇಲ್ಲ. ಕೆಲವು ಪ್ರಬಂಧಗಳು ವಾಚಾಳಿತನದಿಂದ ಸೊರಗಿವೆ.

## ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು ?

ಡಿ. ಎನ್. ಶಂಕರ ಭಟ್

**ಪುಟ : ೨೬೪** **ಬೆಲೆ : ರೂ. ೬೫**

**ಭಾಷಾ ಪ್ರಕಾಶನ,** ೪೦೨, ರೂಪಾನಗರ, ಮೈಸೂರು - ೫೭೦ ೦೨೬

ಶ್ರೇಷ್ಠ ಭಾಷಾವಿಜ್ಞಾನಿಯಾದ ಡಿ. ಎನ್. ಶಂಕರಭಟ್ ಅವರು ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದಂತೆ ಅತ್ಯಂತ ಬೆಲೆಬಾಳುವ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಅವರ ಪಾಂಡಿತ್ಯ ಮತ್ತು ಒಳನೋಟಗಳು ಬೆರಗನ್ನುಂಟುಮಾಡುತ್ತವೆ. ಸಂಸ್ಕೃತ ಭಾಷೆಯ ಮಾದರಿಯಲ್ಲಿ ಕನ್ನಡ ವ್ಯಾಕರಣಗಳು ರಚಿತವಾದುದರಿಂದ ಉಂಟಾದ ಗೊಂದಲಗಳನ್ನು ಭಟ್ ಅವರು ತಮ್ಮ ವಿಚಾರಗಳಲ್ಲಿ ವೈಜ್ಞಾನಿಕವಾಗಿ ಆಧಾರಗಳ ಮೂಲಕ ತಿಳಿಸಿಕೊಡುತ್ತಾರೆ. ಈ ಕೃತಿಯಲ್ಲಿಯೂ ಕನ್ನಡದ ವ್ಯಾಕರಣ ತತ್ತ್ವಗಳು ಸಂಸ್ಕೃತಕ್ಕಿಂತ ಭಿನ್ನವಾಗಿದ್ದು ಹಳೆಗನ್ನಡ ವ್ಯಾಕರಣ ಸಂಸ್ಕೃತದ ಮಾದರಿಯನ್ನು ಅನುಸರಿಸಿ ಯಾವ ರೀತಿ ದಾರಿ ತಪ್ಪಿತು ಎಂಬ ಸಂಗತಿಯನ್ನು ವಿವರವಾಗಿ ಕಾಣಬಹುದು. ಕೃತಿ ರಚನೆಯಲ್ಲಿ ಸಾಕಷ್ಟು ಪೂರ್ವಸಿದ್ಧತೆಯನ್ನು ಗುರುತಿಸಬಹುದು. ಸರ್ವನಾಮಗಳ ಬಗ್ಗೆ ಪುಸ್ತಕವೊಂದನ್ನು ಬರೆಯಲು ಪ್ರಪಂಚದ ಬೇರೆ ಬೇರೆ ಭಾಷೆಗಳಲ್ಲಿ ಬಳಕೆಯಲ್ಲಿರುವ ನಾಲ್ಕು ನೂರಕ್ಕಿಂತಲೂ ಹೆಚ್ಚು ವ್ಯಾಕರಣಗಳನ್ನು ಪರಿಶೀಲಿಸಿದ್ದಾರೆ ಎಂಬ ಸಂಗತಿ ಇವರ ವಿದ್ವತ್ತಿಗೆ ಸಾಕ್ಷಿ. ಭಟ್ಟರ ಚಿಂತನೆಗಳು ಶಿಕ್ಷಣ ವ್ಯವಸ್ಥೆಯಲ್ಲಿ ಸೇರದೇ ಇರುವುದು ಹಾಗೂ ಆ ಬಗ್ಗೆ ಸಾಕಷ್ಟು ಚರ್ಚೆ ಆಗದೇ ಇರುವುದು ಬೇಸರದ ಸಂಗತಿ.

## ಅನೇಕ

ಡಿ. ಎಸ್. ನಾಗಭೂಷಣ

**ಪುಟ : ೨೯೪** **ಬೆಲೆ : ರೂ. ೧೨೫**



**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ
ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಸಾಹಿತ್ಯ ಮತ್ತು ಸಾಮಾಜಿಕ ವಿಚಾರಗಳ ಲೇಖನಗಳ ಸಂಗ್ರಹ 'ಅನೇಕ'. ಇವರ 'ಗಮನ' ಕೃತಿ ಪ್ರಕಟವಾಗಿ ಹದಿನೈದು ವರ್ಷಗಳು ಕಳೆದಿದ್ದು ಈಗ ಈ ಗ್ರಂಥ ಬಂದಿದೆ. ಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ಕ್ರಿಯಾಶೀಲರಾಗಿ ಯೋಚಿಸುವ ನಾಗಭೂಷಣ ಅವರು ಹಲವು ಚಳುವಳಿಗಳಿಂದ ಪ್ರಭಾವಿತರಾದರೂ ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡಿದ್ದಾರೆ. ಸಾಹಿತ್ಯ ಕೃತಿಗಳನ್ನು ಸಂಸ್ಕೃತಿಯ ದೃಷ್ಟಿಯಿಂದ ಗಂಭೀರವಾಗಿ ಚರ್ಚಿಸುವುದು ಇವರ ಆಸಕ್ತಿ. ಹಲವು ಕಡೆ ಚದುರಿಹೋದ ಲೇಖನಗಳನ್ನು ಸೇರಿಸಿರುವುದರಿಂದ ಏಕರೂಪತೆ ಕಾಣುವುದಿಲ್ಲ. ಕುವೆಂಪು, ಮಾಸ್ತಿ ಮತ್ತು ಶಿವರುದ್ರಪ್ಪನವರ ಬಗ್ಗೆ ಈ ಕೃತಿಯಲ್ಲಿ ಹೆಚ್ಚಿನ ಚರ್ಚೆ ಕಂಡುಬರುತ್ತದೆ. ನಾಲ್ಕು ಸಂದರ್ಶನ ಲೇಖನಗಳು ಕೃತಿಗೆ ಒಳ್ಳೆಯ ಸೇರ್ಪಡೆಯಾಗಿವೆ. ಜಾಗತೀಕರಣ ಪ್ರಭಾವದ ಹಿನ್ನೆಲೆಯಲ್ಲಿ ಆಕಾಶವಾಣಿಯ ಮಿತಿ ಮತ್ತು ಶಕ್ತಿಗಳನ್ನು ಎರಡು ಲೇಖನಗಳಲ್ಲಿ ತಮ್ಮ ಅನುಭವದ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಒಟ್ಟಾರೆ 'ಅನೇಕ' ಅನೇಕ ಪುಸ್ತಕಗಳಲ್ಲಿ ಒಂದಾಗದೆ ಸಂಗ್ರಹಯೋಗ್ಯ ಸಂಕಲನವಾಗಿದೆ.



## ನಮ್ಮೊಡನೆ ನಮ್ಮ ನುಡಿ

ಕೆ. ವಿ. ನಾರಾಯಣ

**ಪುಟ : ೧೦೮** **ಬೆಲೆ : ರೂ. ೫೦**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ
ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಭಾಷೆಯ ರಚನೆ ಮತ್ತು ಬಳಕೆಗಳ ಬಗೆಗೆ ಲೇಖಕರು ನಡೆಸಿರುವ ಚಿಂತನೆ ಮತ್ತು ಚರ್ಚೆಗಳನ್ನು ಇಲ್ಲಿನ ಹತ್ತೊಂಬತ್ತು ಲೇಖನಗಳಲ್ಲಿ ಕಾಣಬಹುದು. ಶ್ರೇಷ್ಠ ಸಾಹಿತ್ಯ ವಿಮರ್ಶಕರಾದ ಕೆ. ವಿ. ನಾರಾಯಣ ಅವರು ಇತ್ತೀಚಿನ ವರ್ಷಗಳಲ್ಲಿ ಭಾಷಾವಿಜ್ಞಾನದ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದು ಹಲವಾರು ಮುಖ್ಯವಾದ ಲೇಖನಗಳನ್ನು ಬರೆದಿದ್ದಾರೆ. ಭಾಷೆಯ ಬಗ್ಗೆ ಬಂದಿರುವ ಆಧುನಿಕ ಚಿಂತನೆಗಳನ್ನು ಆಳವಾಗಿ ಅಭ್ಯಾಸ ಮಾಡಿರುವ ಲೇಖಕರು ಅವುಗಳನ್ನು ಕನ್ನಡದ ಸಂದರ್ಭಕ್ಕೆ ಚೆನ್ನಾಗಿ ಉಪಯೋಗಿಸಿಕೊಳ್ಳುತ್ತಾರೆ. ಬದಲಾದ ಸನ್ನಿವೇಶದಲ್ಲಿ ಕನ್ನಡ ಹೊಸ ಸವಾಲುಗಳನ್ನು ಯಾವ ರೀತಿ ಎದುರಿಸಬೇಕೆಂಬ ಅಂಶವನ್ನು ಇಲ್ಲಿನ ಟಿಪ್ಪಣಿಗಳು ವಸ್ತುನಿಷ್ಠವಾಗಿ ಚರ್ಚಿಸುತ್ತವೆ. ಸಂಸ್ಕೃತ/ಇಂಗ್ಲಿಷ್/ತಂತ್ರಜ್ಞಾನಗಳ ಪ್ರಭಾವದಿಂದ ಕನ್ನಡ ಹೊಂದಿರುವ ಪಲ್ಲಟಗಳನ್ನು ಹಲವು ಲೇಖನಗಳು ಪರಿಶೀಲಿಸುತ್ತವೆ. ಒಟ್ಟಾರೆ ಇಲ್ಲಿನ ಬರಹಗಳು ಪರ್ಯಾಯ ಚಿಂತನಾಕ್ರಮಗಳನ್ನು ರೂಪಿಸುವ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ.

## ಎಡೆಗಳು ಹೇಳುವ ಕಂನಾಡ ಕತೆ

ಶಂ. ಬಾ. ಜೋಶಿ

**ಪುಟ : ೧೮೨** **ಬೆಲೆ : ರೂ. ೭೫**

**ಶಂ. ಬಾ. ವಿಚಾರ ವೇದಿಕೆ,** 'ಶ್ರೇಯಸ್', ೭೩೭(೨೬೨)
ಕೃಷ್ಣಾನದಿ ರಸ್ತೆ, ಪೈಪ್‌ಲೈನ್, ಶ್ರೀನಗರ
ಬೆಂಗಳೂರು - ೫೬೦ ೦೫೦

ಐವತ್ತೆಂಟು ವರ್ಷಗಳ ಹಿಂದೆ ಪ್ರಕಟವಾಗಿದ್ದ ಈ ಕೃತಿಯನ್ನು ಶಂ. ಬಾ. ವಿಚಾರ ವೇದಿಕೆ ಪುನರ್‌ಮುದ್ರಿಸಿರುವುದು ಮೆಚ್ಚಬೇಕಾದ ಸಂಗತಿ. ಇಲ್ಲಿನ ವಿಚಾರಗಳ ಮರುಪರಿಶೀಲನೆ ಪುಸ್ತಕದ ಒಂದು ಭಾಗವಾಗಿ ವಿದ್ವಾಂಸರಿಂದ ಬರೆಸಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತು. ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಬಗ್ಗೆ ಶಂಬಾ ಅವರು ಅತ್ಯಂತ ಕಳಕಳಿಯನ್ನು ಹೊಂದಿದ್ದು ಅವುಗಳ ಬಗ್ಗೆ ಸಂಶೋಧನಾತ್ಮಕ ಹಲವು ಕೃತಿಗಳನ್ನು ಬರೆದಿದ್ದಾರೆ. ಸ್ಥಳನಾಮಗಳು ತಿಳಿಸುವ ಕನ್ನಡ ನಾಡಿನ ಇತಿಹಾಸವನ್ನು ಈ ಕೃತಿ ಪರಿಚಯ ಮಾಡಿಕೊಡುತ್ತದೆ. ಸರಿಯಾದ ಆಕರಗಳನ್ನು ದೊರಕಿಸಿಕೊಳ್ಳುವ ಕಷ್ಟದ ಆ ಕಾಲದಲ್ಲಿಯೂ ಶಂ.ಬಾ. ಅವರ ವಿದ್ವತ್ತು ತಮ್ಮ ಕೃತಿಗೆ ಸಂಸ್ಕೃತಿ, ಇತಿಹಾಸ, ಜಾನಪದ – ಮುಂತಾದವುಗಳ ತಿಳುವಳಿಕೆಯನ್ನು ಉಪಯೋಗಿಸಿಕೊಳ್ಳುತ್ತದೆ. ಅವರ ಗಾಢವಾದ ವ್ಯಾಸಂಗ ಮತ್ತು ಜಿಜ್ಞಾಸೆಯ ಮನೋಭಾವವನ್ನು ಮೆಚ್ಚದೆ ಇರಲು ಸಾಧ್ಯವಿಲ್ಲ.

– ಎಚ್ಚೆಸ್ವೆಮ್

# ಮೀಯುವ ಆಟ

ಎಚ್. ನಾಗವೇಣಿಯವರ 'ಮೀಯುವ ಆಟ' ನಾನು ಇತ್ತೀಚೆಗೆ ಓದಿದ ಪುಸ್ತಕ. ಲೋಹಿಯಾ ಪ್ರಕಾಶನದ ಈ ಕಥಾಸಂಕಲನದಲ್ಲಿ ಒಟ್ಟು ಹತ್ತು ಕತೆಗಳಿವೆ. ಹಲವು ಕತೆಗಳು ವಿವಿಧ ಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟವಾಗಿವೆ. ಲೇಖಕರ ಕತೆಗಳನ್ನು ಬಿಡಿಯಾಗಿ ಓದಿದಾಗ ಸಿಗುವ ಸಂತೋಷ ಒಂದು ವಿಧ. ಸಂಕಲನ ರೂಪದಲ್ಲಿ ಓದುವಾಗ ಸಿಗುವ ಲಾಭವೇ ಬೇರೆ. ಹೀಗೆ ಒಂದೆಡೆ ಓದಿದಾಗ ಲೇಖಕರ ಬರಹದ ವಿಶಿಷ್ಟ ಗತ್ತು, ಗುರಿ, ವಿಶಿಷ್ಟತೆಗಳನ್ನು ಅರಿತುಕೊಳ್ಳುವುದು ಸಾಧ್ಯವಾಗುತ್ತದೆ.

ನಾಗವೇಣಿಯವರ 'ಮೀಯುವ ಆಟ' ಸಂಕಲನವು ದಕ್ಷಿಣಕನ್ನಡದ ಹಲವು ಶೂದ್ರ ಸಮುದಾಯಗಳ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವುದಕ್ಕೆ ಮತ್ತು ಅದಕ್ಕಿಂತಲೂ ಮುಖ್ಯವಾಗಿ ಮುಸ್ಲಿಂ ಮತ್ತು ಶೂದ್ರ ಸಮುದಾಯಗಳ ನಡುವಿನ ಒಡನಾಟ, ಅವರೊಳಗಿನ ಬಾಂಧವ್ಯ – ಇವುಗಳನ್ನು ಕಟ್ಟಿಕೊಟ್ಟ ಕ್ರಮಕ್ಕಾಗಿ ಗಮನಾರ್ಹವಾಗುತ್ತದೆ. ಕೋಮುವಾದದ ಬಿಸಿ ಈ ಜಿಲ್ಲೆಯಲ್ಲಿ ದಿನೇದಿನೇ ಏರುತ್ತಿರುವ ಈ ದಿನಗಳಲ್ಲಿ ನಾಗವೇಣಿಯವರು ಇದೇ ಜಿಲ್ಲೆಯಲ್ಲಿ ಆಪ್ತವಾಗಿ ಹರಡಿರುವ ಕೋಮು ಸೌಹಾರ್ದದ ಹಲವು ಮುಖಗಳನ್ನು ಕತೆಗಳಲ್ಲಿ ತೆರೆದಿಟ್ಟಿದ್ದಾರೆ. ಹಾಗಂತ ಕೃತಕವಾಗಿ ಅಥವಾ ಸಿದ್ಧಾಂತಕ್ಕಾಗಿ ರೂಪುಗೊಂಡ ರಚನೆಗಳಾಗಿರದೆ, ಇವು ಉಸಿರಾಡುವಷ್ಟು ಸಹಜವಾದ ಸರಳ ರಚನೆಗಳು ಎನಿಸುತ್ತವೆ. ಸಂಕಲನದ 'ಮೀಯುವ ಆಟ', 'ತಾಯ್ತನ', 'ಒಡಲು' – ಈ ಮಾದರಿಯ ಕತೆಗಳಾಗಿವೆ.

ಇಲ್ಲೇ ಇನ್ನೊಂದು ಸಂಗತಿಯನ್ನೂ ಹೇಳಬೇಕು. ನಾವು ನಮ್ಮ ಬದುಕನ್ನು ಜಾತಿ-ಉಪಜಾತಿ ಮತ್ತು ಧರ್ಮಗಳೆಂಬ ಪ್ರತ್ಯೇಕ ಕೋಣೆಗಳಲ್ಲಿ ಬಂಧಿಸಿ ಇಟ್ಟಿರುತ್ತೇವೆ. ಹೀಗಾಗಿ ನಮಗೆ ನಮ್ಮ ಕೋಣೆಗಳನ್ನು ಚಿತ್ರಿಸಲು ಸಾಧ್ಯವೇ ಹೊರತು, ಇನ್ನೊಂದು ಕೋಣೆಯ ಅರಿವು ಇರುವುದಿಲ್ಲ. ಅಷ್ಟಿಷ್ಟು ಚಿತ್ರಿಸಿದರೂ, ಅದು ಹೊರಗಿನ ಅಥವಾ ಸ್ಥೂಲವಾದ ಚಿತ್ರಣ ಮಾತ್ರ ಆಗಿರುತ್ತದೆ. ನಾಗವೇಣಿಯವರು ಇಂತಹ ಪ್ರತ್ಯೇಕ ಕೋಣೆಗಳ ಚೌಕಟ್ಟನ್ನು ಮೀರಿ, ಜಿಲ್ಲೆಯ ಬಂಟ, ಬೆಸ್ತ, ಮುಸ್ಲಿಂ, ದಲಿತ ಹೀಗೆ ಹಲವು ಸಮುದಾಯಗಳ ಒಳಹೊಕ್ಕು ಪರಕಾಯಪ್ರವೇಶ ಮಾಡಿ, ಅನನ್ಯತೆಗಳನ್ನು ಗುರುತಿಸಿದ್ದಾರೆ; ಭಿನ್ನ ಭಿನ್ನ ಕೋಣೆಯೊಳಗೆ ಬಂಧಿಗಳಾಗಿಯೂ ಜನರು ಹೊಂದಿರುವ ಅನ್ಯೋನ್ಯ ಸಂಬಂಧದ ಎಳೆಗಳನ್ನು, ಅವುಗಳ ಸೂಕ್ಷ್ಮ ಮತ್ತು ಸಂಕೀರ್ಣ ಸ್ಥಿತಿಗಳನ್ನು ಗ್ರಹಿಸುವ ಶಕ್ತಿಯನ್ನು ಪಡೆದಿದ್ದಾರೆ. ಇದು ಅವರ ಹೆಚ್ಚುಗಾರಿಕೆ. ದಕ್ಷಿಣಕನ್ನಡದ ಮುಸ್ಲಿಂ ಬರೆಹಗಾರರು ತಮ್ಮ ಸಾಹಿತ್ಯದಲ್ಲಿ ಈ ಬಗೆಯ ಮುಸ್ಲಿಂ ಮತ್ತು ಹಿಂದೂ ಜನರ ಒಡನಾಟವನ್ನು ಚಿತ್ರಿಸುವತ್ತ ಹೆಚ್ಚು ಗಮನ ಕೊಟ್ಟಿಲ್ಲ; ಕೆಲವು ಪ್ರಯತ್ನಗಳು ನಡೆದಿದ್ದರೂ ಇಲ್ಲಿಯ ಗಟ್ಟಿತನ ಅವುಗಳಲ್ಲಿಲ್ಲ.

◆ ಡಾ॥ ಸಬಿಹಾ



ನಾಗವೇಣಿಯವರ ಕತೆಗಳ ವೈಶಿಷ್ಟ್ಯವೆಂದರೆ – ಇವುಗಳಲ್ಲಿ ಕತೆಯ ಎಳೆ ಬಹುಚಿಕ್ಕದು. ಆದರೆ ಇಂತಹ ಪುಟ್ಟ ಪುಟ್ಟ ಎಳೆಗಳನ್ನೇ ಎತ್ತಿಕೊಂಡು, ಅವುಗಳ ಹಲವು ಮಗ್ಗುಲುಗಳ ಕಡೆ ದಿಟ್ಟಿ ಹಾಯಿಸುವ, ಪಾತ್ರಗಳ ಮನದ ಒಳತೋಟಿಯನ್ನು ಹಿಂಜಿ ಹಿಂಜಿ ನೀಡುವ, ಆಯಾ ಪಾತ್ರಗಳ ಸಾಂಸ್ಕೃತಿಕ ವಿಚಾರಗಳನ್ನು, ಅದು ಒಡ್ಡುವ ಬಿಗಿತ ಸೆಳೆತಗಳನ್ನೂ ತಬ್ಬಿಕೊಂಡೇ ಕಥನ ಮುಂದುವರಿಯುತ್ತದೆ. ಆದರೆ ಎಲ್ಲೂ ಕೇಂದ್ರದಿಂದ ಓದುಗರ ಗಮನ ಬೇರೆಡೆ ಹರಿಯದಂತೆ ಬಿಗಿಯಾದ ಬಂಧವನ್ನು ಒಳಗೊಂಡಿರುತ್ತದೆ. ಇದು ಕಥನಗಾರಿಕೆ ನಾಗವೇಣಿಯವರಿಗೆ ಸಿದ್ಧಿಸಿದುದರ ಫಲ.



ಪುಟ viii + ೧೪೪ ಬೆಲೆ : ರೂ. ೬೦
ಲೋಹಿಯಾ ಪ್ರಕಾಶನ, ಬಳ್ಳಾರಿ

ಪ್ರಕೃತಿ ಮತ್ತು ಮನುಷ್ಯ ಸಂಬಂಧದ ಗಾಢತೆ ಇವರ ಕತೆಗಳಲ್ಲಿ ಕಂಡುಬರುವ ಇನ್ನೊಂದು ವಿಶೇಷತೆ. ಸೂರ್ಯದೇವರು ಮೂಡುವ ಇಲ್ಲವೆ ಮುಳುಗುವ ಹೊತ್ತು, ನದಿ, ಸಮುದ್ರಗಳು ಇಲ್ಲಿಯ ಪಾತ್ರಗಳ ಬದುಕಲ್ಲಿ (ಧನಿಗಳ ಬೆಳ್ಳಿಲೋಟ, ಸೇವಂತಿ ಓಲೆ, ಒಡಲು, ಜೀವಸೆಲೆ, ಮೀಯುವ ಆಟ) ಹೊಂದಿರುವ ಅವಿನಾಭಾವ ಸಂಬಂಧ, ನದಿಯೊಂದು ಮಳೆಗಾಲದಲ್ಲಿ ಹೊತ್ತುತರುವ ಪರಿಕರಗಳ ಚಿತ್ರ (ಧನಿಗಳ ಬೆಳ್ಳಿಲೋಟ), ಮುಂತಾದ ಹಲವು ಸಂದರ್ಭಗಳು ಶಕ್ತ ಶಬ್ದಚಿತ್ರಗಳಾಗಿವೆ. ತಾವು ಕತೆಗೆ ಆಯ್ದುಕೊಳ್ಳುವ ವಸ್ತು, ವ್ಯಕ್ತಿ, ಪರಿಸರಗಳ ನಾನಾ ಮುಖಗಳನ್ನು ಲೇಖಕಿ ಸೂಕ್ಷ್ಮವಾಗಿ ಗ್ರಹಿಸಿರುವುದು ಕಂಡುಬರುತ್ತದೆ. ಬೆಸ್ತರದಾದರೆ ಅವರ ರಂಪೋಣಿ ತಂಡದ ನಿಯಮಗಳು, ಕಟ್ಟಳೆಗಳು ಮತ್ತು ನಂಬಿಕೆಗಳು, ಅಜಲು ಪದ್ಧತಿಯೊಂದರ ಕುರಿತು ಸವರ್ಣೀಯರ ಮತ್ತು ಅಕ್ಷರಸ್ಥ ದಲಿತರ ನಂಬಿಕೆ; ಅಕ್ಷರಸ್ಥ ದಲಿತರ ಚಿಂತನೆ ಇತ್ಯಾದಿಗಳು ಇಲ್ಲಿ ಅತ್ಯಂತ ಸಹಜವಾಗಿ ಮೂಡಿಬಂದಿವೆ.

ನಾಗವೇಣಿಯವರು ಕಟ್ಟಿಕೊಡುವ ಪಾತ್ರಗಳು ಸಂಕೀರ್ಣ ಪಾತ್ರಗಳಾಗಿವೆ. ಉದಾಹರಣೆಗೆ, 'ಮೀಯುವ ಆಟ'ದ ಉಮ್ಮಕ್ಕ ಶೆಡ್ತಿ ಮತ್ತು ಖಾದ್ರಿ ಬ್ಯಾರಿಯವರ ಪಾತ್ರಚಿತ್ರಣ ಇದಕ್ಕೊಂದು ನಿದರ್ಶನ. ಉಮ್ಮಕ್ಕ ತೋರುವ ಜಿಪುಣತನ, ಸಿಟ್ಟು, ಆಕ್ರೋಶಗಳು ಭವಿಷ್ಯದ ಚಿಂತೆಯನ್ನು ಒಳಗೊಂಡದ್ದು; ಕುಟುಂಬದ ಕಾಳಜಿಯನ್ನು ಒಳಗೊಂಡದ್ದು. ಅದೇ ವೇಳೆಗೆ ಆಕೆಯ ಆಕ್ರೋಶಕ್ಕೆ ಒಳಗಾಗುವ ಖಾದ್ರಿ ಬ್ಯಾರಿಯ ನೋವು, ಅಪಮಾನ, ಹಿಂಸೆಗಳೂ ಅರ್ಥಪೂರ್ಣ. ಇಬ್ಬರೂ ಪರಸ್ಪರ ವೈರಿಗಳೇನೂ ಅಲ್ಲ; ಆತ್ಮಗೌರವ, ಮಾನವತೆ, ಶ್ರಮಸಂಸ್ಕೃತಿ, ಕಷ್ಟಸಹಿಷ್ಣುತೆ ಮತ್ತು ನಿಸ್ವಾರ್ಥತೆಗಳಲ್ಲಿ ಇಬ್ಬರೂ ಸಮಾನರು ಎಂಬ ನಿಲುವು ಕತೆಯಲ್ಲಿ ಮೂಡಿದೆ. ಹೀಗಿದ್ದೂ ಮನುಷ್ಯ ಇನ್ನೊಬ್ಬನ ನೋವಿಗೆ, ಅಪಮಾನಕ್ಕೆ ಕಾರಣನಾಗುವ ಬಗೆಯ ಅನಾವರಣವೇ ಕತೆಯ ಹೆಚ್ಚುಗಾರಿಕೆಯಾಗಿದೆ. ಇದೇ ರೀತಿ 'ದಾಸ' ಕತೆಯಲ್ಲಿ ಬರುವ ಅಜಲು ಪದ್ಧತಿಯ ಕುರಿತು ಗುತ್ತಿನ ಮನೆಯವರ ನಂಬಿಕೆ, ವಿದ್ಯಾವಂತ ದಲಿತ ಕೇತುವಿನ ಆಕ್ರೋಶ ಎರಡೂ ತಮ್ಮ ತಮ್ಮ ನೆಲೆಯಲ್ಲಿ ಪ್ರಾಮಾಣಿಕವಾಗಿ ಮೂಡಿಬಂದಿವೆ. ಇಂತಹ ಸಂಘರ್ಷದಲ್ಲಿ ಗುತ್ತಿನ ಒಡತಿ ಸೀತಮ್ಮನ ಘನ ವ್ಯಕ್ತಿತ್ವವು ಕೇತುವಿನ ತಂದೆ-ತಾಯಿಯರನ್ನು ಮಾತ್ರವಲ್ಲದೇ ಆತನನ್ನೂ ಕ್ಷಣಕಾಲ ಮೂಕವಾಗಿಸಿದ ಬಗೆಯಲ್ಲಿ ಕೃತಕತೆ ಇಲ್ಲ. 'ತಾಯ್ತನ' ಕತೆಯ ಐಸ್ಲಂ ಬ್ಯಾರಿಯವರು ಕೋಮು ದ್ವೇಷದ ವಿಷಮ ಜ್ವಾಲೆಯ ಬಿಸಿ ಉಂಡೂ, ಗಂಡನ ಸಾವಿನ ದಿನದಂದೇ ತನ್ನ ದುಃಖವನ್ನು ಮೀರಿ, ಇದ್ದತ್ ಆಚರಿಸುವುದನ್ನೂ ಮುಂದೂಡಿ ಮೈರೆ ಮೊಲ್ದಿಯ ಮಗಳು ಸುಂದರಿಯ ಹೆರಿಗೆ ಮಾಡಿಸಲು ಬರುವಲ್ಲಿ ಮಾನವೀಯತೆ ಮೆರೆಯುತ್ತಾರೆ. ಸೌಹಾರ್ದತೆಗೆ ಭಾಷ್ಯ ಬರೆಯುತ್ತಾರೆ. 'ಒಡಲು' ಕತೆಯ ಮಂಜು ಮರಕಾಲ್ತಿ ನೆರೆಮನೆಯ ಸೈಯದ್ದಿ ಮತ್ತು ನಫೀಸಮ್ಮನ ಕುರಿತು ತೋರುವ ಅಂತಃಕರಣ, ನಫೀಸಮ್ಮ ತಾನು ಸೊಂಟದಲ್ಲಿ ಹೊತ್ತು ತಿರುಗುವ ಕೂಸು 'ಕೇಶವ'ನ ಕುರಿತು ಹೊಂದಿರುವ ಪ್ರೀತಿ ಇನ್ನೊಂದು ಮಾದರಿ. ಇವರ ಕತೆಗಳ ಇಂತಹ ಪಾತ್ರಗಳು ಹೀಗೆ ತಮ್ಮ ವ್ಯಕ್ತಿತ್ವದ ಘನತೆಯಿಂದಲೇ ವರ್ತಮಾನದ ಬದುಕನ್ನು, ಅದರಲ್ಲಿ ಎದುರಾಗುವ ಬಿಕ್ಕಟ್ಟುಗಳನ್ನು ಗೆಲ್ಲುತ್ತವೆ.

ನಾಗವೇಣಿಯವರ ಕತೆಗಳು ಮಾತು ಮತ್ತು ಮೌನಗಳ ಅರ್ಥವಂತಿಕೆಯನ್ನು ಸರಿಯಾಗಿ ಗ್ರಹಿಸಿವೆ ಮತ್ತು ಪರಿಣಾಮಕಾರಿಯಾಗಿ ಮುಂದಿಟ್ಟಿವೆ. ಮನುಷ್ಯ ತನ್ನ ಭಾವಾವೇಶಗಳನ್ನು ಭಾಷೆಯ ಮೂಲಕ ಅಭಿವ್ಯಕ್ತಿಸುತ್ತಾ, ಅದರಲ್ಲಿ ತನ್ನ ಸಿದ್ಧಿಗಾಗಿ ಅಭಿಮಾನ ಪಡುತ್ತಾ ಸಾಗಿದ್ದಾನೆ. ಆದರೆ ಉತ್ಕಟವಾದ ಅಥವಾ ಸಂಕೀರ್ಣವಾದ ಸಂದರ್ಭಗಳಲ್ಲಿ ಮಾತು ತನ್ನೆಲ್ಲ ಅರ್ಥಸಾಧ್ಯತೆಗಳನ್ನು ಹೇಗೆ ಕಳೆದುಕೊಳ್ಳುತ್ತದೆ ಮತ್ತು ಕೇವಲ ಮೌನವೇ ಹೇಗೆ ನಮ್ಮ ಪ್ರೀತಿ, ಸಿಟ್ಟು, ಆಕ್ರೋಶ, ವಿನಂತಿ ಮುಂತಾದ ಭಾವಗಳನ್ನು ತೀವ್ರವಾಗಿ ಮುಟ್ಟಿಸಬಲ್ಲದು ಎಂಬುದನ್ನು

ಅರಿಯಬೇಕಾದರೆ 'ಒಡಲು' ಕತೆಯ ಮಂಜು ಮರಕಾಲ್ತಿ ಸೈಯದ್ದಿಗೆ, 'ಸೇವಂತಿಯ ಓಲೆ' ಕತೆಯ ಸೇವಂತಿ ಗಂಗಯ್ಯ ಶೆಟ್ಟಿಗೆ, 'ತಾಯ್ತನ' ಕತೆಯಲ್ಲಿ ಐಸ್ಲಂ ಬ್ಯಾರಿಯನ್ನು ಕರೆತರುವಾಗ ತುಕ್ರ ಭಂಡಾರಿಯು ನಿರ್ಣಾಯಕ ಸಂದರ್ಭಗಳಲ್ಲಿ ತೋರಿದ ಪ್ರತಿಕ್ರಿಯೆಗಳನ್ನು ನೆನಪಿಸಿಕೊಳ್ಳಬೇಕು. ಇಂತಹ ಅರ್ಥಪೂರ್ಣ ಹಾಗೂ ಸಶಕ್ತ ಮೌನ ಸ್ತ್ರೀಜಗತ್ತಿನ ಪ್ರತಿಭಟನೆಯ ಕ್ರಮವೂ ಆಗಿರುತ್ತದೆ. ನಾಗವೇಣಿಯವರು ಅದಕ್ಕೆ ಒಂದು ವೈಶಾಲ್ಯವನ್ನು ಇಲ್ಲಿ ಒದಗಿಸಿದ್ದಾರೆ.

ನಾಗವೇಣಿಯವರು ಕತೆಗಳಲ್ಲಿ ಕೊಡುವ ವಿಶಿಷ್ಟ ಉಪಮೆ, ರೂಪಕ ಮತ್ತು ನಾಣ್ನುಡಿಗಳ ಅಭ್ಯಾಸವೂ ಒಂದು ಒಳ್ಳೆಯ ಪ್ರಯತ್ನವಾಗಿದೆ. ಇಲ್ಲಿ ಕೇವಲ ಕೆಲವು ಮಾದರಿಗಳನ್ನು ನೀಡಲಾಗಿದೆ. ಅವುಗಳೆಂದರೆ :

* ಹೊಗೆಯ ದೆಸೆಯಿಂದ ಕಣ್ಣುಗಳನ್ನು **ಕೆಂಪು ಕೇಪಳಹಣ್ಣು ಮಾಡಿ** – ೧
* ನಿಷ್ಠುರದ ಮಾತುಗಳು ಅವರೆದೆಯೊಳಗೆ ಹುದುಗಿ ಕೂತು **ಒದ್ದೆಬಟ್ಟೆ ಹಿಂಡಿದಂತೆ ಹಿಂಡತೊಡಗಿದ್ದವು** – ೪
* (ಭಯದಲ್ಲಿ) **ನೆತ್ತಿ ಮೇಲೆ ಎಳೆನಾಗರ ಕಂಡಂತೆ** – ೬೨
* ಹೆರಿಗೆ ನೋವೇ ಹಾಗೆ, **ಪ್ರೇಮಿಗಳ ಮುನಿಸಿನಂತೆ, ಹಸುಳೆಯ ಮುಂಗೋಪದಂತೆ** – ೬೩
* ತನ್ನೆದೆಯೊಳಗಿನ **ದುಃಖದ ಚೀಲದ ಬಾಯಿ ಮುಚ್ಚುತ್ತಾ** – ೭೦
* ಕೃತಜ್ಞತೆಯ ಭಾರಕ್ಕೆ **ಆ ಮಾತಿನ ಕೋಟೆಯೇ ಹೂತು ಹೋಗಿದ್ದಿರಬೇಕು** – ೭೧
* **ಜೇಷ ತಿಂಗಳಲ್ಲಿ ಸೊರಗುವ ನೇತ್ರಾವತಿ ಹೊಳೆಯಂತೆ** – ೯೪
* ಮಧುರಭಾವಗಳೆಲ್ಲ ಇದೀಗ ನೀರು ಹನಿಸಿಕೊಂಡ **ಕೆಂಡದುಂಡೆಗಳಂತೆ** – ೯೪
* ನಾಗರಹಾವು ಹೋಗಿ ನಕ್ಕರುಹುಳದ (ಎರೆಹುಳ) ಮೇಲೆ ಬಿದ್ದರೆ ಲಗಾಡಿ ಆಗುವುದು ಯಾವುದು ಮಾರಾಯರೆ ? – ೯೮
* ಇವನದಿನ್ನು **ಮೆಣಸಿನ ಚಾಪೆಯಲ್ಲಿ ಮಲಗಿದವನ ಸ್ಥಿತಿಯೇ** ಸರಿ – ೯೯
* ಭಾವತಾರಣ ಹುಟ್ಟು ಭಾವಜೀವಿ. **ಒಂಥರಾ ಬಸಳೆ ಬಳ್ಳಿಯ ಸ್ವಭಾವದಾತ** – ೧೨೯
* ಬಿಂದುವಾಸಿನಿಯನ್ನು ವರ್ಣಿಸುವಾಗ – **'ಸೋರೆ ಹೂವಿನಷ್ಟು ಚಂದದ ತರುಣಿ'** – ೧೩೩




* ಭಾವತಾರಣನ **ಮಸದೊಳಗೆ ಸ್ವಂತ ಜಾಗಕ್ಕೊಂದು ಪಟ್ಟಾ ಮಾಡಿಸಿದಳು** – ೧೩೮
* ಅವಳು **ಸಿಟ್ಟಿನಿಂದ ಹುರಿದ ಕಾಳಂತಾದಳು** – ೧೪೨
* ಬಿಂದುವಾಸಿನಿಯನ್ನು ಅವಳ ದೊಡ್ಡಮ್ಮ **"ಹುಲ್ಲ ಮೂಟೆಯಂತೆ ಎಳೆದೊಯ್ದ**"ಳಂತೆ - ೧೪೨.

ನಾಗವೇಣಿಯವರ ಸಾಹಿತ್ಯ ಕ್ಷೇತ್ರದ ಬೆಳವಣಿಗೆ ಬೆರಗು ಮೂಡಿಸುವಂಥದ್ದು; ಅಭಿಮಾನ ಪಡುವಂಥಾದ್ದು. ಅವರ 'ನಾಕನೇ ನೀರು' ಮತ್ತು 'ಗಾಂಧಿ ಬಂದ' ಕೃತಿಗಳನ್ನು ಓದಿದ ಬಳಿಕ "ಇನ್ನು ಬರೆಯಲು ಏನಾದರೂ ಬಾಕಿ ಉಳಿದಿದೆಯಾ ?" ಎಂದು ಅವರನ್ನು ಪ್ರೀತಿಯಿಂದ ಛೇಡಿಸಿದ್ದೆ. ಆಗ ನಾಗವೇಣಿ ಸುಮ್ಮನೆ ನಕ್ಕುಬಿಟ್ಟಿದ್ದರು. 'ಮೀಯುವ ಆಟ'ದ ಮೊದಲ ಮಾತಿನಲ್ಲಿ ಅದನ್ನೇ ಬೇರೆ ರೀತಿಯಲ್ಲಿ ಹೇಳಿದ್ದಾರೆ : "...ನಾನೀಗ ಸಂಪೂರ್ಣ ಸತ್ತಿದ್ದೇನೆ ಎಂಬ ಭಾವ ಹೊತ್ತು ನಾನು ಯಾವುದೇ ತಲ್ಲಣಗಳಿಲ್ಲದೆ ದಿನ ದೂಡುತ್ತಿದ್ದ ಒಂದು ಹೊತ್ತಿನಲ್ಲಿ ಇದ್ದಕ್ಕಿದ್ದಂತೆ ತಟ್ಟನೆ ನನ್ನೊಳಗೆ ನೆನಪಿನ ಹನಿಯಾಗಿ... ಧಾರೆಯಾಗಿ ಹೊಕ್ಕವರು ನಮ್ಮ ಮೊಯದ್ದಿ ಬ್ಯಾರಿಯವರು..." ಎನ್ನುತ್ತಾರೆ. ಅದು 'ಮೀಯುವ ಆಟ'ದ ಕತೆಗೆ ನಿಮಿತ್ತವಾಯಿತು. ಇಲ್ಲಿ ಮುಖ್ಯವಾಗುವುದು ಎರಡು ಸಂಗತಿಗಳು. ಎಲ್ಲ ಮುಗೀತು ಎಂಬ ತಲ್ಲಣದ ಹೊತ್ತಲ್ಲೇ ಜೀವಸೆಲೆ ಬತ್ತದೆ ಒಸರಲು ಆರಂಭಿಸಿದ ಸಂಗತಿ ಮತ್ತು ಪಾತ್ರವೊಂದು ಲೇಖಕಿಯ ಭಾವಕೋಶವನ್ನು ಆವರಿಸಿಕೊಂಡ ಬಗೆ ಎರಡೂ ಗಮನಾರ್ಹವಾಗಿವೆ.

ನಾವು ದೈನಂದಿನ ಬದುಕಿನಲ್ಲಿ ಉಪೇಕ್ಷಿಸುವ, ತಿರಸ್ಕರಿಸುವ ಅಥವಾ ನಿರ್ಲಕ್ಷಿಸುವ ಸಂಗತಿಗಳನ್ನೇ ನಾಗವೇಣಿಯವರು ಹೇಗೆ ಹೆಕ್ಕಿಕೊಳ್ಳುತ್ತಾರೆ ಎಂಬುದು ಬೆರಗು ಹುಟ್ಟಿಸುತ್ತದೆ. ದಕ್ಷಿಣಕನ್ನಡದಲ್ಲೇ ನಾಲ್ಕು ದಶಕಗಳನ್ನು ಕಳೆದರೂ ಪರಿಧಿ ಯಿಂದ ಆಚೆಗೆ ಇಣುಕಿ ನೋಡುವ ಕನಿಷ್ಠ ಕುತೂಹಲವನ್ನೂ ತಾಳದ ನನ್ನ ಜಡತೆಯನ್ನು ಇವರ ಕತೆಗಳ ಜಗತ್ತು ಬಯಲಿಗಿಟ್ಟಿವೆ. ಅಷ್ಟೇ ಅಲ್ಲ, ಹಲವರಿಂದ ಸಾಧ್ಯವಾಗದ ಈ ಜಗಿತ ನಾಗವೇಣಿ ಯವರಿಗೆ ಸಾಧ್ಯವಾದ ಬಗೆಗೆ ಅಚ್ಚರಿ, ಸಂಭ್ರಮ ಹಾಗೂ ಗೌರವಗಳು ಏಕಕಾಲಕ್ಕೆ ಒಡಮೂಡುತ್ತವೆ.

**ಡಾ|| ಸಬಿಹಾ**
ರೀಡರ್, ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ - ೫೭೪ ೧೯೯

## ಹೊರೆ

ವಾಸ್ತವಗಳ ಮರೆಮಾಚಿ
ನಮ್ಮದಲ್ಲದ ಮುಖ ಹೊತ್ತು
ಬಾಡಿಗೆ ಬದುಕು ನೂಕುತ್ತಿರುವ
ಮುಖಹೀನರಿಗೆ
ಮುಖವಾಡವೂ ಹೊರೆ !



ಡಿ. ಎ. ಬಡಿಗೇರ
ತೆಗ್ಗಿನಪೇಟೆ
ಗದಗ - ಬೆಟಗೇರಿ - ೫೮೨ ೧೦೨

# ಜಾಗತೀಕರಣ ಹಾಗೂ ಸಂಸ್ಕೃತಿ

ನಮ್ಮ ದೈನಂದಿನ ಜೀವನದ ಆಗು-ಹೋಗುಗಳ ಮೇಲೆ ತೀವ್ರ ಸ್ವರೂಪದ ಪರಿಣಾಮಗಳನ್ನು ಬೀರುತ್ತಿದೆ ಜಾಗತೀಕರಣ. ಹಲವು ಮಗ್ಗಲುಗಳಿಂದ ವಿಶ್ಲೇಷಿಸಿದಾಗ ಅದರ ವ್ಯಾಪ್ತಿಯ ಪ್ರಮಾಣದ ಅರಿವು ನಮಗಾಗುತ್ತದೆ. ಸಾರ್ವಜನಿಕ ಹಾಗೂ ವೈಯಕ್ತಿಕ ಜೀವನದ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಆಯಾಮಗಳ ಒಳಹೊಕ್ಕು ದೈತ್ಯಶಕ್ತಿಯ ಜಾಗತೀಕರಣ ಉಂಟುಮಾಡುತ್ತಿರುವ ಪಲ್ಲಟಗಳ ಆಳ-ವಿಸ್ತಾರಗಳ ಅಧ್ಯಯನ ಸಂಕೀರ್ಣವಾದುದೆಂದು ವಿಶೇಷಜ್ಞರ ಅಭಿಮತ. ಹಲವು ಶತಮಾನಗಳ ವಿವಿಧ ವಿದ್ಯಮಾನಗಳಿಂದ ರೂಪಿತಗೊಳ್ಳುವ ಸಂಸ್ಕೃತಿಯ ಮಹತ್ವ ಅನನ್ಯ. ಒಂದೊಂದು ರಾಷ್ಟ್ರಕ್ಕೂ ಅದರದ್ದೇ ಆದ ಸಂಸ್ಕೃತಿಯ ಹಿನ್ನೆಲೆಯಿರುವುದು ತಿಳಿದ ವಿಚಾರವೇ. ಸಂಸ್ಕೃತಿಯ ವಿಭಿನ್ನತೆ, ವಿಶಿಷ್ಟತೆ ಮತ್ತು ಬಹುಮುಖತ್ವದ ಮೇಲೆ ಜಾಗತೀಕರಣದ ದಟ್ಟ ಛಾಯೆ, ಪ್ರಭಾವಗಳ ಕೆಲವು ಅಂಶಗಳ ಬಗ್ಗೆ ಗಮನ ಹರಿಸೋಣ.

ಪ್ರಪಂಚದಾದ್ಯಂತ ಸಾಂಸ್ಕೃತಿಕ ಏಕರೂಪತೆ ಸೃಷ್ಟಿಸುವುದು ವಾಷಿಂಗ್‌ಟನ್ ಕನ್ಸೆನ್ಸಸ್ (ಬಹುಜನರ ಐಕ್ಯ ಅಭಿಪ್ರಾಯ) ಆಧಾರಿತ ಇಂದಿನ ಜಾಗತೀಕರಣದ ಗುರಿ. ಇದು ಸಾಂಸ್ಕೃತಿಕ ವೈವಿಧ್ಯತೆಗೆ ಆಸ್ಪದ ನೀಡುವುದಿಲ್ಲ, ಅಂದರೆ ಇದು ಏಕಸ್ವಾಮ್ಯ ಸಂಸ್ಕೃತಿಗೆ ಚಾಲನೆ ನೀಡುತ್ತದೆ ಎಂಬುದನ್ನು ಗುರುತಿಸಬಹುದು. ಅಮೆರಿಕದ ಮುಂದಾಳತ್ವವಿರುವ ಶ್ರೀಮಂತ ರಾಷ್ಟ್ರಗಳ ಸಂಸ್ಕೃತಿ ಹಾಗೂ ಜೀವನ ವಿಧಾನಗಳನ್ನು ಹೇರುವುದು ಇದರ ಉದ್ದೇಶ. ಇವುಗಳನ್ನು ಈ ಪ್ರಬಲ ಶಕ್ತಿಗಳು ನೇರವಾಗಿಯೇ ಪ್ರತಿಪಾದಿಸುತ್ತಿವೆ. ಈ ಹೇರಿಕೆಯ ಎರಡು ಉದಾಹರಣೆಗಳು ಇಲ್ಲಿವೆ :

ಅಕ್ಟೋಬರ್ ೧೨, ೧೯೯೯ರಂದು ಐರ್ಲೆಂಡ್ ಗಣರಾಜ್ಯದ ಡಬ್ಲಿನ್‌ನ ಟ್ರಿನಿಟಿ ಕಾಲೇಜಿನಲ್ಲಿ ಅಮೆರಿಕಾ ಸರ್ಕಾರದ ಮಾಜಿ ಕಾರ್ಯದರ್ಶಿ ಹೆನ್ರಿ ಕಿಸಿಂಜರ್ ಉಪನ್ಯಾಸವನ್ನು ನೀಡುತ್ತ – ''ಅಮೆರಿಕಾದ ಪ್ರಬಲ ಪಾತ್ರದ ಇನ್ನೊಂದು ಹೆಸರೇ ಜಾಗತೀಕರಣ. ಕಳೆದ ಒಂದು ದಶಕದಲ್ಲಿ ಅಮೆರಿಕಾ ಅಭೂತಪೂರ್ವ ಸಂಪತ್ತನ್ನು ಉತ್ಪಾದಿಸಿದೆ. ಬಂಡವಾಳದ ಲಭ್ಯತೆಯನ್ನು ಆಳವಾಗಿಸಿದೆ, ವಿಸ್ತರಿಸಿದೆ. ವಿವಿಧ ರೀತಿಯ ಹೊಸ ತಂತ್ರಜ್ಞಾನಗಳನ್ನು ಕಂಡುಹಿಡಿದು, ಅಭಿವೃದ್ಧಿಗೊಳಿಸಿ, ವಿತರಣೆ ಮಾಡಿದೆ. ಕೊನೆಗಾಣದ ಸರಕು ಹಾಗೂ ಸೇವೆಗಳಿಗೆ ಮಾರುಕಟ್ಟೆಗಳನ್ನು ಸೃಷ್ಟಿಸಿದೆ. ಪೂರ್ಣ ಉದ್ಯೋಗಗಳು, ನಿಜ ವೇತನಗಳ ಹೆಚ್ಚಳ, ಹೆಚ್ಚಿದ ಉತ್ಪಾದನೆ, ಕಡಿಮೆ ಮಟ್ಟದ ಹಣದುಬ್ಬರ, ಸಂಪತ್ತಿನಲ್ಲಿ ವೃದ್ಧಿ, ತಡೆರಹಿತ ಬೆಳವಣಿಗೆ ಮುಂತಾದವುಗಳನ್ನು ಗಮನಿಸಿದರೆ, ಆರ್ಥಿಕವಾಗಿ ಅಮೆರಿಕಾಕ್ಕೆ ಇವುಗಳಿಗಿಂತ ಮಿಗಿಲಾಗಿ ಸಿಗಬೇಕಾದದ್ದು ಏನೂ ಇಲ್ಲ. ಅಮೆರಿಕಾಕ್ಕೆ ಸುಗ್ಗಿಯೋ ಸುಗ್ಗಿ... ಈ ಪ್ರಮಾಣದ ಸಫಲತೆ ಅನುಕರಣೆಗೆ ಸ್ಫೂರ್ತಿದಾಯಕ. ಹಿಂದಿನ ಘಟ್ಟದ ಜಾಗತೀಕರಣ ಬ್ರಿಟಿಷರ ಪ್ರಾಬಲ್ಯದಲ್ಲಿತ್ತು. ಈಗಿರುವುದು ಅಮೆರಿಕಾದ ಸ್ವಾಧೀನದಲ್ಲಿ. ವಿಶ್ವಕ್ಕೆ ಅಮೆರಿಕಾದ ವಿಚಾರಗಳು, ಮೌಲ್ಯಗಳು ಹಾಗೂ ಜೀವನ ವಿಧಾನಗಳನ್ನು ಸ್ವೀಕರಿಸುವುದರ ಹೊರತು ಬೇರೇ ಪರ್ಯಾಯವಿಲ್ಲ,'' ಎಂದಿದ್ದನು.

ಎರಡನೆಯ ಉದಾಹರಣೆ ದಿ ನ್ಯೂಯಾರ್ಕ್ ಟೈಂಸ್‌ನ ಥಾಮಸ್ ಎಲ್ ಫ್ರೀಡ್‌ಮನ್‌ಗೆ ಸಂಬಂಧಪಟ್ಟ ವಿಚಾರ. ಆತ – ''ನಾವು ಅಮೆರಿಕನ್ನರು ವೇಗದ ಜಗತ್ತಿನ ದೇವದೂತರು, ಮುಕ್ತ ಮಾರುಕಟ್ಟೆಯ ಪ್ರವಾದಿಗಳು ಹಾಗೂ ಉಚ್ಚ ತಂತ್ರಜ್ಞಾನದ ಉನ್ನತ ಪುರೋಹಿತರು. ನಮಗೆ ಬೇಕಾದದ್ದು ನಮ್ಮ ಪಿಟ್ಸಾ ಹಟ್‌ಗಳ ಹಾಗೂ ಮೌಲ್ಯಗಳ ಅಗಾಧ ವಿಸ್ತರಣೆ. ಜಗತ್ತು ನಮ್ಮ ನಾಯಕತ್ವದಲ್ಲಿರಬೇಕು. ಅದು ಪ್ರಜಾಪ್ರಭುತ್ವವಾದಿ ಹಾಗೂ ಬಂಡವಾಳಶಾಹಿಯಾಗಿರಬೇಕು. ಪ್ರತಿಯೊಬ್ಬರಿಗೂ ಒಂದು ವೆಬ್‌ಸೈಟ್, ಎಲ್ಲಾ ತುಟಿಗಳಲ್ಲಿ ಪೆಪ್ಸಿ ಬಾಟಲ್, ಪ್ರತಿಯೊಂದು ಕಂಪ್ಯೂಟರ್‌ನಲ್ಲಿ ಮೈಕ್ರೋಸಾಫ್ಟ್ ವಿಂಡೋಸ್ ಇರಬೇಕು ಹಾಗೂ ಎಲ್ಲೆಡೆ ಪ್ರತಿಯೊಬ್ಬರು ಸ್ವಂತ ಕಾರನ್ನು ಹೊಂದಿರಬೇಕು,'' ಎಂದಿದ್ದಾನೆ.

ಇನ್ನೊಂದೆಡೆ, ಆತ – ''ಜಾಗತೀಕರಣಕ್ಕೆ ಅದರದೇ ಆದ ಪ್ರಬಲ ಸಂಸ್ಕೃತಿಯಿದೆ. ಆದ್ದರಿಂದ ಅದು ಸಮರೂಪಾತ್ಮಕವಾಗಿರುತ್ತದೆ. ಸಂಸ್ಕೃತಿಯ ದೃಷ್ಟಿಯಿಂದ, ಪೂರ್ಣವಾಗಿಲ್ಲದಿದ್ದರೂ, ಹೆಚ್ಚಾಗಿ ಜಾಗತೀಕರಣವೆಂದರೆ ಜಾಗತಿಕ ಮಟ್ಟದಲ್ಲಿ ಬಿಗ್‌ಮ್ಯಾಕ್‌ನಿಂದ ಮಿಕ್ಕಿಮೌಸ್‌ವರೆಗೆ ಅಮೆರಿಕತ್ವದ ಹರಹು ಇರುವುದು ಸತ್ಯ,'' ಎಂದಿದ್ದಾನೆ.

ಅಮೆರಿಕಾದ ಕಾಫಿ ಹೌಸ್ ಸರಣಿಯ ಸ್ಟಾರ್‌ಬಕ್ಸ್ (ಅದರ ಪ್ರಸ್ತುತ ಅವತಾರ ಬ್ಯಾರಿಸ್ಟ) ತನ್ನ ಎಸ್ಪ್ರೆಸ್ಸೋ ಕಾಫಿ ಹಾಗೂ ಆಹಾರ ಪದಾರ್ಥಗಳನ್ನು ಹೆಚ್ಚಿನ ಸಂಖ್ಯೆಯ ದೇಶಗಳಿಗೆ ಮಾರುತ್ತಿದೆ. ಹೀಗೆ, ಅದು ಅಮೆರಿಕಾದ ಆಹಾರ ಪದ್ಧತಿಯನ್ನು ಹರಡುತ್ತಿದೆ. ಬಹುಶಃ ಮಾನವನ ಇತಿಹಾಸದಲ್ಲೇ ಪ್ರಥಮ ಬಾರಿಗೆ ಸಮಾಜದ ಪ್ರತಿ ಸ್ತರದಲ್ಲೂ ಪ್ರತಿಯೊಬ್ಬನೂ ಪ್ರಜ್ಞಾಪೂರ್ವಕವಾಗಿ ಅಥವಾ ಅಪ್ರಜ್ಞಾಪೂರ್ವಕವಾಗಿ ಅಮೆರಿಕಾದ ಸಂಸ್ಕೃತಿಯ ಪ್ರಭಾವವನ್ನು ಅನುಭವಿಸುತ್ತಿದ್ದಾನೆ. ಅವನು ಅದನ್ನು ಮಾಧ್ಯಮದಲ್ಲಿ ಕಂಡುಕೊಳ್ಳುತ್ತಾನೆ. ತಿನ್ನುವ ಆಹಾರದಲ್ಲಿ ರುಚಿ ನೋಡುತ್ತಾನೆ, ಕೊಳ್ಳುವ ಸಾಮಗ್ರಿಗಳಲ್ಲಿ ಗ್ರಹಿಸುತ್ತಾನೆ. ಅದೇ ಸಮಯದಲ್ಲಿ ಅವು ಪರಂಪರಾನುಗತ ಸಂಸ್ಕೃತಿ ಹಾಗೂ ವ್ಯಕ್ತಿತ್ವಕ್ಕೆ ಅಪಾಯಕಾರಿ ಎಂದು ಅರಿತು ಭಯ ಹಾಗೂ ಕ್ರೋಧಗಳಿಗೆ ತುತ್ತಾಗುತ್ತಾನೆ.

ಇನ್ನೊಬ್ಬ ವಿಶೇಷಜ್ಞ ಫ್ರಾನ್ಸಿಸ್ ಫುಕುಯಾಮ ಎಂಬುವನ ಪ್ರಕಾರ ಜಾಗತೀಕರಣ ಅಮೆರಿಕೀಕರಣದ ಯುಫಿಮಿಸಮ್. ಆದ್ದರಿಂದ ಅದನ್ನು ಕೆಲವರು ಇಷ್ಟಪಡುವುದಿಲ್ಲ. ಇಂದು, ಪ್ರಪಂಚದಲ್ಲಿ ಅಮೆರಿಕಾ ಅತ್ಯಂತ ಮುಂದುವರೆದ ಬಂಡವಾಳಶಾಹಿ ರಾಷ್ಟ್ರ. ಅದರ ಸಂಸ್ಥೆಗಳು ಮಾರುಕಟ್ಟೆ ಶಕ್ತಿಗಳ ಅಭಿವೃದ್ಧಿಯನ್ನು ಪ್ರತಿನಿಧಿಸುತ್ತವೆ. ಜಾಗತೀಕರಣದ ಚಾಲನೆಗೆ ಮಾರುಕಟ್ಟೆ ಶಕ್ತಿಗಳು ಪ್ರೇರಕವಾಗಿದ್ದರೆ, ಜಾಗತೀಕರಣದ ಜೊತೆಗೂಡುವುದು ಅಮೆರಿಕೀಕರಣಕ್ಕೆ ಅನಿವಾರ್ಯ.

ಮತ್ತೊಬ್ಬ ತಜ್ಞ ಮಾಲ್ಕಮ್ ವಾಟರ್ಸ್ ಸಹ ಇದೇ ಜಾಡಿನಲ್ಲಿ ತನ್ನ ಅಭಿಪ್ರಾಯವನ್ನು ಮಂಡಿಸುತ್ತಾನೆ. ಜನರು ಜಾಗತೀಕರಣದ ಪ್ರಕ್ರಿಯೆಯನ್ನು ಈ ರೀತಿ ಅರ್ಥೈಸಿದರೆ ತಪ್ಪಿಲ್ಲ. ಏಕೆಂದರೆ ಮಾನವ ನಿಯಂತ್ರಣವನ್ನು ಮೀರಿ ಜಗತ್ತನ್ನು ಬದಲಿಸುತ್ತಿರುವ ಶಕ್ತಿಗಳು ಇವೇ ಎಂದು ಗ್ರಹಿಸುವ ಜಾಗತೀಕರಣ ಅದರ ಹಿಂದಿನ ಹಾಗೂ ಸಂಬಂಧಿತ ಪರಿಕಲ್ಪನೆಯಾದ ನವೀನೀಕರಣದಂತೆ ಪಾಶ್ಚಿಮಾತ್ಯ ಸಂಸ್ಕೃತಿ ಹಾಗೂ ಬಂಡವಾಳಶಾಹಿ ಸಮಾಜದ ವಿಸ್ತರಣೆಯನ್ನು ಸಮರ್ಥಿಸುತ್ತದೆ. ಅವನ ಪ್ರಕಾರ ಜಾಗತೀಕರಣ ವಿಶ್ವದಾದ್ಯಂತ

ಮ. ಶ್ರೀ. ಮುರಳಿಕೃಷ್ಣ

**ಜಾಗತೀಕರಣದ ಪ್ರಭಾವ ಸಂಸ್ಕೃತಿಯ ಎಲ್ಲಾ ಪ್ರಕಾರಗಳ ಮೇಲೆ ವ್ಯತಿರಿಕ್ತವಾಗಿ ಆಗುತ್ತಿರುವುದನ್ನು ಕಾಣಬಹುದು. ನಮ್ಮ ರಾಷ್ಟ್ರದ ದೇಸಿ ಸಂಸ್ಕೃತಿ ಅನೇಕ ಶತಮಾನಗಳಿಂದ ರೂಪಿತವಾಗಿದೆ. ಅದು ಸಾಮಾನ್ಯ ಜನರ ಸಂಸ್ಕೃತಿ ಆಗಿರುವುದೂ ಹೌದು. ನಮ್ಮ ಶ್ರೀಮಂತ ಸಾಂಸ್ಕೃತಿಕ ಪರಂಪರೆಗೆ ಇದರ ಕೊಡುಗೆಗಳು ಅಪಾರ ಹಾಗೂ ಅಪೂರ್ವ. ಇದು ಜನರ ಬಾಳುಗಳನ್ನು ಬೆಸೆದಿರುವ ಐಕ್ಯತಾ ಸಾಧನ. ಪ್ರಸ್ತುತ ಇದರ ಅನನ್ಯತೆಗೆ ಒದಗಿದೆ ಕುತ್ತು.**

ಹಬ್ಬಿರುವ ಐರೋಪ್ಯ ಸಂಸ್ಕೃತಿಯ ನೇರ ಪರಿಣಾಮ.

ಸಂವಹನ ವಿಶೇಷಜ್ಞ ಡೆನ್ನಿಸ್ ಮೆಖ್ವೆಲ್ ಸಹ ಜಾಗತೀಕರಣವನ್ನು ಪಾಶ್ಚಿಮಾತ್ಯೀಕರಣಕ್ಕೆ ಸ್ಥೂಲವಾಗಿ ಹಾಗೂ ಅಮೆರಿಕೀಕರಣಕ್ಕೆ ನಿರ್ದಿಷ್ಟವಾಗಿ ಸಮೀಕರಿಸುತ್ತಾನೆ. ''ಅಭಿವೃದ್ಧಿ ಹೊಂದಿದ ಅಥವಾ ಬಂಡವಾಳಶಾಹಿ ಪಾಶ್ಚಿಮಾತ್ಯ ವಿಶ್ವದಿಂದ (ಮುಖ್ಯವಾಗಿ ಅಮೆರಿಕಾ) ಕಡಿಮೆ ಅಭಿವೃದ್ಧಿ ಹೊಂದಿದ ವಿಶ್ವಕ್ಕೆ ಸಮೂಹ ಮಾಧ್ಯಮಗಳಿಂದ ಹರಿದುಬರುವ ಮಾಹಿತಿ ಅತ್ಯಂತ ಏರುಪೇರು ಹಾಗೂ ಅಸಮತೆಯಿಂದ ಕೂಡಿರುತ್ತದೆ. ಅದು ಮುಖ್ಯವಾಗಿ ಪಾಶ್ಚಿಮಾತ್ಯ ಮೌಲ್ಯಗಳಾದ ವೈಯಕ್ತಿಕತೆ, ಜಾತ್ಯತೀತತೆ ಹಾಗೂ ಸರಕು ಸಂಸ್ಕೃತಿಯನ್ನು ವಿಶ್ವಾದ್ಯಂತ ಸಾರುತ್ತದೆ. ವಿಶ್ವದ ಸಂಸ್ಕೃತಿ ಎಂದರೆ ಪಾಶ್ಚಿಮಾತ್ಯ ಸಂಸ್ಕೃತಿ ಅಥವಾ ಅಮೆರಿಕಾದ ಸಂಸ್ಕೃತಿಯೇ ಆಗಿದೆ. ಟ್ರಾನ್ಸ್ ನ್ಯಾಷನಲ್ ಮಾಧ್ಯಮಗಳ ಪ್ರಭಾವಗಳ ದಿಶೆ ಯಾವಾಗಲೂ ಶ್ರೀಮಂತ, ದೊಡ್ಡ ರಾಷ್ಟ್ರಗಳಿಂದ ಬಡ ಹಾಗೂ ಸಣ್ಣ ರಾಷ್ಟ್ರಗಳತ್ತ ಇರುತ್ತದೆ. ಇದು ಜಾಗತಿಕ ಆರ್ಥಿಕ ಸಂಬಂಧಗಳ ಅಸಮ ರಚನೆಯ ದ್ಯೋತಕ. ಸಾಂಸ್ಕೃತಿಕ ಸಾಮ್ರಾಜ್ಯಶಾಹಿಯ ಪರಿಕಲ್ಪನೆಯಲ್ಲಿ ಅಸಮ ಅಂತರರಾಷ್ಟ್ರೀಯ ಪ್ರಕ್ರಿಯೆಗಳಿರುತ್ತವೆ. ಅವುಗಳಲ್ಲಿ ಆಕ್ರಮಣ, ದಮನ ಹಾಗೂ ಬಲಾತ್ಕಾರಗಳ ಹಲವು ಹಂತಗಳಿರುತ್ತವೆ. ಈ ಅಸಮ ಮಾಹಿತಿಯ ಹರವು ದೊಡ್ಡ ಹಾಗೂ ಶ್ರೀಮಂತ ದೇಶಗಳ ಜಾಗತಿಕ ಶಕ್ತಿಯನ್ನು ವೃದ್ಧಿಸಿ, ಸ್ವೀಕರಿಸುವ ದೇಶಗಳ ರಾಷ್ಟ್ರೀಯ ವ್ಯಕ್ತಿತ್ವವನ್ನು ಕುಗ್ಗಿಸುತ್ತದೆ. ಜಾಗತಿಕ ಸಾಂಸ್ಕೃತಿಕ ಉತ್ಪಾದನೆಯ ಈ ಅಸಮತೆ ಸಾಂಸ್ಕೃತಿಕ ಸ್ವಾಯತ್ತತೆಯನ್ನು ನಿಶ್ಶಕ್ತಗೊಳಿಸಿ ಪ್ರತಿಕೂಲ ಸಂಸ್ಕೃತಿಗಳ ಅಭಿವೃದ್ಧಿಯನ್ನು ತಡೆ ಹಿಡಿಯುತ್ತದೆ. ಈ ರೀತಿಯ ಸಾಂಸ್ಕೃತಿಕ ಯಾಜಮಾನ್ಯತೆ ಅಪರಿಮಿತ, ದುರಾಕ್ರಮಣ ಮಾದರಿಯ ಪ್ರಾಬಲ್ಯಯುತ ಸಂಸ್ಕೃತಿಗೆ ಎಡೆಮಾಡಿ ಕೊಡುತ್ತದೆ. ಇದಕ್ಕೂ ಹಾಗೂ ಬಡದೇಶಗಳ ಬಹಳಷ್ಟು ಜನರ ನೈಜ ಅನುಭವಕ್ಕೂ ನಿರ್ದಿಷ್ಟ ಸಂಬಂಧವಿರುವುದಿಲ್ಲ. ಪ್ರತಿಕೂಲ ಪರಿಸ್ಥಿತಿಯಲ್ಲಿ ಇರುವ ಸಂಸ್ಕೃತಿಗಳಿಗೆ ಆಗುವ ಅನಾಹುತಗಳು ಅನೇಕ.''

ಈ ರೀತಿಯ ಸಾಂಸ್ಕೃತಿಕ ಯಾಜಮಾನ್ಯತೆ ಭಾರತದಂತಹ ಅಭಿವೃದ್ಧಿಶೀಲ ದೇಶದಲ್ಲಿ ಸ್ಥೂಲವಾಗಿ ವಿದೇಶಿ ಹಾಗೂ ಪ್ರತ್ಯೇಕವಾಗಿ ಐರೋಪ್ಯ ಹಾಗೂ ಅಮೆರಿಕಾದ ಸಾಮಗ್ರಿಗಳಿಗೆ ಹೆಚ್ಚಿನ ಬೇಡಿಕೆ ಸೃಷ್ಟಿಸುತ್ತಿದೆ. ಪಾಶ್ಚಿಮಾತ್ಯ ಬ್ರಾಂಡ್‌ಗಳುಳ್ಳ ವಸ್ತುಗಳ ಬಗ್ಗೆ ವ್ಯಾಮೋಹ ಹೆಚ್ಚಾಗುತ್ತಿರುವುದು ಸತ್ಯ. ಒಂದು ರೀತಿಯ ಗ್ರಾಹಕ ಮನಃಸ್ಥಿತಿಯ ನಿರ್ಮಾಣಕ್ಕೆ ಪೂರಕವಾಗಿ ಬೆಳವಣಿಗೆಗಳಾಗುತ್ತಿವೆ. ಜನರು ಅಮೆರಿಕದ ಬಳಕೆಯ ಮಾದರಿಯನ್ನು ಅನುಸರಿಸಲು ಯತ್ನಿಸುತ್ತಿದ್ದಾರೆ. ಇದು ಉಳಿತಾಯ ಮನೋಭಾವಕ್ಕೆ ಹಾಗೂ ಬಂಡವಾಳದ ಜಮಾವಣೆಗೆ ಮಾರಕ.

ಬಹುರಾಷ್ಟ್ರೀಯ ಕಂಪನಿಗಳ ಪ್ರಮುಖ ಉದ್ದೇಶ ಅಪರಿಮಿತ ಲಾಭ ಗಳಿಸುವುದು. ಈ ದಿಶೆಯಲ್ಲಿ ಮಾರಾಟಗಳನ್ನು ಜಾಸ್ತಿ ಮಾಡಲು ಅವು ಹೆಚ್ಚಿನ ಜಾಹೀರಾತುಗಳ ಪ್ರಚಾರಾಂದೋಳನಗಳಿಗೆ ಮೊರೆ ಹೋಗುತ್ತವೆ. ಜಾಹೀರಾತುಗಳ ಪಾತ್ರದಲ್ಲಿ ದೊಡ್ಡ ಬದಲಾವಣೆಗಳಾಗಿವೆ. ವಸ್ತುವಿನ ವಿಶೇಷತೆಯ ಬಗ್ಗೆ



**ರಾಜಕಾರಣಿ**

ಯಾರೋ ಉತ್ತಿದ ನೆಲಕೆ
ಜಾತಿ ಬೀಜವ ಬಿತ್ತಿ
ಭ್ರಷ್ಟ ನೀರನ್ನು ಕಟ್ಟಿ
ರಕ್ತಸಿಕ್ತ ಮಣ್ಣಲ್ಲಿ
ಬೆಳೆ ತೆಗೆದು ಆನಂದಿಸುವರು

**ಶಾಂತಕುಮಾರ್ ಪೂಜಾರ್**
ಶೇಷಾದ್ರಿಪುರಂ, ಬೆಂಗಳೂರು - ೫೬೦ ೦೨೦

ಅರಿತುಕೊಳ್ಳುವುದೇ ಜಾಹೀರಾತುಗಳ ಮುಖ್ಯ ಧ್ಯೇಯ. ಇದು ಮೂಲೆಗುಂಪಾಗಿ ವಸ್ತುವನ್ನು ಬಳಸುವುದರಿಂದ ಸಮಾಜದಲ್ಲಿ ಗ್ರಾಹಕನ ಸ್ಥಾನಮಾನ ವೃದ್ಧಿಸುತ್ತದೆ ಎಂಬುದರ ಬಗ್ಗೆ ಒತ್ತು ನೀಡಿ, ಅದರ ಬಳಕೆಯನ್ನು ಹೆಚ್ಚಿಸುವುದೇ ಇಂದಿನ ಜಾಹೀರಾತುಗಳ ವೈಖರಿ. ಗ್ರಾಹಕರನ್ನು ಆಕರ್ಷಿಸಲು ಹಾಗೂ ಅವರ ಮೇಲೆ ಪ್ರಭಾವ ಬೀರಲು ಫ್ಯಾಶನ್ ಷೋಗಳು, ಸೌಂದರ್ಯ ಸ್ಪರ್ಧೆಗಳು, ಹೆಸರುವಾಸಿ ರೂಪದರ್ಶಿಗಳು, ಕ್ರೀಡಾಪಟುಗಳು, ಖ್ಯಾತ ನಟ-ನಟಿಯರನ್ನು ಬಳಸಲಾಗುತ್ತಿದೆ. ಮುದ್ರಣ ಹಾಗೂ ವಿದ್ಯುನ್ಮಾನ ಮಾಧ್ಯಮಗಳ ವ್ಯಾಪ್ತಿ ಹೆಚ್ಚಾಗಿರುವುದರಿಂದ ಕೊಳ್ಳುವವರಿಗೆ ಮೋಡಿ ಹಾಕುವ ಜಾಹೀರಾತುಗಳ ಶಕ್ತಿ ಅಗಾಧ. ಜನರ ಆಸೆಗಳನ್ನು ಬೇಡಿಕೆಗಳನ್ನಾಗಿ ಪರಿವರ್ತಿಸಲು ಸುಲಭವಾಗಿ ಸಿಗುವ ಸಾಲಗಳು, ಆಕರ್ಷಕ ಯೋಜನೆಗಳು ಹಾಗೂ ಕ್ರೆಡಿಟ್ ಕಾರ್ಡ್ ಸೌಲಭ್ಯಗಳ ಪಾತ್ರ ಗಮನೀಯವಾದುದು. ಈ ರೀತಿಯ ಬಳಕೆ ಒಬ್ಬರ ವ್ಯಕ್ತಿತ್ವ ಹಾಗೂ ಸ್ವಯಂ ಅಭಿವ್ಯಕ್ತಿಯನ್ನು ಎತ್ತಿ ತೋರಿಸುತ್ತದೆ ಎಂದು ಅಬ್ಬರದ ಪ್ರಚಾರ ಮಾಡಲಾಗುತ್ತದೆ.

ಕಾರ್ಪೊರೇಷನ್‌ಗಳು ಲಾಭ ಗಳಿಸಲು ಹಾಗೂ ಅವರ ಮಾರುಕಟ್ಟೆಗಳನ್ನು ವಿಸ್ತರಿಸಲು ಧರ್ಮ ಹಾಗೂ ಮತಗಳ ಬಳಕೆಯಾಗುತ್ತಿರುವುದು ಗಮನಾರ್ಹ. ಈ ಉದ್ದೇಶ ಈಡೇರಲು ಹಬ್ಬ, ಹರಿದಿನಗಳು ಸೂಕ್ತವಾದ ಸಾಧನಗಳಾಗಿವೆ. ದೇವ, ದೇವಿಯರ ಹೆಸರಿನಲ್ಲಿ ಭಾರಿ ರಿಯಾಯಿತಿಗಳನ್ನು ಘೋಷಿಸುತ್ತಿದ್ದಾರೆ. ಇವರೂ ಈ ಕಂಪನಿಗಳ ಉತ್ಪನ್ನಗಳ ಗ್ರಾಹಕರೆಂದು ಬಿಂಬಿಸಲಾಗುತ್ತಿದೆ. ಹಿಂದೆ, ಆತ್ಮಕ್ಕೆ ಸಂಬಂಧಿಸಿದ ವಿಷಯಗಳು ಅಷ್ಟಾಗಿ ಸೆಳೆಯುವ ಶಕ್ತಿಯಾಗಿರಲಿಲ್ಲ. ಆದರೆ ಕಾರ್ಪೊರೇಟ್ ಬಂಡವಾಳಶಾಹಿಯ ಲೋಕದಲ್ಲಿ ಈ ವಿಷಯಗಳಿಗೆ ಒಂದು ಬಗೆಯ ಜಾತ್ಯತೀತ ಮುಸುಕನ್ನು ಹಾಕಲಾಗಿದೆ. ನವ್ಯೋತ್ತರ ಬಂಡವಾಳಶಾಹಿ ವ್ಯವಸ್ಥೆ ವಿಭಿನ್ನ ವಿಚಾರಧಾರೆಗಳನ್ನು ತನ್ನದಾಗಿಸಿಕೊಂಡು ಧರ್ಮ ಹಾಗೂ ಮತಗಳನ್ನು ತನ್ನ ಗುರಿಗಳನ್ನಾಗಿ ಉಪಯೋಗಿಸುತ್ತಿರುವ ಬೆಳವಣಿಗೆಯನ್ನು ಕಾಣುತ್ತಿದ್ದೇವೆ.

ಕಾರ್ಪೊರೇಷನ್‌ಗಳ ಮಾರುಕಟ್ಟೆ ಹಾಗೂ ಜನರ ಆಧ್ಯಾತ್ಮಿಕ ಅಗತ್ಯಗಳನ್ನು ಗಮನದಲ್ಲಿರಿಸಿಕೊಂಡು ಹೊಸ ಟಿ.ವಿ. ಚಾನೆಲ್‌ಗಳೂ ಅಸ್ತಿತ್ವಕ್ಕೆ ಬಂದಿವೆ. ಅತಿಮಾನವ ಶಕ್ತಿಯಿದೆಯೆಂದು ಸಾರುವ ಬಾಬಾ, ಸ್ವಾಮಿಗಳ ಉಪನ್ಯಾಸಗಳು ಕಾರ್ಪೊರೇಷನ್‌ಗಳ ಗುರಿಸಾಧನೆಯ ಅಸ್ತ್ರಗಳಾಗಿವೆ. ಈ ನಿಟ್ಟಿನಲ್ಲಿ ನಮ್ಮ ರಾಷ್ಟ್ರದಲ್ಲಿ ಸಾಹಿತ್ಯವೂ ಒಂದು ಸಾಧನವಾಗಿದೆ. ಇಂದಿನ ಅಧ್ಯಾತ್ಮದ್ದು ವಾಣಿಜ್ಯ ಜಯಭೇರಿ ಎನ್ನಬಹುದು. ಟಿ.ವಿ. ಚಾನೆಲ್‌ಗಳು, ಆಡಿಯೊ, ವಿಡಿಯೊ ಕ್ಯಾಸೆಟ್ಟುಗಳು, ಇಂಟರ್‌ನೆಟ್ ಮುಂತಾದವು ಇದರ ವಾಹಕಗಳಾಗಿವೆ. ಜಾತಕಗಳನ್ನು ತಯಾರಿಸಲು ಕಂಪ್ಯೂಟರ್‌ಗಳಿವೆ. ಇವುಗಳಲ್ಲಿ ನ್ಯೂನತೆಗಳೇ ಇರುವುದಿಲ್ಲ ಎಂಬ ಪ್ರಚಾರ ಬೇರೆ! ಮುಗ್ಧ ಜನರು ಬಲಿಪಶುಗಳಾಗಲು ಇನ್ನೇನು ಬೇಕು? ಕೃತ್ರಿಮ ವಿಜ್ಞಾನವನ್ನು ಪ್ರಚಾರ ಮಾಡಲು ಹಾಗೂ ಮೂಢ ನಂಬಿಕೆಗಳನ್ನು ಸ್ಥಿರೀಕರಿಸಲು ನವೀನ ಮಾಹಿತಿ ತಂತ್ರಜ್ಞಾನದ ಆವಿಷ್ಕಾರಗಳು ಸಹಕಾರಿಯಾಗಿರುವುದು ಇತ್ಯಾತ್ಮಕ ಬೆಳವಣಿಗೆಯಲ್ಲ.

ಜಾಗತೀಕರಣದ ಪ್ರಭಾವ ಸಂಸ್ಕೃತಿಯ ಎಲ್ಲಾ ಪ್ರಕಾರಗಳ ಮೇಲೆ ವ್ಯತಿರಿಕ್ತವಾಗಿ ಆಗುತ್ತಿರುವುದನ್ನು ಕಾಣಬಹುದು. ನಮ್ಮ ರಾಷ್ಟ್ರದ ದೇಸಿ ಸಂಸ್ಕೃತಿ ಅನೇಕ ಶತಮಾನಗಳಿಂದ ರೂಪಿತವಾಗಿದೆ. ಅದು ಸಾಮಾನ್ಯ ಜನರ ಸಂಸ್ಕೃತಿ ಆಗಿರುವುದೂ ಹೌದು. ನಮ್ಮ ಶ್ರೀಮಂತ ಸಾಂಸ್ಕೃತಿಕ ಪರಂಪರೆಗೆ ಇದರ ಕೊಡುಗೆಗಳು ಅಪಾರ ಹಾಗೂ ಅಪೂರ್ವ. ಇದು ಜನರ ಬಾಳುಗಳನ್ನು ಬೆಸೆದಿರುವ ಐಕ್ಯತಾ ಸಾಧನ. ಪ್ರಸ್ತುತ ಇದರ ಅನನ್ಯತೆಗೆ ಒದಗಿದೆ ಕುತ್ತು. ಈ ಸಂಸ್ಕೃತಿಯನ್ನು ಜತನ ಮಾಡುವುದು ಇಂದಿನ ತುರ್ತು ಅವಶ್ಯಕತೆಯಾಗಿದೆ. ಜಾಗತೀಕರಣವನ್ನು ಕೇವಲ ದೂಷಿಸುವುದರಿಂದ ಏನೂ ಫಲ ಸಿಗುವುದಿಲ್ಲ. ಕ್ರಿಯಾತ್ಮಕವಾಗಿ ಅದನ್ನು ಎದುರಿಸಬೇಕಾಗಿರುವುದು ಅನಿವಾರ್ಯ.

ಈ ಸಂಸ್ಕೃತಿಯ ಸಂರಕ್ಷಣೆಯ ಸೂತ್ರಗಳಿರುವುದು ಜನರ ಕೈಯಲ್ಲಿ. ಜಾಗತೀಕರಣ ಒಡ್ಡಿರುವ ಸಮಸ್ಯೆ, ಸವಾಲುಗಳಿಗೆ ಜನರ ಜೀವನ ವಿಧಾನಗಳಿಂದಲೇ ಪರಿಹಾರ, ಮಾರ್ಗೋಪಾಯಗಳು ದೊರಕಬೇಕು. ಹಾಗಾದಾಗ ಮಾತ್ರ, ಜಾಗತೀಕರಣದ ಸಂಸ್ಕೃತಿಯ ಮೇಲಿನ ಪ್ರಹಾರಗಳಿಗೆ ಸಮರ್ಥ ಪ್ರತಿರೋಧ ಒಡ್ಡಲು ಸಾಧ್ಯ.

ಮ. ಶ್ರೀ. ಮುರಳಿಕೃಷ್ಣ
ನಂ.೮೮೩/೧೦೧೬ (ಔಟ್‌ಹೌಸ್), ೧ನೇ 'ಇ' ಮುಖ್ಯರಸ್ತೆ
ಗಿರಿನಗರ ೨ನೇ ಹಂತ, ಬೆಂಗಳೂರು - ೫೬೦ ೦೮೫

‘ಪಾಯಾಸಿ ರಾಜ ಸುತ್ತ’ ದೀಘನಿಕಾಯದ ಎರಡನೇ ಸಂಪುಟದ ಕೊನೆಯ ಕತೆ, ಬೆಂಗಳೂರಿನ ಬುದ್ಧ ವಚನ ಟ್ರಸ್ಟಿನವರು (೧೯೮೩) ಪ್ರಕಟಿಸಿರುವ ಗ್ರಂಥದಲ್ಲಿ ಪಾಯಾಸಿ ಎಂಬ ರಾಜ ಬುದ್ಧನ ಶಿಷ್ಯ ಕಸ್ಸಪನ ಜತೆ ಸಂವಾದ ಮಾಡಿದ ಪ್ರಸಂಗ ಇದರಲ್ಲಿದೆ. ಪ್ರಸ್ತಾವನೆಯಲ್ಲಿ ಪಾಯಾಸಿ ‘ಆ ಕಾಲದ ಒಬ್ಬ ಪ್ರಮುಖ ಭೌತವಾದಿ ಅಥವಾ ಚಾರ್ವಾಕನಾಗಿದ್ದ’ (XLV). ಹಲವಾರು ಬ್ರಾಹ್ಮಣರು ಈತನ ವಾದವನ್ನು ಬಹುಶಃ ಒಪ್ಪಿಕೊಂಡಿದ್ದರು (XLVI). ಈತ ‘ಪ್ರಾಯಶಃ ಕ್ಷತ್ರಿಯ, ಅಪ್ಪಟ ಭೌತವಾದಿ’ (ಅದೇ). ಇವನ ಪ್ರಶ್ನೆಗಳನ್ನು ‘ಪರಿಶೀಲಿಸಿದರೆ ಅವನು ಪ್ರಯೋಗಶೀಲನಾದ ಒಬ್ಬ ವಿಜ್ಞಾನಿಯಂತೆ ತೋರುತ್ತಾನೆ. ಪ್ರಾಯಶಃ ಒಂದು ಬಗೆಯ ವೈಜ್ಞಾನಿಕ ಪ್ರಯೋಗಗಳು ಅವನ ನಗರದಲ್ಲಿ ನಡೆಯುತ್ತಿದ್ದವು’ (XLVII). ‘ಭಗವಾನರ ಕಾಲದ ಸಾಮಾನ್ಯ ಜನರು ಅಡಿಗಡಿಗೆ ಕೇಳುತ್ತಿದ್ದ ಪ್ರಶ್ನೆಗಳೇ ಪಾಯಾಸಿ ರಾಜನ ಬಾಯಿಂದ ಬಂದವು’ (XLVIII) ಎಂಬ ವಿಚಾರಗಳಿವೆ.

ಈ ಎಲ್ಲ ಸಂಗತಿಗಳು ‘ಲೋಕಾಯತ’ ತತ್ವಜ್ಞಾನಕ್ಕೆ ಸಂಬಂಧಿಸಿವೆ. ದೇವಿಪ್ರಸಾದ ಚಟ್ಟೋಪಾಧ್ಯಾಯರು ಲೋಕಾಯತ, ‘ಜನರಲ್ಲಿ ಪ್ರಚಾರದಲ್ಲಿದ್ದ ಭೌತವಾದಿ ತತ್ವಜ್ಞಾನ’ವಾಗಿತ್ತೆಂಬುದನ್ನು ಸಾಧಾರವಾಗಿ ಮತ್ತು ಸುದೀರ್ಘವಾಗಿ ವಿವೇಚಿಸಿದ್ದಾರೆ. (ನೋಡಿ ‘ಲೋಕಾಯತ’). ‘ದೀಘನಿಕಾಯ’ದ (ಸಂಪುಟ ೧) ‘ಕೂಟದಂತಸುತ್ತ’

ಲೋಕಾಯತ ಜ್ಞಾನದ ಬಗ್ಗೆ ನಮಗೆ ಸಂಶಯ ಹುಟ್ಟುತ್ತದೆ. ಹಾಗಾಗಿ ಅವನನ್ನು ಜನರಲ್ಲಿರುವ ಭೌತವಾದಿ ಗ್ರಹಿಕೆಗಳ ತಾತ್ಕಾಲಿಕ ಮತ್ತು ಕೃತಕ ಪ್ರತಿನಿಧಿಯನ್ನಾಗಿ ಮಾತ್ರ ಪರಿಗಣಿಸಬಹುದು.

ಕೋಸಲದ ಪಸೇನದಿಯಿಂದ ಸೇತಬ್ಯ ಎಂಬ ಪಟ್ಟಣ ಪಾಯಾಸಿಗೆ ದಾನವಾಗಿ ಬಂದಿತ್ತು. ಆ ನಾಡು ‘ಜಲ, ವನ, ಧಾನ್ಯ, ಹುಲ್ಲುಗಾವಲಿನಿಂದ ಸಮೃದ್ಧವಾಗಿತ್ತು.’ ಈ ಮಾತು ಗಮನಾರ್ಹವೇಕೆಂದರೆ ಕೊನೆಯಲ್ಲಿ ವಿವೇಚನೆಯಿಲ್ಲದೇ ದಾನದ ಕಾರಣಕ್ಕಾಗಿಯೇ ಈ ಅರಸ ಚತುರ್ಮಹಾರಾಜ ದೇವತೆಗಳ ಜೊತೆಗಾರನಾಗಿ ಹುಟ್ಟಬೇಕಾಗುತ್ತದೆ. ಪ್ರತಿಯಾಗಿ ಶುದ್ಧ ಮನಸ್ಸಿನಿಂದ ಒಳ್ಳೆಯ ದಾನ ಮಾಡಿದ ‘ಉತ್ತರ’ನೆಂಬ ಯುವಕ ತಾವಿತಂಸ ದೇವತೆಗಳ ಸಹವಾಸಿಯಾಗಿ ಹುಟ್ಟುತ್ತಾನೆ. ಬೇಡವಾದುದನ್ನು ಬಿಸಾಡುವಂತೆ ‘ದಾನ’ ಮಾಡಬಾರದು ಎಂಬ ನೀತಿಯನ್ನು ಹೇಳುವ ಉದ್ದೇಶ ಈ ಕತೆಗೆ ಇದೆ ಎಂಬ ಭಾವನೆ ಓದುಗರಿಗೆ ಉಂಟಾಗುವಂತಿದೆ. ಆದರೆ ನಮಗೆ ಮುಖ್ಯವಾಗುವುದು ಬೌದ್ಧ ನಾಸ್ತಿಕ ತತ್ವ ಮತ್ತು ಲೋಕಾಯತ ತತ್ವಗಳ ಜತೆಗಿದ್ದ ಸಂಘರ್ಷದ ಕಾರಣಕ್ಕಾಗಿ.

ಕತೆ ಇದು : ೫೦೦ ಭಿಕ್ಷುಗಳ ಜತೆ ಬುದ್ಧನ ಶಿಷ್ಯ ಕಸ್ಸಪ ಸೇತಬ್ಯ ನಗರದ ಹತ್ತಿರದ ವನಕ್ಕೆ ಬಂದು ನಿಲ್ಲುತ್ತಾನೆ. ಆ ನಗರದ ಬ್ರಾಹ್ಮಣರು

# ದೀಘನಿಕಾಯದ ಒಂದು ಕಥೆ




ಎಸ್. ಎಸ್. ಹಿರೇಮಠ

ದಲ್ಲಿ ಕೂಟದಂತ ಎಂಬ ಮಹಾಶ್ರೀಮಂತ ಬ್ರಾಹ್ಮಣ (ಈತನೂ ರಾಜನಿಂದ ಗ್ರಾಮವನ್ನು ದಾನ ಪಡೆದಿರುತ್ತಾನೆ) ‘ವೈಯ್ಯಾಕರಣಿಯೂ, ಲೋಕಾಯತ ಮಹಾಪುರುಷರ ಲಕ್ಷಣಗಳನ್ನು ತಿಳಿದಿರುವವನು’ ಎಂದು ಮೂರು ಸಲ (ಪುಟ : ೩೪೯, ೩೬೯, ೩೭೯) ಪ್ರಸ್ತಾಪವಾಗುತ್ತದೆ. ಮಹಾಯಜ್ಞವನ್ನು ಮಾಡಲಿಚ್ಛಿಸಿ ಅದರ ವಿವರಗಳನ್ನು ಕೇಳಿ ತಿಳಿಯಲು ಗೌತಮರ ಹತ್ತಿರ ಬಂದು ಈ ಬ್ರಾಹ್ಮಣ ಪರಿವರ್ತನೆ ಹೊಂದಿ ಬೌದ್ಧನಾಗುತ್ತಾನೆ.

‘ಅಂಬಟ್ಠ ಸುತ್ತ’ದಲ್ಲಿಯೂ ಪೊಕ್ಖರಸತಿ ಎಂಬ ಬ್ರಾಹ್ಮಣನ ಶಿಷ್ಯ ಅಂಬಟ್ಠ ‘ವೈಯ್ಯಾಕರಣಿಯೂ ಲೋಕಾಯತ ಮಹಾಪುರುಷರ ಲಕ್ಷಣ ತಿಳಿದವನೂ’ ಆಗಿದ್ದನೆಂದು (ಪುಟ : ೨೩೩ ಅದೇ) ಬರುತ್ತದೆ. ಬ್ರಾಹ್ಮಣರು ಲೋಕಾಯತವನ್ನು ವೇದಗಳ ಜತೆ ಅಧ್ಯಯನ ಮಾಡುತ್ತಿದ್ದಿರಬೇಕು. ಅದು ಗೌರವದ ಶಾಸ್ತ್ರವಾಗಿತ್ತು. ಲೋಕಾಯತ ಸಿದ್ಧಾಂತವನ್ನು ಪ್ರತಿಪಾದಿಸುವವರಿಗೆ ಮಹಾಪುರುಷರೆಂಬ ಘನತೆ ಲಭಿಸುತ್ತಿತ್ತು. ಅಂದರೆ ಲೋಕಾಯತ ತತ್ವಜ್ಞಾನವನ್ನು ಪ್ರತಿಪಾದಿಸುವ ಘನ ವಿದ್ವಾಂಸರಿದ್ದರು. ಬುದ್ಧನ ಕಾಲದಲ್ಲಿ ಬ್ರಾಹ್ಮಣ, ಕ್ಷತ್ರಿಯರಂಥ ಶೋಷಕ ವರ್ಗ ನಿರ್ಲಕ್ಷಿಸಲಾಗದಂತೆ ‘ಲೋಕಾಯತ’ ಪ್ರಖ್ಯಾತವಾಗಿತ್ತು.

ಪಾಯಾಸಿ ರಾಜ ಕೇಳುವ ಪ್ರಶ್ನೆಗಳಿಗೆ ಉಪಮೆಗಳ ಮೂಲಕ ಕಸ್ಸಪ ಉತ್ತರಿಸಿದರೂ ಕೂಡ ಅವು ತರ್ಕಬದ್ಧವೂ, ಸುಸಂಗತವೂ ಎನಿಸುವುದಿಲ್ಲ. ಬೌದ್ಧರ ರಚನೆಯಾದ್ದರಿಂದ ಇಲ್ಲಿ ಲೋಕಾಯತಿಕನಂತೆ ನಟಿಸುವ ಪಾಯಾಸಿ ಸೋಲಬೇಕು, ಬೌದ್ಧ ಕಸ್ಸಪ ಗೆಲ್ಲಬೇಕಷ್ಟೇ ?

ದೇವರನ್ನು ಕುರಿತು ಏನನ್ನೂ ಹೇಳದ ಬೌದ್ಧ ಮತ ಇತರರಿಂದ ‘ನಾಸ್ತಿಕ’ವೆಂದು ಕರೆಸಿಕೊಂಡರೂ, ಲೋಕಾಯತದ ದೃಷ್ಟಿಯಲ್ಲಿ ಅದು ಒಂದು ರೀತಿ ಆಸ್ತಿಕವೇ. ಪಾಪ, ಪುಣ್ಯ, ಪರಲೋಕಾದಿಗಳನ್ನು ನಂಬುವ ಮೂಲಕ ಅದು ಎಡಬಿಡಂಗಿಯಾಗಿತ್ತು. ಭೌತವಾದದೆದುರು ಅದು ‘ಅಧ್ಯಾತ್ಮವಾದ’ದ ಇನ್ನೊಂದು ಮಾದರಿಯಾಗಿತ್ತು. ‘ನಾಸ್ತಿಕ’ ಬೌದ್ಧ ಮತಕ್ಕೆ ಪಕ್ಕಾ ಭೌತವಾದಿಯೊಬ್ಬ ಮುಖಾಮುಖಿಯಾಗುವ ಮೂಲಕ, ಇಲ್ಲಿ ನಮಗೆ ‘ಲೋಕಾಯತ’ದ ಹೆಚ್ಚಿನ ತಿಳುವಳಿಕೆ ಸಾಧ್ಯವಿದೆ. ಆದರೆ ಒಂದು ಅನುಮಾನವೆಂದರೆ ‘ಜನತೆಯ ತತ್ವಜ್ಞಾನವಾಗಿದ್ದ’ ಲೋಕಾಯತವನ್ನು ಇಲ್ಲಿ ಪ್ರತಿಪಾದಿಸುತ್ತಿರುವವನು ಒಬ್ಬ ‘ರಾಜ’. ಶೋಷಿತರ ಸಿದ್ಧಾಂತವನ್ನು ಶೋಷಕನೊಬ್ಬ ಹೇಳುತ್ತ ಕೊನೆಗೆ ದಿಢೀರನೆ ಸೋತು ಕಸ್ಸಪನಿಗೆ ಶರಣಾಗುವುದರಿಂದ ಆತನ

ಗುಂಪುಗೂಡಿ ಅವನನ್ನು ಕಾಣಲು ಹೊರಡುತ್ತಾರೆ. ದಡ್ಡರಾದ ಅವರನ್ನು ಕಸ್ಸಪ ಒಲಿಸಿಕೊಳ್ಳುತ್ತಾನೆಂಬ ಆತಂಕದಿಂದ ಪಾಯಾಸಿ ತಾನೂ ಅವರ ಜತೆ ಹೊರಡುತ್ತಾನೆ. ಅವನು ಕಸ್ಸಪನಿಗೆ ‘ಪರಲೋಕವಿಲ್ಲ, ತಂದೆ ತಾಯಿಗಳಿಂದ ಹುಟ್ಟದ ಜೀವಗಳಿಲ್ಲ; ಸುಕೃತಿ, ದುಷ್ಕೃತಿಗಳು ವಿಪಾಕ ಹೊಂದುವುದಿಲ್ಲ’ ಎಂದು ಪದೇ ಪದೇ ಹೇಳುತ್ತಾನೆ. ಇದಕ್ಕೆ ಆಧಾರವಾಗಿ ಅವನು ಕೊಡುವುದು ಕಳ್ಳರ ದಂಡನೆಯ ಪ್ರಸಂಗಗಳನ್ನು. ಕೊಲ್ಲುವ, ಕಳವು ಮಾಡುವ, ಪರನಾರಿ ಸಂಗದಲ್ಲಿರುವ, ಸುಳ್ಳಾಡುವ, ಚಾಡಿ ಹೇಳುವ ಅಮಾತ್ಯರು, ನಂಟರು, ಜ್ಞಾತಿಗಳು ಮತ್ತು ಇವರಿಗೆ ತದ್ವಿರುದ್ಧವಿರುವ ಉತ್ತಮ ನಡತೆಯುಳ್ಳ ಅಮಾತ್ಯರು, ನಂಟರು, ಜ್ಞಾತಿಗಳು ಸತ್ತು ನರಕ ಇಲ್ಲವೇ ಸ್ವರ್ಗ ಸೇರಿದ್ದನ್ನು ಅವರಾರೂ ಹಿಂತಿರುಗಿ ಬಂದು ತನಗೆ ಹೇಳಿಲ್ಲವೆಂದು ಅವನ ವಾದ. ಇದಕ್ಕೆ ಉತ್ತರವಾಗಿ ಕಸ್ಸಪ ಚೋರನೊಬ್ಬನನ್ನು ಗಲ್ಲಿಗೇರಿಸುವಾಗ, ನೆಂಟರನ್ನು ನೋಡಿ ಬರುತ್ತೇನೆಂದರೆ ವಧಕರು ಕೇಳದಿರುವಂತೆ ಸತ್ತವರು ಬಂದು ನಿನಗೆ ಹೇಳಲಾರರು ಎಂಬ ತುಂಬ ದುರ್ಬಲವಾದ ಉಪಮೆಯನ್ನು ಕೊಡುತ್ತಾನೆ.

ಈ ಎರಡು ಪ್ರಸಂಗಗಳ ನಡುವಿನ ಹೋಲಿಕೆಯ ಅಸಂಬದ್ಧತೆಯನ್ನು ಬೇರೆ ವಿವರಿಸಬೇಕಿಲ್ಲ. ಇನ್ನೂ ಸಾಯದಿರುವ ಚೋರನಿಗೆ ಪರವಾನಗಿ ಸಿಕ್ಕರೆ ನೆಂಟರನ್ನು ನೋಡಿ ಬರಬಹುದು. ಆದರೆ ಹಾಗೆ ಪರಲೋಕದಿಂದ ಯಾರೂ ಬರಲು ಶಕ್ಯವಿಲ್ಲವಲ್ಲ. ಏಕೆಂದರೆ ಪರಲೋಕವೆಲ್ಲಿದೆ ? ಸ್ವರ್ಗ ಸೇರಿದವರು ಹಿಂತಿರುಗಿ ಬಂದು ಹೇಳಲಾರರು ಎಂಬುದಕ್ಕೆ ಕಸ್ಸಪ ಕೊಚ್ಚೆಯಲ್ಲಿ ಬಿದ್ದವನನ್ನು ಎತ್ತಿ ತೊಳೆದು ಸಿಂಗರಿಸಿ ಅರಮನೆಯ ಸುಖ ಒದಗಿಸಿದ ನಂತರ ಆತ ಮತ್ತೆ ಕೊಚ್ಚೆಗೆ ಬೀಳಲು ಆಶೆ ಪಡುತ್ತಾನೆಯೆ ? ಹಾಗೆ ದೇವತೆಗಳು ದುರ್ಗಂಧಯುಕ್ತ, ಅಶುಚಿಯಾದ ಮಾನವರ ಹತ್ತಿರ ಬರಲು ಮನಸ್ಸು ಮಾಡುವುದಿಲ್ಲ ಎಂದು ಹೇಳುತ್ತಾನೆ. ಇದು ಕೂಡ ಸಮಾಧಾನಕ್ಕಾಗಿ ಹೇಳಿದ ಕತೆಯೆನಿಸುತ್ತದಲ್ಲದೆ ತಕ್ಕ ಉತ್ತರವಾಗಲಾರದು. ‘ಹುಟ್ಟು ಕುರುಡನಂತಿರುವೆ’ ಎಂದು ಪಾಯಾಸಿಗೆ ತೆಗಳುವ ಕಸ್ಸಪ, ಸವಣ ಬ್ರಾಹ್ಮಣ ಸಾಧನೆ ಮಾಡಿದರೆ ದಿವ್ಯ ಚಕ್ಷು ಪಡೆದು, ಪರಲೋಕವನ್ನು ನೋಡಬಲ್ಲ ಎಂದು ನಿರೂಪಿಸುತ್ತಾನೆ. ಇದೂ ಒಂದು ಬಗೆಯ ಮೂಢ ನಂಬಿಕೆಯಷ್ಟೇ. ಸತ್ತ ಮೇಲೆ ಶ್ರೇಯಸ್ಸಾಗುತ್ತದೆ ಎನ್ನುವ ಶೀಲವಂತ ಸವಣ ಬ್ರಾಹ್ಮಣ ವಿಷ ಸೇವಿಸಿ, ನೇಣು ಹಾಕಿಕೊಂಡು ಸಾಯಬಹುದಿತ್ತು; ಆದರೆ ಪ್ರಾಣದ ಮೇಲಿನ ಆಶೆಯಿಂದ ಮತ್ತು

ಸುಖ ಪಡುವ ಬಯಕೆಯಿಂದ ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ ಎಂದು ಪಾಯಾಸಿಯ ವಾದ. ಇದಕ್ಕೆ ಕಸ್ಸಪ ಕೊಡುವ ಉಪಮೆಯುತ ಕತೆ ಆಸ್ತಿಯ ಆಶೆಗಾಗಿ ಹೊಟ್ಟೆ ಸೀಳಿಕೊಂಡು ತನ್ನ ಮಗು ಗಂಡೋ ಹೆಣ್ಣೋ ಎಂದು ನೋಡುವ ಗರ್ಭಿಣಿಯದು. ಸವಣ ಬ್ರಾಹ್ಮಣರು ಎಷ್ಟು ದೀರ್ಘ ಕಾಲ ಬಾಳುವರೋ ಅಷ್ಟು ವಿಧದ ಪುಣ್ಯ ಮಾಡುತ್ತಾರೆಂದು ಸಮಜಾಯಿಷಿ ಕೊಡುತ್ತಾನೆ ಕಸ್ಸಪ.

ಕಳ್ಳನೊಬ್ಬನನ್ನು ಗುಡಾಣದಲ್ಲಿ ಹಾಕಿ ಚರ್ಮ ಮತ್ತು ಜೇಡಿಮಣ್ಣುಗಳಿಂದ ಬಾಯಿ ಮುಚ್ಚಿ ಬೆಂಕಿ ಹಚ್ಚಿದಾಗ ಅವನ ಜೀವ ಎಲ್ಲಿ, ಹೇಗೆ ಹೋಗುತ್ತದೆ? ನೋಡಿಯೇ ಇಲ್ಲವಲ್ಲ ಎಂಬುದು ಪಾಯಾಸಿಯ ಪ್ರಶ್ನೆ. ಇಂಥದೇ ಹಲವಾರು ಪ್ರಶ್ನೆಗಳನ್ನು ಕೇಳುತ್ತಾನೆ ಆತ. ಚೋರನ ಹೊರ ಮತ್ತು ಒಳ ಚರ್ಮಗಳನ್ನು ಸುಲಿದು ನೋಡಿದರೂ ಜೀವ ಎಲ್ಲಿಯೂ ಕಾಣಿಸಲಾರದು, ಪ್ರಾಣ ಹೊರಟುಹೋಗುವುದು ಕಂಡುಬರಲಾರದು ಇತ್ಯಾದಿ. ಇದಕ್ಕೆ ಪ್ರತಿಯಾಗಿ ಶಂಖ ಮತ್ತು ಅಗ್ನಿಹೋತ್ರಿಯ ಕತೆಗಳನ್ನು ಹೇಳುತ್ತಾನೆ ಕಸ್ಸಪ.

ನೀನು ಏನೇ ಹೇಳಿದರೂ ಈ 'ಪಾಪ ದೃಷ್ಟಿಯನ್ನು ತೊರೆಯಲಾರೆ' ಎನ್ನುತ್ತಾನೆ ಪಾಯಾಸಿ. ಆತ ತಾನೇ ಸ್ವತಃ ತನ್ನದು 'ಪಾಪ ದೃಷ್ಟಿ' ಎಂದು ಹೇಳಿಕೊಳ್ಳುವುದು ಆಶ್ಚರ್ಯಕರವಾಗಿದೆ. ತನ್ನ ಸ್ವಾಭಿಮಾನ ಉಳಿಸಿಕೊಳ್ಳಲು ಈ ದೃಷ್ಟಿ ಅಗತ್ಯವೆಂದು ಅವನ ನಂಬುಗೆ. ಕಸ್ಸಪನಿಂದ ಹಂದಿ ಸಾಕುವವ, ಜೂಜುಕೋರ, ಬಂಡಿವಾಹಕ, ನಾರು, ಬಟ್ಟೆ, ಬಂಗಾರ ಹೊರುವವರ ಕತೆ ಕೇಳಿದ ನಂತರ 'ಪೂಜ್ಯನಾದ ಕಸ್ಸಪನ ಚಾತುರ್ಯಪೂರಿತವಾದ ಉತ್ತರಗಳನ್ನು ಕೇಳಲು ಈ ರೀತಿ ವಿಚಿತ್ರವಾದ ಪ್ರಶ್ನೆಗಳನ್ನು ಕೇಳಿದೆ. ನಾನು ಅವನನ್ನು ವಿರೋಧಿಸುತ್ತಿರುವಂತೆ ಮಾತಾಡಿದೆ... ನಾನು ನಿನಗೆ ಶರಣು ಬಂದಿದ್ದೇನೆ' ಎಂದು ಪಾಯಾಸಿ ಹೇಳುವುದು ಅವನ ವಂಚಕ ವರ್ಗ ಸ್ವಭಾವಕ್ಕೆ ಅನುಗುಣವಾಗಿಯೇ ಇದೆ. ಶೋಷಕರಿಗೆ ಪ್ರಿಯವಾಗಿದ್ದ ಬೌದ್ಧ ಮತವನ್ನು ಈ ಇದ್ದುಳ್ಳವನಾದ ಪಾಯಾಸಿ ಒಪ್ಪುವುದು ಸಹಜವೇ. ಅವನು ಬೇಕೆಂದೇ ನಾಟಕವನ್ನಾಡಿದನೆಂದು ತಿಳಿದರೂ ವಾದಕ್ಕಾಗಿ ಆತ ಒಟ್ಟಾರೆ ಆ ಕಾಲದ ಜನತೆಯ ತತ್ವಜ್ಞಾನವನ್ನೇ ಬಳಸಿಕೊಳ್ಳುತ್ತಿರುವುದು ಖಂಡಿತ.

ಕಸ್ಸಪ ಹಿಂಸೆಯ ಬ್ರಾಹ್ಮಣರ ಯಜ್ಞದ ಬದಲಿ ಅವನಿಗೆ ಸವಣ ಬ್ರಾಹ್ಮಣ, ಬಡವರು, ದಾರಿಹೋಕರು, ಯಾಚಕರಿಗೆ ದಾನ ಮಾಡುವುದರ ಅಗತ್ಯ ತಿಳಿಹೇಳಿದಾಗ ಗಂಜಿ, ರೊಟ್ಟಿ ಚೂರು, ಒರಟು ಬಟ್ಟೆಗಳ ದಾನ ಮಾಡುವ ವ್ಯವಸ್ಥೆ ಮಾಡುತ್ತಾನೆ. ಮತ್ತು ಈ ಮೊದಲೇ ಹೇಳಿದಂತೆ ಒಲ್ಲದ ಮನಸ್ಸಿನಿಂದ ಅದನ್ನು ಮಾಡಿದ್ದರಿಂದ 'ಶೂನ್ಯವಾದ ಸೇರಿಸಕ ವಿಮಾನ'ದಲ್ಲಿ ಹುಟ್ಟುತ್ತಾನೆ.

ಬುದ್ಧನ ಕಾಲದಲ್ಲಿ ಜನತೆಯ ತತ್ವಜ್ಞಾನವಾಗಿದ್ದ ಲೋಕಾಯತವನ್ನು ಪಾಯಾಸಿಯಂಥ ರಾಜರೂ ತಮ್ಮ ಹಿತಕ್ಕೆ ಬಳಸಿಕೊಳ್ಳುತ್ತಿದ್ದರು. ಆದರೆ ಅದು ಅವನಂಥವರ ಬದ್ಧತೆ ಏನಾಗಿರಲಿಲ್ಲ. ಹಲವಾರು ಬ್ರಾಹ್ಮಣರು ಅದಕ್ಕೆ ಆಕರ್ಷಿತರಾಗಿದ್ದರೆಂಬ ಮಾತೂ ಕೂಡ ಅದರ ಗಾಢವಾದ ಪ್ರಭಾವಕ್ಕೆ ಸಾಕ್ಷಿ. ಕನ್ನಡ ನಾಡಿನ ಹಲವಾರು ಶಾಸನಗಳಲ್ಲಿ ಅಗ್ರಹಾರಗಳ ಪಠ್ಯಗಳಲ್ಲಿ ಲೋಕಾಯತವೂ ಸೇರಿತ್ತೆಂಬ ಉಲ್ಲೇಖಗಳಿವೆ.

ಎಸ್. ಎಸ್. ಹಿರೇಮಠ
ಪ್ರಾಂಶುಪಾಲರು, ಕೊಟ್ಟೂರೇಶ್ವರ ಕಾಲೇಜು, ಕೊಟ್ಟೂರು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ



# ನಮ್ಮ ಭಾಷೆ

**ಕ**ನ್ನಡ ನಮಗೆ ಪ್ರಿಯವಾದ ಭಾಷೆ. ನಮ್ಮನ್ನು ಒಗ್ಗೂಡಿಸಿರುವ ಭಾಷೆ. ಪ್ರಸ್ತುತ ಸಂದರ್ಭದಲ್ಲಿ ಕನ್ನಡಕ್ಕೆ ಎದುರಾಗುತ್ತಿರುವ ಸವಾಲುಗಳನ್ನು ದಾಟುವಂತೆ ಸಿದ್ಧಗೊಳಿಸಬೇಕು. ಇದು ಕನ್ನಡ ಬಲ್ಲವರ ಕರ್ತವ್ಯ. ಆಗ ಕನ್ನಡ ಜೀವಂತ ಸೆಲೆಯಾಗುತ್ತದೆ. ನಮ್ಮಲ್ಲಿ ಅನೇಕರಿಗೆ ಕನ್ನಡದ ಬಗ್ಗೆ ಕಳಕಳಿ ಇದೆ. ಆದರೆ ಆ ಕಳಕಳಿ ಎಷ್ಟರಮಟ್ಟಿಗೆ ಟೊಳ್ಳು, ಎಷ್ಟರಮಟ್ಟಿಗೆ ಗಟ್ಟಿ ಎಂದು ಆಲೋಚಿಸಬೇಕಾಗಿದೆ.

ಕನ್ನಡದ ಹಿನ್ನೆಲೆಯಲ್ಲಿ ಹೇಳುವುದಾದರೆ, ನಮ್ಮಲ್ಲಿ ಮೂರು ರೀತಿಯ ಜನರಿದ್ದಾರೆ. ಮೊದಲನೆಯವರು – ಕನ್ನಡದ ಹೆಸರಿನಲ್ಲಿ ವಸೂಲಿ ಮಾಡುತ್ತಾ, ಭಾವಚಿತ್ರದ ಪ್ರದರ್ಶನಗಳನ್ನು ನಾಜೂಕಾಗಿ ನೀಡುತ್ತಾ ಪ್ರಚಾರ ಗಿಟ್ಟಿಸುವ ಮಂದಿ. ಇವರಿಂದ ಕನ್ನಡ ಮುನ್ನಡೆಯುವ ಖಾತರಿಯಿಲ್ಲ, ಆದರೆ, ಅವರಂತೂ ಬೆಳೆಯುತ್ತಾರೆ. ಇವರು ಭಾಷಾ ಮಧುರ ಬಾಂಧವ್ಯಗಳ ಸೇತುವೆಗಳನ್ನು ನಿರ್ಮಿಸುವ ಬದಲು, ಅವುಗಳನ್ನು ನಾಶ ಮಾಡುತ್ತಾರೆ. ಮೇಲುನೋಟಕ್ಕೆ ಕನ್ನಡದ ಉದ್ಧಾರಕ್ಕೆ ತಾವೇ ಗುತ್ತಿಗೆ ಪಡೆದವರಂತೆ ನಡೆದುಕೊಳ್ಳುತ್ತಾರೆ. ಇಂತಹ ಜನರಿಂದ ಕನ್ನಡದ ಆತಂಕಗಳು ಹೆಚ್ಚಾಗುತ್ತವೆಯೇ ಹೊರತು ಕಡಿಮೆಯಾಗುವುದಿಲ್ಲ. ಇವರಿಗೆ ವಾಸ್ತವ ಪ್ರಜ್ಞೆ ಶೂನ್ಯ. ಸದಾ ಗತಕಾಲದ ವೈಭವದಲ್ಲಿ ಗುರುತಿಸಿಕೊಳ್ಳುತ್ತಾರೆ. ಕನ್ನಡಕ್ಕೆ ಎದುರಾಗುತ್ತಿರುವ ಸವಾಲುಗಳ ಬಗ್ಗೆ ಚಿಂತಿಸುವುದಿಲ್ಲ, ಅವರಿಗೆ ಬೇಕಾಗಿರುವುದು ಕನ್ನಡದ ಬಗ್ಗೆ ಭಾವಾವೇಶದಿಂದ ಭಜನೆ ಮಾಡುವುದು; ಕೂಟ ಸ್ಥಳಗಳಲ್ಲಿ ಧ್ವಜಸ್ತಂಭಗಳನ್ನು ನಿಲ್ಲಿಸುವುದು; ಕನ್ನಡ ದೇವತೆಯನ್ನು ಅಲಂಕರಿಸಿ, ಆಡಂಬರ-ಅಬ್ಬರಗಳಿಂದ ಮೆರೆಯುವುದು. ಇವುಗಳಿಂದ ಖಂಡಿತವಾಗಿ ಕನ್ನಡ ಮುನ್ನಡೆಯುವುದಿಲ್ಲ.

ಇನ್ನು ಎರಡನೆಯ ರೀತಿಯ ಮಂದಿ – ಇವರು ಜಾಣ ಅವಕಾಶವಾದಿಗಳು. ಕನ್ನಡದ ಸಂಕಷ್ಟಗಳು ಇವರಿಗೆ ಮುಖ್ಯವಾಗುವುದಿಲ್ಲ, ತಾವೇ ಮುಖ್ಯರಾಗುತ್ತಾರೆ. ಇವರು ಪ್ರಮುಖ ವೇದಿಕೆಗಳಲ್ಲಿ ಕನ್ನಡದ ಪ್ರತಿನಿಧಿಗಳಾಗಿ, ಅವಕಾಶವನ್ನು, ಪ್ರಚಾರವನ್ನು ಗಿಟ್ಟಿಸಿಕೊಳ್ಳುತ್ತಾರೆ. ಸುಂದರವಾಗಿ ಮಾತನಾಡಿ ಮಿಂಚುತ್ತಾರೆ. ಧಾರಾಳವಾಗಿ, ಸಲಹೆ ಸೂಚನೆಗಳ ಸುರಿಮಳೆ ಸುರಿಸುತ್ತಾರೆ. ಅಲ್ಲಿಗೆ ಮುಗಿಯಿತು. ಇವರ ಕನ್ನಡ ಕಾಳಜಿ. ಇವರಿಂದಲೂ ಕನ್ನಡ ಮುನ್ನಡೆಯುವುದಿಲ್ಲ.

ಇನ್ನು ಮೂರನೆಯ ರೀತಿಯ ಜನ – ಇವರು ಭಾಷಾಭಿಮಾನವನ್ನು ಬಂಡವಾಳ ಮಾಡಿಕೊಂಡವರಲ್ಲ. ಇವರು ಕನ್ನಡವನ್ನು ವೈಜ್ಞಾನಿಕ ಮನೋಧರ್ಮದಿಂದ, ಜನಪರ ದೃಷ್ಟಿಯಿಂದ ನೋಡುವವರು. ಇವರ ಸಂಖ್ಯೆ ಕಡಿಮೆ. ಒಂಟಿ ಸಲಗಗಳು. ಮಾಧ್ಯಮಗಳಿಂದ ದೂರವುಳಿದು ಸದ್ದುಗದ್ದಲವಿಲ್ಲದೆ ಕನ್ನಡದ ಹಿತಚಿಂತನೆ ನಡೆಸುತ್ತಾರೆ. ಇಂದಿನ ವಿದ್ಯುನ್ಮಾನ ಮಾಧ್ಯಮಗಳಿಗೆ, ಇಂದಿನ ಅಗತ್ಯಗಳಿಗೆ, ಕನ್ನಡ ಭಾಷೆಯನ್ನು ಒಗ್ಗಿಸುವ ಪ್ರಯತ್ನದಲ್ಲಿ ಸದಾ ಕ್ರಿಯಾಶೀಲರಾಗಿರುತ್ತಾರೆ. ಜಾಗತೀಕರಣದಿಂದ ಉಂಟಾಗಿರುವ ಸಂಕಷ್ಟ ಸ್ಥಿತಿಯಿಂದ ಕನ್ನಡವನ್ನು ಪಾರುಮಾಡಲು ಕಾರ್ಯನಿರತರಾಗಿರುತ್ತಾರೆ. ಇಂತಹವರ ಸಂಖ್ಯೆ ಹೆಚ್ಚಬೇಕು.

ಪ್ರಸ್ತುತ ಸಂದರ್ಭದಲ್ಲಿ ಕನ್ನಡದ ಇಕ್ಕಟ್ಟು-ಬಿಕ್ಕಟ್ಟುಗಳನ್ನು ಸರಿಯಾಗಿ ಗುರುತಿಸಿ, ಸೂಕ್ತ ಉತ್ತರಗಳನ್ನು ಕಂಡುಕೊಳ್ಳಬೇಕಾಗಿದೆ. ಕೇವಲ ರಾಜಕೀಯ ದೃಷ್ಟಿ ಉಳ್ಳವರು, ಅಲಂಕೃತ ಮುಖವಾಡಗಳನ್ನು ಧರಿಸಿದವರು, ಅವುಗಳಿಂದ ಹೊರಬರಬೇಕು. ಮೊದಲು ಶಾಲೆಗಳಲ್ಲಿ ಕನ್ನಡ ಸ್ಥಿತಿ-ಗತಿ ಸುಧಾರಿಸಬೇಕು. ನಮ್ಮ ಮಕ್ಕಳು A,B,C,D ಕಲಿಯುವ ಮೊದಲು ಅ,ಆ,ಇ,ಈ ಕಲಿಯುವಂತೆ ವ್ಯವಸ್ಥೆ ಬದಲಾಗಬೇಕು. ಮಕ್ಕಳಾಗಿದ್ದಾಗ ಕನ್ನಡವನ್ನು ಕಲಿಯದವರು, ಕನ್ನಡವನ್ನು ಪ್ರೀತಿಸದವರು, ದೊಡ್ಡವರಾದಾಗ ಸಾಧ್ಯವೆ? ಎಲ್ಲ ರೀತಿಯ ಶಾಲೆಗಳಲ್ಲಿ, ಕನ್ನಡ ಕಲಿಕೆ ಐಚ್ಛಿಕವಾಗಬಾರದು. ಅದು ಪ್ರೀತಿಯ ಕಡ್ಡಾಯವಾಗಬೇಕು. ವೈಜ್ಞಾನಿಕ ದೃಷ್ಟಿಕೋನದಿಂದ ಕಲಿಸಬೇಕು. ಇಂದು ಯುವಜನತೆ ಕನ್ನಡವನ್ನು ಕಲಿಯದಿದ್ದರೆ, ಪ್ರೀತಿಸದಿದ್ದರೆ ಕನ್ನಡ ಅಪಾಯದ, ಅವಸಾನದ ಹಾದಿಯಲ್ಲಿ ಸಾಗುತ್ತದೆ. ಈ ಕಟುಸತ್ಯ ಮನವರಿಕೆಯಾಗಬೇಕು. ಕನ್ನಡ ಭಾಷೆಯನ್ನು ಇಂದಿನ ಜಗತ್ತಿನ ಓಟಕ್ಕೆ ತಕ್ಕಂತೆ; ಇಂದಿನ ದಿನನಿತ್ಯದ ಅವಶ್ಯಕತೆಗಳಿಗೆ ತಕ್ಕಂತೆ; ಇಂದಿನ ಸಂವಹನಕ್ಕೆ ತಕ್ಕಂತೆ; ಕನ್ನಡವನ್ನು ಸದಾ ಸಿದ್ಧಗೊಳಿಸುತ್ತಿರಬೇಕು. ನಮ್ಮ ಪಾಲಿಗೆ, ನಮ್ಮ ಭಾಷೆ ಸರ್ವಸಮರ್ಥವಾಗಬೇಕು. ಕನ್ನಡ ಆರಾಧನೆಯ ವಸ್ತುವಲ್ಲ, ನಮ್ಮ ಮುನ್ನಡೆಯ ಬೆಳಕು.

*(ಕೃಪೆ: ಆಕಾಶವಾಣಿ)*

ಚಿ. ಶ್ರೀನಿವಾಸರಾಜು
೨೧(೮), ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ
ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

HOSATHU Kannada Monthly / August 2005 Rs. 12 RNI Regn. No. KARKAN/1999/614 REGD. CPMG / KA / BGE – 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna